ಶ್ರೀ ಶೇಷಾಚಲ ಗ್ರಂಥಮಾಲೆ, ಧಾರವಾಡ.

# ಕೃತಕ ಕೈಬೆರಳು

(ಪತ್ತೇದಾರಿ ಕಾದಂಬರಿ)



ಲೇ.

ಮುರಲಿ

××

ಮುದ್ರಕ ಮತ್ತು ಪ್ರಕಾಶಕ:

ಬಿ ಪಿ. ಕಾಳೆ,

ಶ್ರೀಶೇಷಾಚಲ ಪ್ರೆಸ್, ಮದಿಹಾಳ-ಧಾರವಾಡ

(೩ನೇ ಆವೃತ್ತಿ)

೧೯೪೮



ಬೆಲೆ ೨-೮-೦

# ಒಂದು ಮಾತು



ಪರೋಪಕಾರಾರ್ಥಮಿದಂ ಶರೀರಂ' ಎಂಬ ಶಾಸ್ತ್ರಾಜ್ಞೆಗನುಸರಿಸಿ ಶ್ರೀ ಶೇಷಾಚಲ ಗ್ರಂಥಮಾಲೆಯವರು ಮೂವತ್ತು ವರುಷಗಳಷ್ಟು ದೀರ್ಘ ಕಾಲದಿಂದಲೂ ಪರೋಪಕಾರಾರ್ಥವಾಗಿ ತಮ್ಮ ಶರೀರ ಸವೆಸುತ್ತಲಿದ್ದುದನ್ನು ಕನ್ನಡಿಗರೆಲ್ಲರೂ ಅರಿತ ಸಂಗತಿಯೇ ಆಗಿದೆ ಅವರು ತಮ್ಮ ಶಕ್ತಿಮೀರಿ ಜನ ಸೇವೆ, ಧರ್ಮಸೇವೆ, ದೇವಸೇವೆ ಮಾಡುತ್ತಲಿರುವದು ರಾಷ್ಟ್ರಹಿತದೃಷ್ಟಿ ಯಿಂದ ಶ್ರೀಶೇಷಾಚಲ ಮಹಾರಾಜರು ಹಾಕಿಕೊಟ್ಟ ನೀತಿನಿಯಮಗಳನ್ನು ಕೊಂಚವೂ ತಪ್ಪದಂತೆ ಆಚರಿಸುತ್ತಲಿರುವದು ಅತ್ಯಂತ ಭೂಷಣಾಸ್ಪದ ವೆಂದು ಬೇರ ಹೇಳಬೇಕಾಗಿಲ್ಲ ಆದರಲ್ಲಿಯೂ ತಮ್ಮ ಪಾರಮಾರ್ಥಿಕ ಧ್ಯೇಯ-ಸಾಧನೆಯಲ್ಲಿಯೇ ಕನ್ನಡ ನುಡಿಯ ಸೇವೆ ಮಾಡುತ್ತಲಿರುವದು, ಕನ್ನಡ ಓದುಗರಿಗೆ ಮನರಂಜನೆಯಾಗುವಂತೆ, ನೈತಿಕ, ಧಾರ್ಮಿಕ, ಐತಿ ಹಾಸಿಕ, ಸಾಮಾಜಿಕ ಕತೆ-ಕಾದಂಬರಿಗಳನ್ನು ಸಿದ್ಧಮಾಡಿ ಕೊಡುತ್ತಲಿರು ವುದು ಅವರ ವಿಶಾಲ ದೃಷ್ಟಿಯನ್ನೇ ತೋರುತ್ತಿದೆಯಲ್ಲದೆ ಅನ್ಯಥಾ ಇಲ್ಲ ಸಾಹಿತ್ಯಾಭಿರುಚಿಯು ಕರ್ನಾಟಕದಲ್ಲಿ ಇನ್ನೂ ಮೊಳೆಕೆಯಲ್ಲಿಯೇ ಇರುತ್ತದೆ ಆ ಕಾರಣವೇ ಅನೇಕ ಪತ್ರಿಕೆಗಳು ಸಹಾಯ ವಿಲ್ಲವೆ ಹಿಂದೆ ಬೀಳುತ್ತಲಿರು ವುವು. ಇಂತಹ ಆರ್ಥಿಕ ಮುಗ್ಗಟ್ಟಿನ ಸಮಯದಲ್ಲಿಯೂ ಶ್ರೀ ಶೇಷಾಚಲ ಗ್ರಂಥಮಾಲೆಯವರು ಮುಂದಡಿಯಿಡುತ್ತಲಿರುವದು ಅವರ ಧೈರ್ಯವನ್ನೂ ಶ್ರೀ ಶೇಷಾಚಲ ಸದ್ಗುರುಗಳಲ್ಲಿನ ಅಚಲ ಭಕ್ತಿಯನ್ನೂ ವ್ಯಕ್ತಪಡಿಸುತ್ತವೆ ಸ್ವಲ್ಪಮಪ್ಯಸ್ಯ ತ್ರಾಯತೆ ಮಹತೋ ಭಯಾತ್' ಎಂಬ ಭಗವದ್ವಚನ ದಂತೆ ಸನಾತನ ಧರ್ಮದ ಸಲುವಾಗಿ ಯತ್ನಿಸುತ್ತಿದ್ದ ಅವರಿಗೆ ಅಪಜಯವು ಎಂದೂ ತಟ್ಟದು

ಶ್ರೀ ಶೇಷಾಚಲ ಗ್ರಂಥಮಾಲೆಯವರು ತಮ್ಮ ನಾಡ ನುಡಿ ಸೇವೆ ಯಂತಹ ಉಚ್ಚಕಾರ್ಯದಲ್ಲಿ ತೀರ ಹೊಸಬನೂ, ಅನನುಭವಿಯೂ ಆದ ನನಗೆ ಅವಕಾಶ ಕಲ್ಪಿಸಿ ಕೊಟ್ಟದ್ದಕ್ಕೆ ನಾನು ಅವರ ಉಪಕಾರವನ್ನು ತೀರಿಸ ಲಸಮರ್ಥನಾಗಿರುವನು ನಾನು ಬರೆವ ಅಪಕ್ವ ಲೇಖಗಳಿಗೆ ಕನ್ನಡ ನುಡಿಗಾಗಿ ದುಡಿಯಲಿಷ್ಟ ತರುಣ, ಎಂಬ ಕನಿಕರದಿಂದ ಸಹಾಯವಿತ್ತಿ ದಕ್ಕೆ ನಾನು ಅವರಿಗೆ ಅತ್ಯಂತ ಕೃತಜ್ಞನಾಗಿರುವೆನು ನನ್ನ ತಬ್ಬುಗಾರ

ಸಬ್ಬಣ್ಣ ವೆಂಬ ಒಂದು ಪುಸ್ತಕವನ್ನು ಅವರು ಪ್ರಸಿದ್ಧಮಾಡಿರುವರು. ಆ ಸಮಯದಲ್ಲಿ ನನಗೆ ಅನುಕೂಲವಾಗದ್ದರಿಂದ ಅವರ ಆಭಾರಪ್ರದರ್ಶನ ಮಾಡಲಾಗಲಿಲ್ಲ. ಈ ಸಂಧಿ ಸಾಧಿಸಿ ಆ ನನ್ನ ತಪ್ಪಿಗಾಗಿ ನಾನು ಅವರ ಮತ್ತು ಓದುಗರ ಕ್ಷಮೆಯನ್ನು ಯಾಚಿಸುತ್ತೇನೆ ಶ್ರೀ ಶೇಷಾಚಲ ಗ್ರಂಥ ಮಾಲೆಯವರು, ಅದರಲ್ಲಿಯೂ ಶ್ರೀಮಾನ್ ಬಿ ಪಿ ಕಾಳೆಯವರೇ ನನ್ನ ಬರೆಹದ ಕಾರ್ಯಕ್ಕೆ ಉತ್ತೇಜನವಿತ್ತು, ನನ್ನಿಂದ ಬರೆಯಿಸುತ್ತಲಿರುವ ಮೂಲಕ, ನಾನು ಅವರಿಗೆ ಬಹಳ ಆಭಾರಿಯಾಗಿರುತ್ತೇನೆ

ಓದುಗ ಮಹಾಶಯರು ಈಗಾಗಲೆ ನನ್ನ ಬರೆಹಗಳನ್ನರಿತಿರುವರು ಅವುಗಳ ಗುಣಾವಗುಣಗಳನ್ನರಿಯುವ ಕಾರ್ಯವನ್ನು ಅವರಿಗೂ ವಿಮರ್ಶಕರಿಗೂ ಬಿಟ್ಟುಕೊಡುವೆನು. ಒಂದೇ ಮಾತು ಹೇಳಬಯಸುವದೇನಂದರೆ, ನಾನು ಮಾಡಬೇಕೆನು ವ ಕಾರ್ಯ ಅಪಾರವಾದುದಿದೆ. ಬರೆಯಲು ಪ್ರೇರಣೆಯಿತ್ತ ಪರಮಾತ್ಮನೇ ಅದನ್ನು ಪಾರುಗಾಣಿಸಲು ಸಮರ್ಥನಿರುವನು ಆದರೂ ಓದುಗ ಮಹಾಶಯರು ಯೋಗ್ಯ ಸಹಾಯವಿತ್ತರೆ, ನಾನು ಇನ್ನೂ ಒಳ್ಳೆಯ ಬರೆಹಗಳನ್ನು ಬರೆಯಲು ಸಮರ್ಥನಾಗುವೆನು, ಶ್ರೀ ಕಾಳೆಯವರು ಓದುಗರಿಗೆ ನೀಡಲು ಸಮರ್ಥರಾಗುವರು

ನನ್ನಂಥ ಇನ್ನೂ ಅನೇಕ ಹೊಸಬರನ್ನು ಈ ಕಾರ್ಯಕ್ಕೆ ತೊಡಗಿಸಲು ಶ್ರೀ ಶೇಷಾಚಲ ಗುರುವು ಶ್ರೀ ಕಾಳೆಯವರಿಗೆ ಶಕ್ತಿಯನ್ನೀಯಲೆಂದು ಹಾರೈಸುವೆನು.

ಮುರಲಿ.

---

—ಪರಿವಿಡಿ—



ಕುಸುಮ ಪುರದ ಹೊರಮಗ್ಗಲಿನ ಕೊಳದ ಮೆಟ್ಟಿಲೊಂದರ ಮೇಲೆ ಒಬ್ಬ ತರುಣನು ಚಿಂತಾಕ್ರಾಂತನಾಗಿ ಕುಳಿತಿದ್ದನು. (ಪುಟ ೬)



ಕಮಲಿಸಿ ೧ನೇ ವರ್ಗದ ವೇಟಿಂಗ ರೂಮಿನ ಬಾಗಿಲಲ್ಲಿ ನಿಂತು ಒಂದು ಸಲ ಸುತ್ತಲೂ ನೋಡಿದಳು ಮುರಾರಿ ಬಾಗಿಲ ಒಳಿಯಲ್ಲಿ ನಿದ್ದೆ ಹತ್ತಿದವರಂತೆ ಬಿದ್ದುಕೊಂಡು ಗುರು ಗುರು ಮಾಡಹತ್ತಿದ್ದನು (ಪುಟ ೭೫)

# ಕೃತಕ ಕೈಬೆರಳು.



## ದೈವೀ ಘಟನೆ

ದೇವಾ! ಇನ್ನು ನನ್ನ ಜೀವದಾಶೆ ಕೊನೆಗಂಡಂತಾಯಿತೆ? ಆತ್ಮ ಘಾತದ ಹೊರತು ಅನ್ಯ ಮಾರ್ಗವೇ ಇಲ್ಲದಾಯಿತೆ? ನನಗೆ ಏನೂ ಸಂಬಂಧ ವಿಲ್ಲದ-ಕನಸ ಮನಸ್ಸಿನಲ್ಲಿ ಕೂಡಾ ಯೋಚನೆಯಿಲ್ಲದ ಕಲ್ಪನೆಗೆ ಕೂಡಾ ಸಿಲುಕದ-ಭಯಾನಕ ಅಪರಾಧಕ್ಕೆ ನಾನು ಗುರಿಯಾಗಬೇಕೆಂದರೆ, ನನ್ನ ದುರ್ದೈವವು ಅದೆಷ್ಟು ಬಲವತ್ತರವಾಗಿರಬೇಕು? ನನ್ನನ್ನು ಅಂತಃಕರಣ ದಿಂದ ನೋಡುತ್ತಲಿದ್ದ ನನ್ನ ಸಾಕು ತಂದೆಯನ್ನೇ ನಾನು ಕೊಲೆಮಾಡು ವೆನೇ. ಹಾಯ್! ಹಾಯ್!! ದೇವಾ! ಎಷ್ಟು ಕಠೋರತನವಿದು? ಆದರೆ-ಆದರೆ ಇದರಲ್ಲಿ ಅವರದಾದರೂ ಏನು ತಪ್ಪು? ಅಲ್ಲಿಯ ವಿಶ್ವಾಸುಗನೆಂದರೆ ನಾನೇ. ನನ್ನನ್ನು ಬಿಡು ಅನ್ಯರು ಅಲ್ಲಿ ಬರುವ ಸಂಭವವೇ ಇಲ್ಲ ಆಗಲಿ ದೇವಾ, ನನ್ನ ಅಂತವೇ ಆಗಬೇಕೆಂದು ನಿನ್ನ ಇಚ್ಛೆಯಿದ್ದರೆ ನಾನದಕ್ಕೆ ಹೊರತು ಹೇಗಾ ಗುವೆನು? ಇನ್ನು ಈ ತುಂಬಿದ ಕೊಳವೇ ನನ್ನ ಆಶ್ರಯಸ್ಥಾನ

ಮಳೆಗಾಲದ ಕೃಷ್ಣಪಕ್ಷದ ಮಧ್ಯರಾತ್ರಿಯ ಸಮಯ. ಆಗಿನ ನಿಸ ರ್ಗದ ಭೀಕರ ರೂಪವ ನೋಡಿದರೆ ಹಗಲಿನಲ್ಲಿ ಅತೀವ ಮನೋಹರವಾಗಿ ತೋರುವ ನಿಸರ್ಗವು ಇದೇಯೇ? ಎಂದು ಶಂಕಿಸಬೇಕಾಗುವುದು ವಿವಿಧ ಬಣ್ಣಗಳ ಸುಂದರ ಉಡುಪು ತೊಡುಪುಗಳಿಂದ ಭೂಷಿತಳಾಗಿ, ನೋಟಕರ ಕಣ್ಮನಗಳನ್ನು ತಣಿಸುವ ಆ ಅತ್ಯಂತ ಮನೋಹರೆ ನಿಸರ್ಗ ರಮಣಿಯೇ ಈ ಸಮಯದಲ್ಲಿ ತನ್ನ ಆ ಚಂದವಾದ ಉಡುಪು ಕಳಚಿಟ್ಟು, ಕರೀವೇಷದಿಂದ ಜನರ ಹೃದಯದಲ್ಲಿನ ಆಶಾಕಿರಣಗಳನ್ನೆಲ್ಲ ನಶಿಸಿ, ಅವರು ಮುಂದಿನ ಮಾರ್ಗವನ್ನರಿಯದೆ ಮುಗ್ಗರಿಸುವಂತೆ ಮಾಡುತ್ತಾಳೆ ಚಂಡಕಿರಣನಾದ ದಿನಮಣಿಯ ಚಂಡಪ್ರಕಾಶದ ಸಹಾಯ ನಮಗಿರಲು, ಸೃಷ್ಟಿದೇವಿಯು ನಮ್ಮ ಮನರಂಜನೆ ಮಾಡಲು ನಮಿಸುತ್ತಾಳೆ—ನರ್ತಿಸುತ್ತಾಳೆ ಅದೇ ಆ ಪ್ರಭಾಕರನನ್ನು ಕರೆದುಕೊಂಡು ಪ್ರಭಾಹೀನರು ನಾವಾಗಲು, ಅದೇ ಸೃಷ್ಟಿ ದೇವತೆಯು ಕಪ್ಪುವಸ್ತ್ರಾವರಣದಿಂದ ನಮ್ಮನ್ನು ಬೆದರಿಸುತ್ತಾಳೆ— ಭಯಪಡಿಸುತ್ತಾಳೆ—ದುಃಖಕ್ಕೀಡು ಮಾಡುತ್ತಾಳೆ ಅಂತಯೇ ದಾಸರೂ

ಶಕ್ತನಾದರೆ ನಂಟರೆಲ್ಲ ಹಿತರು! ಅಶಕ್ತನಾದರೆ ಆಪ್ತಜನರೇ ವೈರಿಗಳು! ಎಂದು ಅಂದಿರುವರು

ಮಳೆಯು ಸಿಡುಕಲ ಹನಿಗಳಿಂದ ದಾರಿಗಳು ಮೊದಲೇ ಸೆನದುಹೋಗಿರಲು, ಸುಳಿಗಾಳಿ ಅವರನ್ನು ಸೆಟೆಯುವಂತೆ ಮಾಡುತ್ತಲಿದ್ದಿತು ಚಳಿಗಾಳಿಯು ಮುಸುಕಿಟ್ಟು ಮಲಗಿದವರ ಮುಸುಕಿನಲ್ಲಿ ಎಲ್ಲಾದರೂ ಕೊಂಚ ದಾರಿ ಮಾಡಿಕೊಂಡು ಒಳಹೊಕ್ಕು - ನೋಡಿ ನನ್ನ ತಂಪು ಹೇಗಿದೆ ಎಂದು ಹೆಮ್ಮೆಯಿಂದ ಕೇಳಲು, ಬೇಡ ಮಹಾರಾಯಾ, ನಿನ್ನ ಸಂಗತಿಯೇ ಬೇಡ ಎಂದು ಮತ್ತೆ ಮತ್ತೆ ಭದ್ರವಾಗಿ ಮುಸುಕು ಹಾಕುವರು ಹೀಗೆ ತಂಗಾಳಿ ಎಲ್ಲಡೆಯಲ್ಲೂ ತನ್ನ ಪ್ರಭಾವ ಬೀರುತ್ತಲಿದೆ ಕೃಷ್ಣಪಕ್ಷದ ಕತ್ತಲೆಯನ್ನು ಕಾರ್ಮೋಡಗಳು ಇನ್ನೂ ವೃಧಪಡಿಸುತ್ತಲಿವೆ ಮಳೆಯಲ್ಲಿ ನೆನೆದು ತಂಡಿಯಿಂದ ನಡುಗುತ್ತ ನಡೆಯುವ ದಾರಿಗರ ಅವಸ್ಥೆ ಅವರೇ ಅರಿಯಬೇಕು ಹೇಗಾದರೂ ಮನೆ ಸೇರಿದರೆ ಸಾಕು, ಎಂದು ಬೇಗ ಬೇಗನೆ ಹಜ್ಜೆ ಹಾಕುವಷ್ಟರಲ್ಲಿಯೇ ಗಾಳಿ ಒಮ್ಮೆ ಹೊಡೆಯಲು, ಅಯ್ಯೋ ಚಳಿಯೇ! ಅನ್ನುತ್ತ ತಡವರಿಸುತ್ತ ಮುಂದಡಿಯಿಡುವಷ್ಟರಲ್ಲಿಯೇ ಮುಂದ ರೊಜ್ಜು. ಕಾರ್ಗತ್ತಲೆಯಿಂದ ರೊಜ್ಜು ನೀರು, ನೆಲ ಏನೂ ತಿಳಿಯದೆ ಮೆಲ್ಲನೆ ಕಾಲಿಡಲು ಕಾಲು ಒಮ್ಮೆಲೆ ಸೊಂಟದ ವರೆಗೂ ಇಳಿಯುವದು

ಇಂತಹ ಸಮಯದಲ್ಲಿ ಕುಸುಮಪುರದ ಹೊರವುಗ್ಗಲಿನ ಕೊಳದ ಮೆಟ್ಟಿಲೊಂದರ ಮೇಲೆ ಒಬ್ಬ ತರುಣನು ಕುಳಿತಿದ್ದನು ಜಗತ್ತನ್ನೇ ನಡುಗಿಸುತ್ತಲಿದ್ದ ಮಳೆಗಾಲದ ಚಳಿಯು ಅವನಿಗೆ ಏನೂ ಮಾಡದಂತಾಗಿದ್ದಿತು. ಇಷ್ಟು ತಂಡಿಯಿದ್ದರೂ ಅದರಿಂದ ಅವನಿಗೆ ಅಲ್ಪವಾದರೂ ಶೀತವಾಗುವಂತಿರಲಿಲ್ಲ ಅವನ ಮನಸ್ತಾಪವು ವಡವಾನಲಕ್ಕೆ ಮೀರಿದ್ದಿತು ಅಂತರ್ದಾಹವು ಜ್ವಾಲಾಮುಖಿ ಪರ್ವತದ ಲಾವಾರಸಕ್ಕಿಂತಲೂ ಮಿಗಿಲಾಗಿದ್ದಿತು ಕುದಿಯುವ ಎಸರು ಅವನ ಹೃದಯದ ತಳಮಳಕ್ಕೆ ಸರಿಹೋಗುವಂತಿರಲಿಲ್ಲ. ಅವನ ದುಃಖಾಗ್ನಿಯು ಅತ್ಯಂತ ಪ್ರಖರವಾಗಿದ್ದಿತು. ಅದರಿಂದ ಅವನು ನಿಜವಾಗಿಯೂ ಸುಟ್ಟು ಹೋಗುತಲಿದ್ದನು ಆ ಪ್ರಖರಾಗ್ನಿಯಿಂದ ಅವನ ಭವಿಷ್ಯಜ್ಜೀವನವೇ ಭಸ್ಮವಾಗಿದ್ದಿತು. ಜೀವನಮಂದಿರವು ನೆಲಸಮವಾಗಿದ್ದಿತು ಹೀಗೆ ಅವನ ಭಾವೀ ಸೌಖ್ಯಸದನವೆಲ್ಲವೂ ದುಃಖಾಗ್ನಿಯಿಂದ ದಗ್ಧವಾಗಿ ಹೋಗಲು, ಕೊಳದಲ್ಲಿ ಧುಮುಕಿಯೇ ಆ ದಾಹವನ್ನು ಶಾಂತಗೊಳಿಸಬೇಕೆಂದು ಆತನು ಕೊಳಕ್ಕೆ ಬಂದಿದ್ದನು, ಆದರೆ ಒಮ್ಮೆಲೆ ಧುಮುಕಲಾಗದೆ ತಳಮಳಿಸುತ್ತ ಕುಳಿತಿದ್ದನು.

ಮಹಾಶಯ, ನೀವೇ ನೋಡಿ, ೨೨-೨೩ ವರುಷಗಳ ತರುಣ ಸಂಸಾರ ಸುಖವನ್ನನುಭವಿಸುವ ಸಾಧನಗಳೆಲ್ಲವೂ ಆಗತಾನೆ ದೊರೆಕಿದ್ದವು ಅವು ಗಳಲ್ಲಿನ ಅಮೃತತುಲ್ಯ ಮಧುರ ಆಸ್ವಾದ ಅನುಭವಿಸಲಾರಂಭಿಸಿರುವಾಗಲೇ ಎಂತಹ ವಿಘ್ನ ಭಯಂಕರ, ಅಕಲ್ಪಿತ, ಪರ್ವತಪ್ರಾಯ ವಿಘ್ನವೊಂದು ಎದುರು ಬಂದು ಎಲ್ಲವನ್ನೂ ನಷ್ಟಗೊಳಿಸಿತು. ಆತ ಒಳ್ಳೇ ನಡತೆಯುಳ್ಳ ತನ್ನ ಮೃದು ಸ್ವಭಾವದಿಂದ ಎಲ್ಲರಿಗೂ ಬೇಕಾಗಿದ್ದನು ಅವನ ಒಡೆಯನಂತೂ ಅವನನ್ನು ತನ್ನ ಮಗನೆಂದೇ ತಿಳಿದಿದ್ದನು ಹೀಗಿರಲು, ದುರುಳ ವಿಧಿಯು ಬೇರೆ ನೋಟವನ್ನೇ ತಂದಿತ್ತನು ಆತ್ಮಹತ್ಯೆಯಂತಹ ದುರ್ಧರ ಪ್ರಸಂಗಕ್ಕೆ ತಂದ ನಿಲ್ಲಿಸಿದ್ದನು ಆತ್ಮಹತ್ಯೆ! ಅತ್ಯಂತ ಭೀಕರ ಪ್ರಸಂಗವೇ ಸರಿ ಆದರೆ ಮಾಡುವದೇನು? ಜೀವನದ ಒಂದೊಂದೇ ಕ್ಷಣವು ಅವನನ್ನು ಅತೀವ ಕಷ್ಟಕರ ಅವಸ್ಥೆಗೆಳೆದೊಯ್ಯುತಲಿದ್ದಿತು. ಮುಂದಿನ ಭಯಾನಕ ನೋಟ ಗಳನ್ನು ನೆನೆನೆನೆದು ಅವನು ಹಣ್ಣಾಗಿದ್ದನು ಎಷ್ಟು ವಿಚಾರಿಸಿದರೂ ಗಲ್ಲಿನ ಹೊರತು ಬೇರೆ ಅವಸ್ಥೆ ಸಿಕ್ಕಲಾರದೆಂದೇ ಅವನಿಗೆ ಮನವರಿಕೆ ಯಾಗಿದ್ದಿತು ನೋಡಿದತ್ತೆಲ್ಲ ಕಗ್ಗತ್ತಲೆಯೇ ಕಾಣುತ್ತಲಿದ್ದಿತಲ್ಲದೆ, ಒಂದಾ ದರೂ ಆಶಾಕಿರಣ ಕಾಣಲಿಲ್ಲ. ಅವನು ತೀರಾ ಹತಾಶನಾಗಿ-ಬೇವಿಗಿಂತಲೂ ಕಡೆಯಾಗೆಣಿಸಿ ಆತ್ಮಹತ್ಯೆಕ್ಕುದ್ಯುಕ್ತನಾಗಿದ್ದನು ಕೊಳದಿಂದ ಮರಳಿ ಊರೊಳಗೆ ಹೋಗುವದು ಶಕ್ಯವೇ ಇರಲಿಲ್ಲವೆಂದು ಅವನು ಅರಿತಿದ್ದನು, ಮತ್ತು ಕೊಳದಲ್ಲಿ ಆತ್ಮಾರ್ಪಣೆ ಮಾಡಲು ಪೂರ್ಣನಿರ್ಧರಿಸಿದ್ದನು ಮೃತ್ಯು ದೇವತೆಗೆ ಮಾಲೆ ಹಾಕಲು ಅವನು ಸಿದ್ಧನಾಗಿದ್ದನು ಜನ್ಮಭೂಮಿಯ ಕೊನೆಯ ದರುಶನ ತೆಗೆದುಕೊಳ್ಳಲೆಂದೂ—-ಜಗನ್ನಾಯಕನ ಪ್ರಾರ್ಥನೆ ಯನ್ನು ಕೊನೆಯ ಸಲ ಮಾಡಲೆಂದೂ ಕೊಂಚ ತಡೆದಿದ್ದನು

ಆಯಿತು ಅವನ ಜೀವನದ ಇತಿಕರ್ತವ್ಯವು ನೆರವೇರಿತು ಕೊನೆಯ ದೆಂದು ತಿಳಿದಿದ್ದ ದೇವದೇವನ ಪ್ರಾರ್ಥನೆಯೂ ಕೊನೆಗೊಂಡಿತು ದೇವಾ! ಇದೋ, ನಿನ್ನ ಪಾದಸನ್ನಿಧಿಗೆ ಸೇರಬೇಕೆಂದು ಬರುತ್ತಿರುವೆ, ಎಂದು ನುಡಿದು ಎದ್ದುನಿಂತನು

ಹಾಂ. ಅವಿಚಾರಿ ತರುಣಾ, ದುಡುಕಬೇಡ ವಿವೇಕಹೀನರಂತೆ ಆತ್ಮಘಾತಕ್ಕೆ ಪ್ರವೃತ್ತನಾಗಬೇಡ ಕೊಂಚ ತಡೆ

ತರುಣನು ಗಂಭೀರ ಮುಖದಿಂದ ಕತ್ತಲೆಯನ್ನೇ ದೃಷ್ಟಿಸಿ ನೋಡ ಹತ್ತಿದನು ಅಭೇದ್ಯವಾದ ಕತ್ತಲೆಯನ್ನು ಭೇದಿಸಿ ಬಂದ ಆ ಶಬ್ದಗಳ ಉತ್ಪಾದಕರಾರು? ಎಂಬ ಕುತೂಹಲವುಂಟಾಯಿತು. ತಾನು ಪ್ರಾಣಾಪಾಯ

ದಿಂದ ಪಾರುಗಾಣಬಹುದೆಂಬ ಆಶೆ ಜನಿಸಿತು. ಕೊಂಚ ಒಂದೆರಡು ಕ್ಷಣ
ತಡೆ ಎಂದು ಹೇಳಿದವರ ನಿರೀಕ್ಷಣೆ ಮಾಡುತ ನಿಂತನು. ಆದರೆ ಮರು
ಕ್ಷಣವೇ ಭೀತಿ ಆವರಿಸಿಕೊಂಡಿತು. ಕೊಲೆ ಮಾಡಿದುದಲ್ಲದೆ ಆತ್ಮಹತ್ಯಕ್ಕೆ
ಪ್ರವೃತ್ತನಾದ ಅಪವಾದವೂ ತನ್ನ ಮೇಲೆ ಬರಬಹುದೆಂದು ಭಯಪಟ್ಟನು.
ಕೊಲೆಯ ಅಪರಾಧದಿಂದ ಉಳಿಯುವದು ಅಶಕ್ಯವೇ ಎಂದು ನಂಬಿಗ ಮಾ
ಗಿದ್ದಿತು. ಯಾರು ಬಂದರೂ ತನ್ನದು ಮರಣದ ಹೊರತು ಬೇರೆ ದಾರಿಯೇ
ಇಲ್ಲವೆಂದು ತಿಳಿದು, ದುರುಳ ವಿಧಿಯೇ! ಇಲ್ಲಿಯೂ ವಿಘ್ನವೇ ಎಂದ.
ಮಿಡಿದು, ಆವೇಶದಿಂದ ಧುಮುಕಿಯೇ ಬಿಟ್ಟನು!

ಹುಂ, ಮುರಾರಿ, ಯೋಚಿಸಲು ಅವಕಾಶವಿಲ್ಲ. ಅದೋ, ಅಲ್ಲ
ನೀರು ಚಲಿಸುತ್ತಿದೆ. ಅಲ್ಲಿಯೇ ಬಿದ್ದಿರಬೇಕು. ಹುಂ ಬೇಗ

ಇದೋ, ಸುಬ್ಬಣ್ಣವರೇ ಹಾರಿದೆ.

ಮುರಾರಿ ಉಡುಪು ಸಹಿತವಾಗಿ ಹಾರಿದನು. ಸುಬ್ಬಣ್ಣವರು ತಮ್ಮ
ಬ್ಯಾಟರಿ ಹಿಡಿದು ಅತ್ತಲೇ ನೋಡುತ್ತಾ ನಿಂತರು. ಮುರಾರಿ ಜಿಗಿದವನು
ಗುಳ್ಳೆಯೇಳುವ ಸ್ಥಳಕ್ಕೆ ಹೋಗಿ ಮುಳುಗಿದನು. ಮುಳುಗಿದವನೇ ಆ
ತರುಣನ ಕ್ರಾಪು ಹಿಡಿದು ಎಳೆತಂದನು. ದಂಡೆಯ ಸಮೀಪಕ್ಕೆ ಬರುತ್ತಲೇ
ಸುಬ್ಬಣ್ಣವರು ಕೈಕೊಟ್ಟು ಕರೆದುಕೊಂಡರು. ಮುರಾರಿ ಆ ತರುಣನನ್ನು
ಹೊತ್ತು ದಂಡೆಯ ಮೇಲೆ ಹಾಕಿದನು.

ಸುಬ್ಬಣ್ಣವರೇ, ಈಗ ಹೇಗೆ ಮಾಡಬೇಕು?

ಈಗಲೆ ಮುಳುಗಿರುವನು. ದುಃಖದಿಂದ ಮನನೊಂದ ಕಾರಣ
ನೀರಿನಾಘಾತದಿಂದ ಮೂರ್ಛಿತನಾಗಿರುವ. ಊರ ಸಮೀಪದಲ್ಲಿಯೇ ಇರು
ತ್ತೇವೆ. ನಮ್ಮ ಬೀಡಾರಕ್ಕೆ ಒಯ್ದು ಉಪಚರಿಸಬಹುದು.

ಇಲ್ಲಿಯೇ ಸದ್ಯ ಏನಾದರೂ ಮಾಡಬಹುದಲ್ಲವೆ?

ಮಾಡಬಹುದು, ಆದರೆ ಚಳಿ ಬಹಳವಾಗಿದೆ. ಇಲ್ಲಿ ಒಣನೆಲವೂ ಇಲ್ಲ.
ಇಲ್ಲಿ ಇವನನ್ನಿರಗೊಡುವದು ಅಪಾಯಕರವು. ಆದುದರಿಂದ ನಾವು ಬೇಗನೆ
ಮನೆಗೆ ಹೋಗುವದೇ ಲೇಸು.

ಒಡನೆಯೇ ಮುರಾರಿ ಅವನನ್ನು ಹೊತ್ತನು. ಸುಬ್ಬಣ್ಣವರೂ
ಸಹಾಯ ಮಾಡಿದರು. ಇಬ್ಬರೂ ರೊಜ್ಜಿನ ದಾರಿಯಲ್ಲಿ ಮನೆಯತ್ತ ಹೊರ
ಟರು. ಇಬ್ಬರ ಮನಸ್ಸಿನಲ್ಲಿಯೂ ಒಂದೇ ವಿಚಾರ ಮನೆಮಾಡಿದ್ದಿತು.
ಈ 'ಣನಾರಾಗಿರಬಹುದು?' ಆತ್ಮಹತ್ಯಕ್ಕೆ ಕೈಹಾಕಲು ಕಾರಣವೇ
ನಿರಬೇಕು? ಆದರೆ ಅವುಗಳಿಗೆ ಉತ್ತರವನ್ನಾರು ಕೊಡಬೇಕು? ಆ ತರುಣ

ನನ್ನೇ ಕೇಳದ ಹೊರತು ತಿಳಿಯುವಂತಿರಲಿಲ್ಲ. ಆದರೆ ಆಗ ಆ ತರುಣನ ವೈಪರೀತ್ಯ ಪ್ರಜ್ಞೆಯೇ ಇರಲಿಲ್ಲ. ಅವರು ಶಂಕಾಕುಲರಾಗಿ ಹೊರಟಿದ್ದರು.

ಅಲ್ಪಾವಕಾಶದಲ್ಲಿಯೇ ಸುಬ್ಬಣ್ಣವರ ಬೀಡಾರಕ್ಕೆ ತಲುಪಿದರು ಒಡನೆಯೇ ಮುರಾರಿ ಆ ತರುಣನನ್ನು ನೆಲದ ಮೇಲೆ ಮಲಗಿಸಿದನು ಸುಬ್ಬಣ್ಣವರು ಎದೆಗೆ ಕಿವಿ ಹಚ್ಚಿ ಕೈಹಿಡಿದು ನೋಡಿದರು. ಮುರಾರಿಯು ಅರಿವೆ ಬದಲು ಮಾಡಿದನು

ಮುರಾರೀ, ಮುಳುಗಿದ ಅಲ್ಪಾವಕಾಶದಲ್ಲಿಯೇ ನಾವು ಹೊರದೆಗೆದ ಕಾರಣ ನೀರು ಕುಡಿದಿಲ್ಲ ಮೊದಲು ಇವನಿಗ ಒಣ ಅರಿವೆ ಹಾಕು, ಮತ್ತು ಬೇಗನೆ ಬೆಂಕಿ ಹೊತ್ತಿಸು. ಇವನ ಕೈಕಾಲು-ಎದೆಗಳಿಗೆ ಕಾವು ಕೊಡಬೇಕು

ಮುರಾರಿ ಹೇಗಾದರೂ ಈ ದುರ್ದೈವೀ ತರುಣ ಬದುಕಿದರೆ ಸಾಕು, ಎಂಬ ಭಾವದಿಂದ ಸುಬ್ಬಣ್ಣವರ ಆಜ್ಞೆಯಂತೆ ವರ್ತಿಸುತ್ತಲಿದ್ದನು ಕೊಳದಿಂದ ಮನೆಯ ವರೆಗೆ ಬಂದು ಅವನ ಶುಶ್ರೂಷೆಗಾರಂಭವಾಗುವ ವರೆಗೆ ಮುರಾರಿ ಆ ತರುಣನ ಬಗ್ಗೆ ಒಂದು ಕಲ್ಪನೆ ಕಟ್ಟಿದ್ದನು ಅದಕ್ಕೆ ಕಾರಣ ವಾದವೂ ಇದ್ದಿತು ಕೊಳವಲ್ಲಿ ಹಾರಿದ ಆ ತರುಣನ ವಯಸ್ಸು ೨೨-೨೩ ಇದ್ದಿತು ತಲೆಯಲ್ಲಿ ಕ್ರಾಪು ಇದ್ದಿತು ಅರಿವೆಗಳೂ ಸ್ವಚ್ಛವಾಗಿದ್ದವು ಸುಶಿಕ್ಷಿತ ತರುಣನಂತೆ ಜೇಬಿನಲ್ಲಿ ಪೆನ್ಸಿಲು-ಹಾಳೆಗಳಿದ್ದವು ಆ ಎಲ್ಲ ಸಾಧನಗಳಿಂದ ಅವನು ಒಬ್ಬ ಸುಶಿಕ್ಷಿತ ತರುಣನಿರವನೆಂದು ಮುರಾರಿ ತರ್ಕಿಸಿದನು ಸುಶಿಕ್ಷಿತ ತರುಣರಿಗೆ ಆತ್ಮಹತ್ಯೆಗೆ ಕಾರಣವಾಗುವಂತಹದು ನಿರುದ್ಯೋಗ ಅನೇಕ ಸುಶಿಕ್ಷಿತ ನಿರುದ್ಯೋಗಿ ತರುಣರು ಆತ್ಮಹತ್ಯೆ ಮಾಡಿಕೊಂಡುದನ್ನು ಆತ ಕೇಳಿದ್ದನು ಅಂತಹದೇ ಒಂದು ಸಂದರ್ಭವಿರಬೇಕೆಂದು ಅವನು ಯೋಚಿಸಿದನು ಅಂತೆಯೇ ಅವನು ಆ ತರುಣನು ಬದುಕಬೇಕೆಂದು ಬಲವಾಗಿ ಇಚ್ಛಿಸುತ್ತಲಿದ್ದನು ಏಕೆಂದರೆ, ಅವನು ಸುಬ್ಬಣ್ಣವರ ಆಶ್ರಯಕ್ಕೆ ಬಂದಿದ್ದನು ಸುಬ್ಬಣ್ಣವರ ಬಡವರಿಗೆ ಆಶ್ರಯ ಸ್ಥಾನವೇ ಆಗಿದ್ದರು. ದೇಶದಲ್ಲಿ ವಾಸವಾಗಿದ್ದ ಎಲ್ಲ ತರುಣರನ್ನೂ ಅವರು ಅನ್ನಕ್ಕೆ ಹಚ್ಚದಿದ್ದರೂ, ಹಲಕೆಲವರನ್ನಾದರೂ ಹಚ್ಚುವ ಯೋಗ್ಯತೆಯಿದ್ದಿತಲ್ಲದೆ, ಅಲ್ಪ ಸ್ವಲ್ಪ ತರುಣರಿಗೆ ಆ ಮೊದಲೇ ಜೀವನಮಾರ್ಗ ಕಲ್ಪಿಸಿ ಕೊಟ್ಟಿದ್ದರವರು. ಬಹಳ ಸ್ಥಳಗಳ ಅಧಿಕಾರಿಗಳಲ್ಲಿ ಅವರಿಗೆ ಆದರವಿದ್ದಿತು ಅವರ ಮಾತು ಬಹಳ ಸ್ಥಳಗಳಲ್ಲಿ ಮನ್ನಣೆ ಹೊಂದುತ್ತಲಿದ್ದಿತು ಒಂದೊಂದು ಸಲ ತಮ್ಮ ಕೈಯಿಂದಾದರೂ ಹಣಕೊಟ್ಟು ಉದ್ಯೋಗಕ್ಕೆ ಹಚ್ಚುತ್ತಲಿದ್ದರು

ಆದುದರಿಂದ ಮುರಾರ್ರಿ ಆ ಬಡ ತರುಣನು ಗೊತ್ತಿಗೆ ಹತ್ತುವನೆಂಬ ಯೋಚನೆಯಿಂದ ಸಂತೋಷಗೊಂಡು ಅವನನ್ನು ಪಚರಿಸತೊಡಗಿದ್ದನು

ಮುರಾರಿಯು ವಿಚಾರಚಕ್ರ ತಿರುಗುತ್ತಲಿರುವಾಗಲೇ ಆ ತರುಣನ ಮೈಮೇಲೆ ಪ್ರಜ್ಞೆ ಬಂದಿತು ಅವನು ಮೆಲ್ಲನೆ ಕಣ್ತೆರೆದು ನೋಡಿದನು ಒಮ್ಮೆಲೆ ಎದ್ದು ಕುಳಿತು ಗಾಬರಿಯು ಮ ದ್ರಯಿಂದ— ನಾನೆಲ್ಲಿರುವೆನು? ಎಂದು ನಡುಗುವ ಧ್ವನಿಯಲ್ಲಿ ಕೇಳಿದನು

ಸುಬ್ಬಣ್ಣವರು ಇಂತಹ ಅನೇಕ ಪ್ರಸಂಗಗಳಲ್ಲಿ ನುತವರು ಆ ತರುಣನ ಮನೋಭಾವನೆಗಳನ್ನೆಲ್ಲ ಗ್ರಹಿಸಿದರು ಅವರು ಮೃದುಸ್ವರದಲ್ಲಿ: ನಿನ್ನ ಹಿತಚಿಂತಕರ ಬಳಿಯಲ್ಲ ಇರುವೆ ಯಾವುದಕ್ಕೂ ಯೋಚಿಸಬೇಡ, ಎಂದು ನುಡಿದರು

ನಾನು ಇಲ್ಲಿ ಹೇಗೆ ಬಂದೆನು? ತರುಣನು ಶಂಕೆಯಿಂದ ಪ್ರಶ್ನೆ ಮಾಡಿದನು ನೀನು ಕೊಳದಲ್ಲಿ

ಸುಬ್ಬಣ್ಣವರು ಮುಂದಿನ ವಿಷಯವನ್ನು ವಿವರಿಸಲಿದ್ದರು ಅಷ್ಟರಲ್ಲಿ ಆ ತರುಣನಿಗ ತನ್ನ ವಿಪನ್ನಾವಸ್ಥೆ ಸ್ಮರಣೆಗೆ ಬರಲು, ಬಹಳ ಕಳವಳ ವಾಯಿತು. ಮುಖವು ಮೊದಲೇ ಮ್ಲಾನವಾದುದು ಬತ್ತಿಹೋಯಿತು ಕಂಬನಿಗಳು ಧಾರೆಗಟ್ಟಿ ಸುರಿಯುತ್ತಿದವು! ಸದ್ಗೃಹಸ್ಥರೇ, ದುರ್ದೈವಿ ಯಾದ ನನ್ನನ್ನು ಬದುಕಿಸಿದುದೇಕೆ? ನನ್ನನ್ನು ಹಾಗೆಯೇ ಸಾಯಗೊಡ ಬಾರದಿತ್ತೆ? ಪುನಃ ನನ್ನನ್ನು ವಿಪತ್ತಿಗೀಡುಮಾಡಲು ನಾನೇನು ನಿಮಗೆ ಅಂತಹ ಕೇಡು ಬಗೆದಿದ್ದೆನು? ಎಂದು ಕಂಪಿಸುವ ಸ್ವರದಲ್ಲಿ ಕೇಳಹತ್ತಿದನು

ಸುಬ್ಬಣ್ಣವರಿಗೆ ಬಹಳ ಕಳವ ವಾಯಿತು ದಾರುಣವಾದ ದುಃಖಕ್ಕೆ ಬಲಿಬಿದ್ದ ತರುಣನಿರಬೇಕೆಂದು ಅವರು ತರ್ಕಿಸಿದರು ಅವನ ದುಃಖದ ಕಾರಣವನ್ನರಿಯಲು ಆತುರರಾಗಿದ್ದರು. ನಾವು ನಿನ್ನನ್ನು ಪ್ರಾಣಾಪಾಯ ದಿಂದ ಪಾರು ಮಾಡಿಲ್ಲವೆ?

ಪ್ರಾಣಾಪಾಯದಿಂದ ಪಾರು ಮಾಡಿದರೋ ಇಲ್ಲವೆ ಪ್ರಾಣ ಕಳೆ ಯುವ ಶಿಕ್ಷೆಗೆ ಗುರಿಮಾಡಿದರೋ ಅದನ್ನು ನೀವು ಹೇಗೆ ತಿಳಿಯುವಿರಿ?

ಅಂದರೇನು? ಪ್ರಾಣಹತ್ಯೆಗೆ ಪ್ರವೃತ್ತನಾಗಲು, ನಿನಗೊದಗಿದ ವಿಪತ್ತಿ ಯಾವದು? ವಿಪತ್ತಿಯಿಲ್ಲದೆ ನಾನು ಕೊಳದಲ್ಲೇಕೆ ಧುಮುಕುತ್ತಲಿದ್ದೆ?

ಆಹುದು, ಆದರೆ ಅದಕ್ಕೆ ಕಾರಣವೇನು?

ಅದನ್ನು ಹೇಳುವವರಿಂದ ಲಾಭವೇನು?

ಹೇಳಿದರೆ ಹಾನಿಯೇನು?

ಇನ್ನೇನು? ಈಗಲೆ ಹಿಡಿದೊಯ್ದು ಪೊಲೀಸಿನವರಿಗೆ ಒಪ್ಪಿಸುವಿರಿ ಕೊಲೆಯ ಅಪರಾಧದ ಮೂಲಕವಾಗಿ ನಾನು

ಮರಣದಂಡನೆಗೆ ಗುರಿಯಾಗಿರುವೆಯಾ?

ಇನ್ನೂ ಆಗಿಲ್ಲವಾದರೂ ಬೇಗನೆ ಆಗಲಿರುವೆನು ಎಲ್ಲವೂ ನಿರ್ಧರವೇ ಆಗಿದೆ ನಾನೇ ಕೊಲೆಗಾರನೆಂದು ಅಧಿಕಾರಿಗಳ ಮನವರಿಕೆಯಾಗಿ ಹೋಗಿದೆ. ಸಂದೇಹವೇ ಉಳಿದಿಲ್ಲ ನನ್ನ ಶೋಧಕ್ಕೆ ಪೋಲೀಸರು ತಿರುಗಾಡುತ್ತಲಿರುವರು. ಇಂದಿಲ್ಲ ನಾಳೆಯಾದರೂ ನಾನು ಮರಣ ದಂಡನೆಗ ಗುರಿಯಾಗ ವದು ಸ್ಪಷ್ಟವೇ ಆಗಿದೆ ಆ ನೇಲೆ ಸರಕಾರದವರು ಕಳೆಯಲಿದ್ದ ಪ್ರಾಣವನ್ನು ನಾನೇ ಇಂದು ಕಳೆಯಲುದ್ಯುಕ್ತನಾಗಿದ್ದೆನು

ಯಾರ ಕೊಲೆ?

ನನ್ನ ಅನ್ನ ದಾತೃವಿನ ಕೊಲೆ, ನನ್ನ ಸಾಕು ತಂದೆಯ ಕೊಲೆ, ನನ್ನ ಪ್ರೇಮದ ಒಡೆಯನ ಕೊಲೆ! ಅವರಾರು?

ಸಾವುಕಾರ ಶ್ರೀನಿವಾಸರಾಯರು

ಸಾವುಕಾರ ಶ್ರೀನಿವಾಸರಾಯರ ಪ್ರಕರಣವೇ? ಕೊಲೆಯ ಆರೋಪವಿದ್ದ ತರುಣ ಮಧುಕರನೆಂಬವನು ನೀನೇಯೊ?

ಅಹುದು, ನಾನೇ-ನಾನೇ ಆ ಕೊಲೆಗಾರ. ಏಕೆ ಸದ್ಗೃಹಸ್ಥರೆ, ಮೊದಲೇ ನಾನು ಹೇಳಿದುದರ ಕಲ್ಪನೆ ನಿಮಗೆ ಬಂದಿತೇ? ಆಗಲಿ ಏಳಿರಿನ್ನು? ಬೇಗನೆ ಪೋಲೀಸರ ವಶಮಾಡಿರಿ ನನ್ನನ್ನು ಹಿಡಿ ಪುಣ್ಯಕಟ್ಟಿಕೊಂಡಿರುವಿರಿ ಇನ್ನು ಪೋಲೀಸರ ವಶಕೊಪ್ಪಿಸಿ . . .

ಮಧುಕರ, ನಾವು ನಿನ್ನ ಹಿತಚಿಂತಕರೆಂದು ಮೊದಲೇ ಹೇಳಿಲ್ಲವೆ? ಹಿತಚಿಂತಕರಾದ ನಾವೇ ನಿನ್ನನ್ನು ಪೋಲೀಸರ ಕೈಗೆ ಕೊಡುವೆವೆ?

ಹಾಗಾದರೆ ಪೋಲೀಸರಿಂದ ಉಳಿಸುವಿರಾ?

ಅದೇನೋ? ಅದನ್ನು ಈಗಲೇ ಹೇಳಲು ಬರುವಂತಿಲ್ಲ

ಹಾಗಾದರೆ ಈಗ ಏನು ಮಾಡುವಿರಿ? ನನಗಂತೂ ಈಗ ಮರಣ ದಂಡನೆ ಎಂದೂ ತಪ್ಪದೆಂದು ಮನವರಿಕೆಯಾಗಿದೆ. ಗಲ್ಲಿನ ಶಿಕ್ಷೆಗೆ ಭಯಪಟ್ಟು ಆತ್ಮಹತ್ಯೆಗೆ ಉದ್ಯುಕ್ತನಾಗಿದ್ದೆ.

ನಿನ್ನ ಸಂಗತಿಯನ್ನು ಹೇಳು ನೋಡೋಣ?

ಕೊಲೆಯಾಗಿ ಎಂಟು ದಿವಸವಾಯಿತಷ್ಟೆ? ಕೊಲೆಯಾದ ದಿನ ನಾನು ಊರಲ್ಲಿಯೇ ಇದ್ದೆ. ನಿತ್ಯದಂತೆ ಅಂದಾದರೂ ಸಾವುಕಾರ ಶ್ರೀನಿವಾಸರಾಯರ ಮನೆಗೆ ಹೋಗಿದ್ದೆ. ಮರುದಿನ ಮುಂಜಾವಿನಲ್ಲಿ ನನ್ನ ಮಿತ್ರ

ಇಂದುಶೇಖರ ನನಗೆ ಕೊಲೆಯ ವಾರ್ತೆ ತಿಳಿಸಿದ; ಮತ್ತು ಕೊಲೆಯ ಆರೋಪಿ ತಾನೇ ಎಂಬನ್ನಾದರೂ ತಿಳಿಸಿದ ಶ್ರೀನಿವಾಸರಾಯರ ಕೊಲೆಯ ವಾರ್ತೆ ಕೇಳಿ ನಾನು ಬಹಳವಾಗಿ ದುಃಖಿ ನಾದೆ ಅದರಲ್ಲಿ ಕೊಲೆಯ ಆರೋಪ ನನ್ನ ಮೇಲೆಯೇ ಬಂದುದನ್ನು ಕೇಳಿ ಅತಿಯಾಗಿ ಹತಾಶ ನಾದೆ ಏನು ಮಾಡಬೇಕೆನ್ನುವದೇ ತಿಳಿ ಯದಾಯಿತು. ಹಾಗೆ ನಾನು ಮುಂಗಾಣದೆ ಕುಳಿತಿರಲು, ನನ್ನ ಶೋಧಕ್ಕೆಂದು ಪೋಲೀಸಿನವರು ಹೊರಟ ವಾರ್ತೆ ತಿಳಿಯಿತು ಕೂಡಲೆ ನಾನು ಹಿತ್ತಲಬಾಗಿಲಿನಿಂದ ಓಡಿದೆ ಊರ ಸಮೀಪದ ಸ್ಥಳದಲ್ಲಿಯೇ ಗುಪ್ತವಾಗಿದ್ದೆ

ಎಂಟು ದಿನ ಊಟದ ಬಗ್ಗೆ ಏನು ಮಾಡಿರುವೆ?

ನನ್ನ ಮಿತ್ರ ಇಂದುಶೇಖರ ನನ್ನ ಬಗ್ಗೆ ಹಳ ತೋಂದರೆ ವಹಿಸಿ ರುವ ಪೋಲೀಸಿನವರಿಗೆ ಅಲ್ಪವಾದರೂ ತಿಳಿಯಗೊಡವೆ, ನನಗೆ ಆಹಾರ ತಂದು ಕೊಡುತ್ತಿರುವನಲ್ಲದೆ, ಪೋಲೀಸಿನವರಲ್ಲಿ ನಡೆವ ವಿಷಯ ಗಳನ್ನೂ ತಿಳಿಸುತ್ತಲಿರುವನು

ಇಂದೇಕೆ ಆತ್ಮಹತ್ಯಕ್ಕೆ ಉದ್ಯುಕ್ತನಾಗಿದ್ದೆ?

ಹಾಗಾದರೆ ಇನ್ನೇನು ಮಾಡಲಿ? ಹೀಗೆಯೇ ಎಷ್ಟು ದಿನ ಕಳ್ಳನಂತೆ ಜೀವಿಸಿರಲಿ? ಎಂಟು ದಿನಗಳಲ್ಲಿಯೇ ನನಗೆ ಈ ಕಾಡುಜೀವನದ ಬೇಸರು ಬಂದು ಹೋಗಿದೆ ಹಗಲೂ ಇರುಳೂ ಒಂದೇ ಯೋಚನೆ ಇಂದು ಶೇಖರನು ಅರ್ಧತಾಸು ಬಂದು ಅಲ್ಲಿಯ ಸಂಗತಿ ತಿಳಿಸುವನು ಆ ಮೇಲೆ ನಾನೇ ನಾನು. ಯಾವದೊಂದು ಪೊದೆಯೇ ಪೊದೆ. ಯಾವಾಗಲೂ ಒಂದೇ ವಿಚಾರ ಮಾಡಿ ಮಿದುಳು ಹಾರಿ ಹೋಗುತ್ತಲಿದೆ ಪಿಶಾಚಿಯಂತೆ ನನ್ನ ಸ್ಥಿತಿಯಾಗಿರುವದು. ಮತ್ತು ಪೋಲೀಸರ ಕಣ್ಣು ತಪ್ಪಿಸಿ ನಾನು ಎಷ್ಟು ದಿನ ತಾನೇ ಇರಬಲ್ಲೆ? ಒಂದೆರಡು ದಿನ, ಬಹಳವಾದರೆ ನಾಲ್ಕು ದಿನ ಆ ಮೇಲೆ ಪೋಲಿ ಸಿನವರು ನಿಶ್ಚಯವಾಗಿಯೂ ನನ್ನನ್ನು ಎಳೆದೊಯ್ಯುವರು

ನ್ಯಾಯನಿರ್ಣಯವು ಹೀಗೆಯೇ ಆಗುವದೆಂದು ಹೇಗೆ ಊಹಿ ಸಿದೆ? ಇನ್ನೂ ವೇಳೆಯಿದೆ ಯತ್ನ ಮಾಡಿದರೆ ನಿನ್ನ ನಿರಪರಾಧಿತ್ವ ಬಯಲಿಗೆ ಬರಬಹುದು!

ನನಗೇನು ಹುಚ್ಚು ಹಿಡಿದಿದೆಯೆಂದು ತಿಳಿದಿರುವಿರಾ? ನನ್ನಿಂದ ಯಾವ ಯತ್ನ ತಾನೆ ಸಾಧಿಸಬಲ್ಲದು? ಪೋಲೀಸಿನವರ ಎಲ್ಲ ಸಾಕ್ಷಿ-ಪುರಾವೆ ಗಳು ನಾನೇ ಅಪರಾಧಿಯೆಂದು ಸಿದ್ಧಗೊಳಿಸುತ್ತಲಿರುವವು. ನಾನಂತೂ ಈ ಅಪರಾಧವಲ್ಲಿ ಕಿಂಚಿತ್ತಾದರೂ ಭಾಗ ವಹಿಸಿಲ್ಲವೆಂದು ಚನ್ನಾಗಿ ಬಲ್ಲೆ

ಯಾರು ಎಷ್ಟು ವಿಧವಾಗಿ ನಾನೇ ಕೊಲೆ ಮಾಡಿದವನೆಂದು ಸಿದ್ಧಮಾಡಿ, ದರೂ ನನ್ನಷ್ಟಕ್ಕೆ ನಾನು ಪೂರ್ಣ ನಿರಪರಾಧಿಯೆಂದು ಚನ್ನಾಗಿ ಬಲ್ಲೆ' ಆದರೆ ಅದರಿಂದ ಉಪಯೋಗವೇನು? ನನ್ನೊಬ್ಬನ ಧ್ವನಿ ಅಷ್ಟು ಕಾರ್ಯ ಮಾಡಲಾರದು. ಇನ್ನೂ ಬಹಳ ಬಲಬೇಕು ಅದೇ ನನಗಿಲ್ಲ. ನಾನು ಕೊಲೆಗಾರನಿಲ್ಲದಿದ್ದಲ್ಲಿ ಇನ್ನಾರೋ ಈ ಕಾರ್ಯ ಮಾಡಿರಬೇಕು ಅವ ನನ್ನು ಬಯಲಿಗೆಳೆಯಲು ಪತ್ತೆದಾರರನ್ನು ನಿಯಮಿಸಬಹುದಿತ್ತು; ಆದರೆ ನಾನು ನಿರ್ಧನ ಸಾವುಕಾರರಲ್ಲಿ ತಿಂಗಳಿಗೆ ನಾಲ್ವತ್ತು ರೂಪಾಯಿ ದೊರ ಯುತ್ತಿದ್ದವೆಂದು ನನ್ನ ತಿಂಗಳವೆಚ್ಚ ಆತಂಕವಿಲ್ಲದೆ ನಡೆಯುತ್ತಲಿದ್ದಿತು. ಪತ್ತೆದಾರರಿಗೆ ಸಾವಿರೆರಡು ಸಾವಿರ ರೂಪಾಯಿ, ವಕೀಲರಿಗೆ ಸಾವಿರೆರಡು ಸಾವಿರ ರೂಪಾಯಿ ಕೊಡಲು ನಾನು ಶಕ್ತನಿಲ್ಲ ಆದುದರಿಂದ ಮಹಾಶಯ, ನೀವೇ ಹೇಳಿ. ನನ್ನ ಬಿಡುಗಡೆಯ ಆಶೆ ಅಲ್ಪವಾದರೂ ಇದೆಯೇ? ನನ ಗಂತೂ ಅಲ್ಪವಾದರೂ ಆಶೆಯಿಲ್ಲ ಮರಣವೇ ಇನ್ನುಗತಿಯೆಂದು ಮನ ವರಿಕೆಯಾಗಿದೆ ಪೋಲೀಸರ ಕೈಯಲ್ಲಿ ಸಿಕ್ಕು, ಅವರ ಉಪಟಳದಲ್ಲಿ ತೊಂದರೆ ಹೊಂದಿ, ಜೇಲಿನ ಹಾಲಾಹಲವನ್ನುಂಡು, ಜನರ ಉಪಹಾಸ್ಯ ಕ್ಕೊಳಗಾಗಿ ಸಾಯುವದಕ್ಕಿಂತಲೂ ಯಾರಿಗೂ ತಿಳಿಯದೆ ಆತ್ಮಹತ್ಯೆ ಮಾಡಿ ಕೊಳ್ಳಬೇಕೆಂದು ಯತ್ನಮಾಡಿದನು

ಮಧುಕರ, ನೀನು ಹೇಳುವ ಸಂಗತಿಯೆಲ್ಲವೂ ಸತ್ಯವೇ ಆದರೆ? . .

ಆದರೆ ಇನ್ನೇನು?

ದೇವರು ಸತ್ಪಕ್ಷಪಾತಿಯಲ್ಲವೆ? ನೀನು ನಿರಪರಾಧಿಯೆಂಬುದೇ ಸತ್ಯ ವಾಗಿದ್ದರೆ....

ಅದನ್ನು ನಾನು ಚನ್ನಾಗಿ ಬಲ್ಲೆ, ಮತ್ತು ಅದನ್ನು ಕೊಲೆ ಮಾಡಿದ ನಿಜ ಕೊಲೆಗಾರನೊಬ್ಬನು ಅರಿತಿರಬೇಕು ಇದರ ಹೊರತು ಆ ಪರಮಾತ್ಮ ನೊಬ್ಬ ಅರಿತಿರಬೇಕು

ಹಾಗಿದ್ದರೆ ದೇವರು ನಿಶ್ಚಯವಾಗಿಯೂ ನಿನಗೆ ಸಹಾಯ ಮಾಡುವನು

ಈಗಿನ ಕಾಲದಲ್ಲಿ ಎಲ್ಲಿಯ ದೇವರು, ಎಲ್ಲಿಯ ನ್ಯಾಯ? ಅಸತ್ಯಕ್ಕೇ ಜಯವಾಗುತ್ತಿದೆ ಅನ್ಯಾಯವೇ ಸದ್ಯದ ನ್ಯಾಯದೇವತೆಯ ಸ್ವರೂಪ

ಮಧುಕರ, ಹೀಗೆ ನಿನ್ನ ಕಲ್ಪನೆಯಾಗುವದಾದರೂ ಸಹಜವೇ, ಆದರೆ ಈಗ ನೀನು ಕೊಳದಲ್ಲಿಯೇ ಮುಳುಗಿ ಮರಣಹೊಂದಬೇಕಾಗಿದ್ದಿತಲ್ಲವೆ? ಆದರೆ ಉಳಿದಿರುವೆ ಇಷ್ಟರಿಂದಲೇ ಏನೆಂದು ಊಹಿಸಬೇಕು?

ನಮ್ಮ ಊಹೆ ಎಲ್ಲಿಯ ವರೆಗೆ ಮುಟ್ಟಬಹುದು? ಕೊನೆಯ ನಿರ್ಣಯ ನಾನು ಗಲ್ಲಿಗೆ ಗುರಿಯಾಗುವದು ನಿಶ್ಚಯ. ಅದಿರಲಿ. ಮಹಾಶಯ ನೀವಾರು, ತಿಳಿಯಬಹುದೆ? ಒಬ್ಬ ದುರ್ದೈವೀ ತರುಣನ ಸಲುವಾಗಿ ಇಷ್ಟು ಶ್ರಮ ವಹಿಸಿದ ನೀವು ದೊಡ್ಡ ಜನರಲ್ಲೊಬ್ಬರು ಇರಬೇಕೆಂದು ತೋರುತ್ತದೆ ನಿಮ್ಮ ಹೆಸರನ್ನು ನಾನರಿಯಬಹುದೇ?

ಮಧುಕರ, ನಾನು ಮೊದಲೇ ಹೇಳಿಲ್ಲವೆ? ನಿನ್ನ ಹಿತಚಿಂತಕನೆಂದು ನಿನ್ನ ಸಮೀಪದ ಒಬ್ಬ ಆಪ್ತನೆಂದು ಗ್ರಹಿಸು. ನಿನ್ನ ಬಿಡುಗಡೆಯ ವಿಷಯ ವಾಗಿ ಶಕ್ಯವಿದ್ದ ಪ್ರಯತ್ನ ಮಾಡುವೆನು, ಮತ್ತು ವಿಶ್ವಪ್ರಯತ್ನದಿಂದ ನಿನ್ನನ್ನು ಇಂತಹ ಘೋರ ದುಃಖದಿಂದ-ಪಾರುಮಾಡುವ ಭರವಸೆಯೂ ಇದೆ

ಆದರೆ ಇಂತಹ ಹಿತಚಿಂತಕರು ಯಾರೆಂಬುದೇ ತಿಳಿಯಲಿಲ್ಲವಲ್ಲ!

ನನಗೆ ಸುಬ್ಬಣ್ಣನೆನ್ನುವರು

ಯಾರು, ತಾವು ತುಬ್ಬುಗಾರ ಸುಬ್ಬಣ್ಣವರೆ? ಅಹುದು

ದೇವಾ.... .ಅಹಾ! ಸುಬ್ಬಣ್ಣವರೇ. ನಿಜವಾಗಿಯೂ ನೀವು ನನ್ನ ಬಗ್ಗೆ ಪ್ರಯತ್ನ ಮಾಡುವಿರಾ? ನೀವು ಕೈಕೊಂಡರೆ ಮಾತ್ರ ನನ್ನ ಬಿಡುಗಡೆ ಶಕ್ಯವಾಗಬಹುದು

ಮತ್ತೆ ನಾನು ಇದುವರೆಗೂ ಹೇಳಿದುದೇನು?

ಅಹುದು ನಿರ್ಭಾಗ್ಯ ಮಧುಕರನನ್ನು ಪಾರು ಮಾಡಲು ಶಕ್ಯವಿದ್ದ ಉಪಾಯಗಳನ್ನು ಕೈಕೊಳ್ಳುವ ಭರವಸೆ ಕೊಟ್ಟಿರುವಿರಿ ಸುಬ್ಬಣ್ಣವರೇ, ಈಗ ಮಾತ್ರ ದೇವರು ಸತ್ಪಕ್ಷಪಾತಿಯೆಂದು ಅನ್ನಬಹುದು ನನಗೆ ಕಲ್ಪನೆಯೇ ಇರಲಿಲ್ಲ. ನಾನು ಇದುವರೆಗೆ ತಮ್ಮ ವಿಷಯವಾಗಿ ಬಹಳ ಕೇಳಿರುವೆನು ಈ ಎಂಟು ದಿನಗಳಲ್ಲಿ ಸಾವಿರಾರು ಸಲವಾದರೂ ಸ್ಮರಿಸಿರಬಹುದು ಈ ವಿಷಯದಲ್ಲಿ ಇಂದುಶೇಖರನ ಸಲಹೆಯನ್ನೂ ತೆಗೆದುಕೊಂಡಿರುವೆನು

ಅವನೇನೆಂದನು?

ನೀವು ಯಾವುದೋ ಒಂದು ಅತ್ಯವಶ್ಯದ ಕಾರ್ಯಕ್ಕೆ ಎಲ್ಲಿಯೋ ದೂರ ಹೊರಟು ಹೋದಂತೆ ತಿಳಿಸಿದನು. ನೀವು ಬಡವರ ಕಾಮಧೇನುವೆಂದು ನಾನು ಬಲ್ಲೆ. ನಿರ್ಧನಿಕನಾದ ನನ್ನ ವಿಷಯವನ್ನು ಕಳಕಳಿಯಿಂದ ವಿಚಾರಿಸುವಿರೆಂದೂ ನಾನು ಸಂಪೂರ್ಣ ಅರಿತಿರುವೆನು, ಆದರೆ ನೀವು ಎಲ್ಲಿಯೋ ಹೋದ ಬಗ್ಗೆ ತಿಳಿಯಲು, ನಿರಾಶನಾದೆನು; ಆದರೆ ನೀವು ಅಕಸ್ಮಾತ್ತಾಗಿ ನಾನು ಕೊಳದಲ್ಲಿ ಮುಳುಗಲಿರಲು ಬಂದುದು ಹೇಗೆ?

ಮಧುಕರ, ಇನ್ನು ಹೇಗೆ? ಏನು? ಅನ್ನುವ ಯೋಚನೆಯೇ ಬೇಡ ಅದು ದೈವೀ ಘಟನೆ ಹೇಗೆ ಕೂಡಿಬರುತ್ತದೆಂದು ಯಾರೂ ಹೇಳಲಾರರು ಹೇಗೆಯೇ ಆಗಲಿ, ಕೂಡಿರುವೆವು ಇಷ್ಟೇ ಸಾಕು.

ಸುಬ್ಬಣ್ಣವರೇ, ನಿಜವಾಗಿಯೂ ದೇವರು ನನ್ನ ಮೇಲಿರುವನು ಈಗ ನೀವು ಏನು ಮಾಡಬೇಕೆಂದು ಹೇಳುವಿರೋ ಹಾಗೆ ಮಾಡುವೆನು

ಸದ್ಯ ಹೆಚ್ಚಿನ ವಿಚಾರ ಬೇಡ ನಾನು ಅಧಿಕಾರಿಗಳನ್ನು ಕಂಡು ಅವರ ಸಾಕ್ಷಿ-ಪುರಾವೆಗಳನ್ನೆಲ್ಲ ತಿಳಿಯುವೆನು ಆ ಮೇಲೆ ನಿನ್ನನ್ನು ಕಾಣು ವೆನು ಮುಂದಿನ ಯೋಚನೆಯನ್ನಾದರೂ ಆ ಮೇಲೆಯೇ ತಿಳಿಸುವೆನು ನೀನು ಇನ್ನೇನೂ ಯೋಚಿಸಿದೆ, ಮೊದಲು ಪೋಲೀಸರ ವಶನಾಗು.

---

● ವಿವರ ●

ಓದುಗರಿಗೆ ನಮ್ಮ ತುಬ್ಬುಗಾರ ಸುಬ್ಬಣ್ಣವರ ಪರಿಚಯು ಈ ಮೊದಲೇ ಆಗಿರುವದು * ಡಾ ತಾರಾದಾಸನು ಒಳ್ಳೇ ಜಾಣತನದಿಂದ ಸಾವುಕಾರ ರಾಮುರಾಯರ ಕೊಲೆಮಾಡಿ ಆ ಕೊಲೆ ತನ್ನ ಮೇಲೆ ಹೊರಳದೆ ಸಾವುಕಾರ ತಮ್ಮನ ಮಗನಾದ ಮನೋಹರನೆಂಬ ತರುಣನ ಮೇಲೆ ಹೊರಳುವಂತೆ ಮಾಡಿರಲು, ಸುಬ್ಬಣ್ಣವರು ತಮ್ಮ ಅಗಾಧ ಚಾತುರ್ಯದಿಂದ ತಾರಾದಾಸನ ಅಪರಾಧವನ್ನು ಬಯಲಿಗೆಳೆದರು. ಆ ಕೊಲೆಯ ಪ್ರಕರಣಾಂತ್ಯದಲ್ಲಿ ಒಂದು ಗೂಢವುಳಿದಿತ್ತೆಂದು ಆಗ್ಗೇನೇ ನಾನು ಹೇಳಿರುವೆನು ಸುಬ್ಬಣ್ಣವರು ಆ ರಹಸ್ಯವ ಶೋಧಿಸುವದಕ್ಕೆಂದು ರಸಾಯನ ಶಾಸ್ತ್ರದ ಅಭ್ಯಾಸ ಕೈಕೊಂಡರು

ಸುಬ್ಬಣ್ಣವರದು ಬಲು ವಿಚಿತ್ರ ಸ್ವಭಾವ. ಯಾವದೊಂದು ಸಂಗತಿಯ ಬೆನ್ನು ಹತ್ತಿದರಾಯಿತು, ಕೊನೆಯ ವರೆಗೂ ಬಿಡುವುದೇ ಇಲ್ಲ ಅದರ ಬುಡವನ್ನೆಲ್ಲ ಶೋಧಿಸಿಯೇ ಬಿಡುವರು ಎಷ್ಟೇ ಹಣ ವೆಚ್ಚವಾದರೂ ಎಷ್ಟೇ ವಿಪತ್ತುಗಳೊದಗಿದರೂ ಎದೆಗೆಡದೆ ಮುಂದೊರೆಯುವರು.

ರಸಾಯನಶಾಸ್ತ್ರದ ಅಭ್ಯಾಸವನ್ನಾದರೂ ಮನಮುಟ್ಟಿಯೇ ಮಾಡ ಹತ್ತಿದರು ಅದಕ್ಕೆಂದೇ ತಮ್ಮ ಮನೆಯ ಸಮೀಪವಲ್ಲಿಯೇ ಸ್ವಂತದ ಒಂದು ಪ್ರಯೋಗಶಾಲೆ ಕಟ್ಟಿಸಿದರು ೨೦-೨೫ ಸಾವಿರ ರೂಪಾಯಿ ವೆಚ್ಚ ಮಾಡಿ ಬಹಳ ಮೇಲ್ತರಗತಿಯ ಸಾಮಾನುಗಳನ್ನು ತರಿಸಿದರು ಅಲ್ಲಿ

---

*ಶ್ರೀ ಶೇಷಾಚಲ ಗ್ರಂಥಮಾಲೆಯ ತುಬ್ಬುಗಾರ ಸುಬ್ಬಣ್ಣ ಎಂಬ ಪುಸ್ತಕ ನೋಡಬೇಕು    ೨ನೇ ಆವೃತ್ತಿ    ಬೆಲೆ ೩ ೫ ೦

ಯಾದರೂ ಮುರಾರಿಯೇ ಅವರಿಗೆ ಸಹಾಯಕನು. ಇಬ್ಬರೂ ಕೂಡಿ ಅದೆಷ್ಟೋ ವೇಳೆ ಪ್ರಯೋಗ ಶಾಲೆಯಲ್ಲಿಯೇ ಕುಳಿತು ಬಿಡುವರು ಅದರಲ್ಲಿ ಬಹಳ ಮಟ್ಟಿಗೆ ಪ್ರಾವೀಣ್ಯವನ್ನೂ ಪಡೆದರು

ಇದರಿಂದ ಸುಬ್ಬಣ್ಣವರ ತೊಂದರೆಗಳು ಇಮ್ಮಡಿಯೋ ಮುಮ್ಮಡಿಯೋ ಬೆಳೆದು ಹೋದವು. ಮೇಲಿಂದ ಮೇಲೆ ಕರೆಗಳು ಬರಹತ್ತಿದವು ಮೊದಲಿನಂತೆ ತುಬ್ಬುಗಾರಿಕೆಯ ಪ್ರಕರಣಗಳಂತೂ ಸರಿಯೇ. ರಾಸಾಯನಿಕ ಶಾಸ್ತ್ರಗಳ ಸಲಹೆಗಳಿಗೆಂದು ಅನೇಕ ಸ್ಥಾನಗಳಿಂದ ಕರೆಗಳು ಹೆಚ್ಚಾಗಿ ಬರಹತ್ತಿದವು, ಆದರೆ ಸುಬ್ಬಣ್ಣವರು ಕಟ್ಟುನಿಟ್ಟಿನ ಸ್ವಭಾವದವರು ತಮ್ಮ ಸ್ವಭಾವದಂತೆ ಒಮ್ಮೆ ಒಂದು ಕೆಲಸ ಕೈಕೊಂಡರಾಯಿತು ಬ್ರಹ್ಮದೇವರೇ ಬಂದು ಹೇಳಿದರೂ ಇನ್ನೊತ್ತಟ್ಟು ಇಣುಕುವದಿಲ್ಲ ಕೂಡಾ ತುಬ್ಬುಗಾರಿಕೆಯ ಪ್ರಕರಣಗಳಲ್ಲಂತೂ ಅವರಿಗೆ ಬಹಳ ಆಗ್ರಹವಾಗುತ್ತಿತ್ತು ಕೈ ತೆರವಿದ್ದರೆ ರಹಸ್ಯಮಯ ಪ್ರಸಂಗವೆಂದು ತಿಳಿದರಾಯಿತು, ಯಾರೂ ಕರೆಯದಿದ್ದರೂ ಕೂಡ ತಾವೇ ಹೋಗಿ ಅದನ್ನು ಕೈಕೊಳ್ಳುವರು ಕೈಯಲ್ಲಿ ಕೆಲಸವಿದ್ದರೆ ಲಕ್ಷಗಟ್ಟಲೆ ಹಣದಾಶೆ ತೋರಿಸಿದರೂ ಹೊರಳುವದಿಲ್ಲ ಅನೇಕ ಸಲ ಇಂತಹ ಸಂದರ್ಭಗಳಲ್ಲಿ ಬೇರೆ ತುಬ್ಬುಗಾರರು ಬಂದು ಸುಬ್ಬಣ್ಣವರ ಸಲಹೆ ತೆಗೆದುಕೊಂಡು ಹೋಗುತ್ತಿದ್ದರು ರಸಾಯನ ಶಾಸ್ತ್ರದ ವಿಷಯನಾದರೂ ಹಾಗೆಯೇ ಯಾರಾದರೂ ಸಲಹೆಗೆ ಕರೆದರೆ ಒಮ್ಮೊಮ್ಮೆ ಹೋಗುವದುಂಟು. ಒಂದೊಂದು ಸಲ ಅವರನ್ನೇ ತಮ್ಮ ಪ್ರಯೋಗ ಶಾಲೆಗ ಕರೆಯಿಸುವರು

ಹೀಗೆ ಅವರು ರಸಾಯನ ಶಾಸ್ತ್ರದಲ್ಲಿಯೂ ನೈಪುಣ್ಯ ಪಡೆಯಲು, ಕುಸುಮಪುರಕ್ಕೆ ಒಂದು ಸಲ ಹೋಗುವ ಸಂದರ್ಭವೊದಗಿತು.

ಕುಸುಮಪುರವು ಕರ್ನಾಟಕದ ಸಂಸ್ಥಾನಗಳಲ್ಲೊಂದು ಸಂಸ್ಥಾನವು; ತಕ್ಕಮಟ್ಟಿಗೆ ದೊಡ್ಡದು ಉಳಿದ ಎಲ್ಲ ಸಂಸ್ಥಾನಗಳಂತೆ ಅದೂ ಒಂದು, ಎಂದು ಹೇಳಿಬಿಡುವೆನು. ಉಳಿದ ಸಂಸ್ಥಾನಗಳಲ್ಲಿಯೂ ಅದರಲ್ಲಿಯೂ ತಕ್ಕಮಟ್ಟಿಗೆ ಅಂತರವುಂಟು, ಮತ್ತು ಕುಸುಮಪುರವಾದರೂ ತನ್ನ ವೈಶಿಷ್ಟ್ಯಗಳಿಲ್ಲದೆ ಇಲ್ಲ.

ಆ ಸಂಸ್ಥಾನದ ಮುಖ್ಯ ವೈಶಿಷ್ಟ್ಯವೆಂದರೆ, ಅಲ್ಲಿ ಪ್ರಜಾಪ್ರತಿನಿಧಿಸಭೆಯಿಲ್ಲ, ಹಾಗಾದರೆ ಅದು ಆಧುನಿಕ ಕಾಲದ ಸಂಸ್ಥಾನವೇ ಅಲ್ಲ ಇದು ಪ್ರಜಾರಾಜ್ಯದ ಯುಗವು ಹೀಗಿರಲು ಪ್ರಜಾ ಪ್ರತಿನಿಧಿ ಸಭೆಯಿಲ್ಲದ ಅದು ಯೋಗ್ಯ ಸಂಸ್ಥಾನವಾಗಲಾರದು, ಎಂದು ನೀವು ಟೀಕಿಸಬಹುದು,

ಆದರೆ ಮಹಾಶಯ ನಿಜವಾದ ಪ್ರಜಾಪ್ರಾತಿನಿಧ್ಯವು ನಮ್ಮ ಭಾರತ ವರ್ಷದ ಒಂದು ಮೂಲೆಯಲ್ಲಾದರೂ ಇದೆಯೋ? ಹೆಸರಿಗೇನೋ ಎಲ್ಲ ಸಂಸ್ಥಾನಗಳಲ್ಲಿಯೂ ಇಂತಹ ಸಭೆಗಳುಂಟು, ಆದರೆ ಆ ಪ್ರಜಾಪ್ರತಿನಿಧಿಗಳ ಯಾವ ನಿರ್ಣಯಗಳಿಗೆ ಮನ್ನಣೆ ದೊರೆಯುತ್ತದೆ? ಇದರ ವಿಚಾರವನ್ನಾದರೂ ತಾವು ಅರಿತೇ ಇರುವಿರಿ ಆದುದರಿಂದ ಮಹಾಶಯ, ನೀವೇ ಹೇಳಿ, ಇಂತಹ ನಕಲು ಸಭೆಗಳಿದ್ದರೂ ಅಷ್ಟೇ, ಇಲ್ಲದಿದ್ದರೂ ಅಷ್ಟೇ

ಮತ್ತು ಇನ್ನೊಂದು ವಿಚಿತ್ರವೆಂದರೆ, ಕುಸುಮಪುರದ ಪ್ರಜೆಗಳಾದರೂ ತಮ್ಮ ಪ್ರತಿನಿಧಿಗಳ ಸಭೆಯನ್ನಂದೂ ಒಯಸಿರುವುದಿಲ್ಲ, ಏಕೆಂದರೆ ಅವರಿಗೆ ಅದರ ಅವಶ್ಯಕತೆಯೇ ಇಲ್ಲ ಯಾವ ವಿಷಯದಲ್ಲೂ ಕೊರತೆಯಾಗದಂತೆ ಅವರ ಅರಸು ಅವರನ್ನು ನೋಡುತ್ತಲಿರುವನು. ಆ ವಿಷಯವನ್ನು ನಾನು ಇನ್ನಾವಾಗಲಾದರೂ ಸಮಯ ದೊರೆತಲ್ಲ ತಮಗೆ ಹೇಳುವೆನು.

ಕುಸುಮಪುರವು ಆಧುನಿಕ ಎಲ್ಲ ಸುಧಾರಣೆಗಳನ್ನು ಒಳಗೊಂಡಿದೆ. ನಗರವು ದೊಡ್ಡದು. ಸುಮಾರು ಒಂದು-ಒಂದೂವರೆ ಲಕ್ಷ ಜನಸಂಖ್ಯೆಯುಳ್ಳ ವ್ಯಾಪಾರದ ಕೇಂದ್ರಸ್ಥಳವೂ ಇದ ಎರಡು ಬಟ್ಟೆಯ ಗಿರಣಿಗಳುಂಟು ಸ್ವಂತದ್ದಾದ ರೈಲು ಗಾಡಿಯು ಸಂಸ್ಥಾನದ ತುಂಬೆಲ್ಲ ಹರಡಿದೆ. ನಗರದ ಬೀದಿಗಳು ಅಗಲವಾದುವು ಊರ ಮಧ್ಯದಲ್ಲಿಯೇ ಅರಸನ ಕಚೇರಿ ಒಳ್ಳೇ ಮೇಲ್ತರಗತಿಯ ಕಟ್ಟಡವು ವಿದ್ಯುದ್ದೀಪಗಳಿಂದ ಸುಶೋಭಿತವಾದುದು ಆ ಕಟ್ಟಡದ ಸುತ್ತಲೂ ಸುಂದರವಾದ ಉದ್ಯಾನವುಂಟು ಸುತ್ತಲೂ ಆವಾರದ ಗೋಡೆಯಿದ್ದು, ಅದರ ನಾಲ್ಕು ಬದಿಗಳಲ್ಲಿಯೂ ನಾಲ್ಕು ಅಗಲವಾದ ರಾಜಮಾರ್ಗಗಳು ಊರ ಕೊನೆಯವರೆಗೂ ಹೋಗಿರುತ್ತವೆ ನಾಲ್ಕೂ ರಾಜಮಾರ್ಗಗಳ ಎರಡು ಬದಿಗಳಲ್ಲೂ ಮೂರು-ನಾಲ್ಕು ಅಂತಸ್ತಿನ ಸುಂದರವಾದ ಕಟ್ಟಡಗಳುಂಟು ರಾಜಾಸ್ಥಾನದ ಮೇಲೆ ನಿಂತು ನೋಡಿದರೆ. ಆ ನಾಲ್ಕು ರಾಜಮಾರ್ಗಗಳೂ ಮತ್ತು ಎಡಬಲದ ಮನೆಗಳೂ ಅತೀವ ಮನೋಹರವಾಗಿ ತೋರುತ್ತವೆ. ರಾಜಸಭಾಲಯವು ಒಂದು ಅತೀವ ಸುಂದರವಾದ ಕೊಳದಂತಿದ್ದರೆ, ನಾಲ್ಕೂ ರಾಜಮಾರ್ಗಗಳು ನಾಲ್ಕು ನದಿಗಳಂತೆ ತೋರುತ್ತಲಿವೆಯೆನ್ನಬಹುದು, ಅಥವಾ ತಮಗೆ ಸರಿದೋರಿದ ಇನ್ನಾವದಾದರೂ ಉಪಮೆ ಕೊಡಬಹುದು.

ಒಂದು ಚೌಕಿನಲ್ಲಿ ಶಿಕ್ಷಣ ಸಂಸ್ಥೆಗಳೆಲ್ಲವೂ ಕೂಡಿದ್ದವು. ಇನ್ನೊಂದು ಭಾಗದಲ್ಲಿ ಪೋಲೀಸ ಕಚೇರಿಗಳು ಒಂದೆಡೆಗೆ ಆರೇಳು ಸುಂದರವಾದ ಚಲಚ್ಚಿತ್ರಮಂದಿರಗಳು ಎದುರುಬದುರಾಗಿದ್ದವು ನಗರವಾಸಿಗಳು ಇರುವ ಸ್ಥಳ

ಗಳಲ್ಲಿ ಅವರ ಶಾಂತತೆಗೆ ಭಂಗತರುವಂತಹ ಯಾವ ಕಚೇರಿ-ಕಟ್ಟೆಗಳೂ ಇರಲಿಲ್ಲ. ವಿವಿಧ ಕಚೇರಿಗಳಿಗೂ ನಗರವಾಸಿಗಳ ವಾಸಸ್ಥಾನಕ್ಕೂ ಸಂಬಂಧವೇ ಇರಲಿಲ್ಲ. ಕುದುರೇ ಗಾಡಿಗಳ ಹೊರತು ಉಳಿದ ಯಾವ ವಾಹನವೂ ಅಲ್ಲಿ (ಜನವಸತಿ ಸ್ಥಾನದಲ್ಲಿ)ಹೋಗುವಂತಿರಲಿಲ್ಲ. ಮನೆಗಳಲ್ಲೆಲ್ಲ ಧೂಳ ತುಂಬಿ, ಎಲ್ಲರ ಮೂಗು-ಬಾಯಿಗಳಲ್ಲಿ ಮಣ್ಣು ಹಾಕುವ ಮೊಟರುಗಳು ಅಲ್ಲಿ ಯಾವಾಗಲೂ ಹಾಯುತ್ತಿರಲಿಲ್ಲ. ಮೊಟರಿನ ಸಿಲ್ದಾಣವೇ ಬೇರೆ. ಅದು ಜನರ ವಾಸಸ್ಥಾನದಿಂದ ಒಂದು ಮೈಲು ದೂರದಲ್ಲಿದ್ದಿತು. ಪ್ರವಾಸಿಗರು ಮೊಟಾರಿಗೆ ಹೋಗಬೇಕಾದರೆ ಕುದರೆ ಗಾಡಿಯಿಂದಲೇ ಹೋಗಬೇಕು, ಇಲ್ಲವೆ ನಡೆದು ಹೋಗಬೇಕು.

ಒಟ್ಟಿನಲ್ಲಿ ಕುಸುಮ ಪುರವು ಎಲ್ಲ ರೀತಿಯಿಂದಲೂ ಒಂದು ವಿಚಿತ್ರ ತರಗತಿಯ ಪಟ್ಟಣವೇ ಆಗಿದ್ದಿತು. ನೀವು ಯಾವಾಗಲಾದರೂ ಕುಸುಮಪುರಕ್ಕೆ ಹೋದರೆ ಒಂದು ಚೋದ್ಯನಗರ ಪ್ರವೇಶ ಮಾಡಿದಂತಾಗುವದರಲ್ಲಿ ಸಂದೇಹವಿಲ್ಲ.

ಕುಸುಮಪುರದರಸು ಉಳಿದ ಸಂಸ್ಥಾನಿಕರಂತೆ ಆಂಗ್ಲ ಸತ್ತೆಯ ಕೆಳಗಿನವನೇ. ಅಲ್ಲಿಯ ಎಲ್ಲ ಕಾರಭಾರವನ್ನು ಸ್ವತಃ ಹೊತ್ತುಕೊಂಡಿರುವನು. ಸಂಸ್ಥಾನದ ಪ್ರಜೆಗಳು ಎಲ್ಲ ರೀತಿಯಿಂದ ಔನ್ನತ್ಯಹೊಂದಬೇಕೆಂದು ಬಹಳವಾಗಿ ಯತ್ನಿಸುವನು. ಉದಾರಿಯೂ, ತ್ಯಾಗಿಯೂ, ಪ್ರಜಾಪಾಲನೆಯಲ್ಲಿ ದಕ್ಷನು. ಇಂತಹ ಒಡೆಯನನ್ನು ಕುಸುಮಪುರ ಸಂಸ್ಥಾನದ ಪ್ರಜೆಗಳು ಬಹಳವಾಗಿ ಪ್ರೀತಿಸುತ್ತಲಿದ್ದರೆಂದು ಬೇರೆ ಹೇಳುವ ಕಾರಣವಿಲ್ಲ.

ಅರಸನೇ ಇಷ್ಟು ದಕ್ಷನಾಗಿರುವಾಗ ಅವನ ಅಧಿಕಾರಿಗಳು ದಕ್ಷತೆಯಿಲ್ಲದೆ ಇರುವದು ಸಾಧ್ಯವಿದೆಯೇ? ಆ ಸಂಸ್ಥಾನದ ಮಂತ್ರಿ, ನ್ಯಾಯಾಧೀಶ, ವಿದ್ಯಾಧಿಕಾರಿ ಎಲ್ಲರೂ ತಮ್ಮ ತಮ್ಮ ಕಾರ್ಯಗಳಲ್ಲಿ ಕುಶಲರೇ, ಆದರೆ ಸದ್ಯ ನಮಗೆ ಅವರೆಲ್ಲರ ಪರಿಚಯದ ಅಗತ್ಯವಿಲ್ಲ. ಸದ್ಯ ನಮಗೆ ಪರಿಚಯದ ಅಗತ್ಯವಿರುವದು ಪೋಲೀಸ ಖಾತೆಯೊಂದೇ. ಅದರಲ್ಲಿಯ ಅಧಿಕಾರಿಗಳನ್ನು ಕೊಂಚ ವಿಚಾರಿಸಬಹುದು.

ಸಂಸ್ಥಾನದ ಪೋಲೀಸರಿಗೆಲ್ಲ ಮೇಲಧಿಕಾರಿ ಪೋಲೀಸ ಕಮಿಶನರ ಶ್ರೀನಿವಾಸರಾಯರು. ಅವರ ಕೈಕೆಳಗೆ ಪೋ. ಸುಪರಿಂಟೆಂಡೆಂಟ ವೆಂಕಟರಾಯರು. ಕುಸುಮಪುರವು ರಾಜಧಾನಿಯು ಆದುದರಿಂದ ರಾಜಧಾನಿಯ ಸುರಕ್ಷಿತೆಗೆಂದು ಕೊತವಾಲ ಹನುಮಂತರಾಯರು. ಇವರೆಲ್ಲರಿಗೆ ಸಹಾಯಕರೂ ಮತ್ತು ಗುಪ್ತ ಪೋಲೀಸ ಖಾತೆಯ ಮೇಲಧಿಕಾರಿಯೂ ಎಂದು ಪತ್ತೆ

ದಾರ ನರಸಿಂಗರಾಯರೇ ಯರು ನಿಯಮಿಸಲ್ಪಟ್ಟಿರುವರು ಆಯಾ ಜನರ ಸ್ವಭಾವ ಪರಿಚಯವು ಪ್ರಸಂಗಾನುಸಾರವಾಗಿ ತಾನೇ ಆಗಲಿರ ವದರಿಂದ, ಈಗ ಇಲ್ಲಿಗೇನೇ ಸಾಕುಮಾಡುವೆನು

ಕುಸುಮಪುರದ ರಾಜ, ರಾಜ್ಯವ್ಯವಸ್ಥೆ, ರಾಜ್ಯಾಧಿಕಾರಿಗಳು ಇವರ ಬಗ್ಗೆ ತಕ್ಕಮಟ್ಟಿಗೆ ಸಂಗತಿ ಕೊಟ್ಟಿರುವೆನು. ಇಷ್ಟರಿಂದಲೇ ಅದೊಂದು ಮಾದರಿಯ ರಾಜ್ಯವಾಗಿತ್ತೆಂದು ತಾವು ಅರಿತಿರಬಹುದು

ಕುಸುಮಪುರದರಸು ಶಿಕ್ಷಣಪ್ರೇಮಿಯಾಗಿದ್ದನು. ತನ್ನ ಪ್ರಜೆಗಳಿಗೆ ಎಲ್ಲ ತ ದ ಶಿಕ್ಷಣ ಸಿಕ್ಕುವ ವ್ಯವಸ್ಥೆ ಮಾಡಿದ್ದನು ಹಾಗೆಯೇ ತನ್ನಲ್ಲಿಯ ರಸಾಯನಶಾಸ್ತ್ರದ ಪಂಡಿತರಿಗ ಪ್ರಯೋಗ ಶಾಲೆಯೊಂದನ್ನು ಕಟ್ಟಿಸಿಕೊಟ್ಟಿದ್ದನ ಆ ಪ್ರಯೋಗ ಶಾಲೆಯಲ್ಲಿ ಒಂದು ಮಹತ್ವದ ಪ್ರಯೋಗದ ವಿಷಯವಾಗಿ ಬಹಳ ಚರ್ಚೆಯಾಯಿತು ಆದರೂ ಫಲಿತಾರ್ಥವೇನೂ ಹೊರಡದೆ, ಪ್ರಯೋಗದ ರಹಸ್ಯವು ಹಾಗೆಯೇ ಉಳಿಯಿತು ಆ ಸಮಯಕ್ಕೆ ತುಬ್ಬಿಗಾರ ಸುಬ್ಬಣ್ಣನವರ ರಸಾಯನ ಶಾಸ್ತ್ರದಲ್ಲಿನ ಜ್ಞಾನವು ಎಲ್ಲೆಡೆ ಹಬ್ಬಿದ್ದಿತು ಅಂತೆಯೇ ಅವರು ಅಂದಿನ ಪ್ರಯೋಗದ ಬಗ್ಗೆ ಮತ ವ್ಯಕ್ತ ಮಾಡಲು ಸುಬ್ಬಣ್ಣವರಿಗೆ ಆಮಂತ್ರಣ ಕಳುಹಿದ್ದರು ಸುಬ್ಬಣ್ಣವರು ಅಲ್ಲಿಗೆ ಬಂದು ರಾಜಾತಿಥ್ಯ ಸ್ವೀಕರಿಸಿ, ಅವರಿಗೆ ರಹಸ್ಯವ ಯವಾಗಿದ್ದ ಪ್ರಯೋಗವನ್ನು ಯಶಸ್ವೀ ರೀತಿಯಿಂದ ಕೊನೆಗಾಣಿಸಿದರು ಕುಸುಮಪುರದರಸು ಅವರ ವಿಷಯವಾಗಿ ಬಹಳ ಆದರ ವ್ಯಕ್ತಮಾಡಿರುವನು ಅಲ್ಲಿಯ ವಿದ್ವಜ್ಜನರು ಅವರ ಸಲ ವಾಗಿ ಸಂತೋಷಕೂಟವನ್ನೇರ್ಪಡಿಸಿದ್ದರು ಹೀಗಿರುವಾಗ ಅವರು ಆ ದಿನ-ಮಧುಕರನು ಆತ್ಮಹತ್ಯೆಗೆ ಉದ್ಯುಕ್ತನಾದ ದಿನ-ಕುಸುಮಪುರಕ್ಕೆ ಮೂರು ಮೈಲಿನ ಮೇಲಿದ್ದ ವೇಣುಮಾಧವನ ದರುಶನಕ್ಕೆಂದು ಹೋಗಿದ್ದರು ಮೊಟಾರುಗಳಿದ್ದವು, ಆದರೆ ಕಾಲಿನಿಂದಲೇ ಹೋಗಬೇಕೆಂದು ಸುಬ್ಬಣ್ಣವರು ಅಭಿಪ್ರಾಯಪಟ್ಟುದರಿಂದ ಅವರು ನಡೆದೇ ಹೋಗಿದ್ದರು ಅಲ್ಲಿಂದ ಮರಳಿ ಬರಲು ವೇಳೆ ಬಹಳವಾಯಿತು, ಮಳೆಯೂ ಹತ್ತಿದ್ದಿತು ಇನ್ನೂ ಒಂದೆರಡು ತೊಂದರೆಗಳು ಬಂದವು ಅಂತೂ ಅವರು ಮಧ್ಯರಾತ್ರಿ ಮೀರಿದ ಮೇಲೆಯೇ ಕುಸುಮಪುರಕ್ಕೆ ತಲುಪಿದರು. ಒಕಸ್ಮಾತ್ತಾಗಿ ಅವರು ಕೊಳದ ಸಮೀಪಕ್ಕೆ ಬರುವುದಕ್ಕೂ ಮತ್ತು ಮಧುಕರನು ಆತ್ಮಹತ್ಯೆಗೆ ಯತ್ನಿಸಲಿಕ್ಕೂ ಗಂಟೇಬಿದ್ದಿತು!

ಮಧುಕರನಿಗೆ ಪೂರ್ಣ ಭರವಸೆ ಕೊಟ್ಟು ಅವನನ್ನು ಪೋಲೀಸ ಚಾವಡಿಗೆ ಕಳುಹಿದ ಮೇಲೆ ಕೋಣೆಯಲ್ಲಿ ಮುರಾರಿ ಮತ್ತು ಸುಬ್ಬಣ್ಣವರು ಹೀಗೆ

ಇಬ್ಬರೇ ಉಳಿದರು. ಮುರಾರಿಯು ಸ್ವಭಾವವೆಂದರೆ, ಸುಬ್ಬಣ್ಣವರು ಮತ್ತು ತಾನು ಹೀಗೆ ಇಬ್ಬರೇ ಇದ್ದರೆ ಸುಬ್ಬಣ್ಣವರಿಗೆ ಅನೇಕ ಒಗೆಯ ಪ್ರಶ್ನೆ ಮಾಡುವದು ಯಾವದೊಂದು ಪತ್ತೆದಾರಿ ಪ್ರಕರಣ ಕೈಯಲ್ಲಿದ್ದರೆ ಅದರ ವಿಷಯವಾಗಿ ಸುಬ್ಬಣ್ಣವರ ಊಹಾಪೋಹಗಳನ್ನು ತಿಳಿಯಲೆತ್ನಿಸುವನು. ಆಗಾಗ್ಗೆ ತನ್ನ ಅಭಿಪ್ರಾಯ ಕೊಡುವನು ಮುರಾರಿಯಾದರೂ ಕುಶಾಗ್ರ ಬುದ್ಧಿಯವನು ಆಗಾಗ್ಗೆ ಅವನ ವಿಚಾರಗಳಾದರೂ ಸರಿಯಾಗಿರುತ್ತಲಿದ್ದವು. ಒಂದೊಂದು ಸಲ ತಪ್ಪುತ್ತಲೂ ಇದ್ದವು ಅವನ ವಿಚಾರ ತಪ್ಪಿದಾಗ್ಗೆ ಸುಬ್ಬಣ್ಣವರು ಅವನ ತಪ್ಪು ತೋರಿಸಿಕೊಟ್ಟು, ಏಕೆ ತಪ್ಪಿತು? ಹೇಗೆ ತಪ್ಪಿತು? ಮುಂತಾಗಿ ಬಹು ಚನ್ನಾಗಿ ತಿಳಿಸುವರು ಅವರೀರ್ವರಲ್ಲಿ ಗುರು-ಶಿಷ್ಯರ ಸಂಬಂಧವಿದ್ದಿತೆಂದರೆ ಸಾಕು ತನ್ನ ಪೂರ್ಣ ಹಿತಕರ್ತೃ ಸುಬ್ಬಣ್ಣವರೇ ಎಂದು ಅವನು ನಂಬಿಬಿಟ್ಟಿದ್ದನು ಹಾಗೆಯೇ ತಮ್ಮ ಪೂರ್ಣ ಪ್ರೀತಿಯ ಸ್ಥಾನವೆಂದರೆ ಮುರಾರಿಯೇ, ಎಂದು ಸುಬ್ಬಣ್ಣವರೂ ನಂಬಿ ಅವನ ಉನ್ನತಿಗೆ ಪ್ರತಿನಿತ್ಯ ಯತ್ನಿಸುತ್ತಲಿದ್ದರು ಮುರಾರಿಯು ತಮ್ಮ ಹೆಸರು ಮುಂದೆ ತರಬೇಕೆಂದು ಸುಬ್ಬಣ್ಣವರ ಆಶೆಯಿದ್ದಿತು ಹೀಗೆ ಅಷ್ಟು ಪ್ರೇಮವಿದ್ದ ಮೂಲಕ ಮುರಾರಿ ಅಡ್ಡ ತಿಡ್ಡ ಪ್ರಶ್ನೆಮಾಡಿ, ತನ್ನ ಶಂಕೆಗಳು ಪೂರ್ಣ ಸಿರಸನೆಯಾಗುವಂತೆ ಮಾಡುತ್ತಲಿದ್ದನು. ಅದೂ ಇಬ್ಬರೇ ಇರುವಾಗ. ಅವರ ಮಧ್ಯೆ ಇನ್ನೊಬ್ಬರಿದ್ದರಾಯಿತು. ಮುರಾರಿ ಮೂಕನಿಗಿಂತಲೂ ಮೂಕನಾಗುತಲಿದ್ದನು ಹಾಗೆ ಮಧುಕರನು ಪೋಲೀಸ ಚಾವಡಿಗೆ ಹೋಗುತ್ತಲೇ ಕೋಣೆಯಲ್ಲಿ ಅವರಿಬ್ಬರೇ ಉಳಿದರು ಇಬ್ಬರ ಮನಸ್ಸಿನಲ್ಲಿಯೂ ಮಧುಕರನು ಗುರಿಯಾದ ಕೊಲೆಯ ಆರೋಪದ ವಿಷಯದ ವಿಚಾರವೇ ನಡೆದಿದ್ದಿತು ಮುರಾರಿಯ ಉತ್ಕಂಠೆ ಬಹಳವಾಗಿದ್ದಿತು ಅದರಿಂದ ಅವನು ಚರ್ಚೆಗೆ ಪ್ರಾರಂಭಿಸಿದನು:—

ಸುಬ್ಬಣ್ಣವರೇ, ಮಧುಕರನು ನಿರಪರಾಧಿಯಿರಬಹುದೆ?

ಮುರಾರೀ, ಈಗಲೆ ಯಾವ ವಿಷಯದ ನಿರ್ಧರವನ್ನೂ ಮಾಡಬರುವಂತಿಲ್ಲ. ಮುಖ್ಯವಾಗಿ ಅವನ ಮೇಲೆಯೇ ಆರೋಪ ಬರಲು ಸಂಭವಿಸಿದ ಸಂಗತಿಗಳೇನು? ಅವು ಎಷ್ಟರಮಟ್ಟಿಗೆ ಮಧುಕರನೇ ಅಪರಾಧಿ ಎಂದು ನಿರ್ದೇಶಿಸುತ್ತವೆ? ಈ ಎಲ್ಲ ಸಂಗತಿಗಳನ್ನು ನಾವು ವಿಚಾರಿಸಬೇಕಲ್ಲವೆ?

ಅಹುದ, ಆದರೆ ಪ್ರತ್ಯಕ್ಷ ಕೊಲೆಯಾದ ಸ್ಥಳವು ನಮಗೆ ಸಿಕ್ಕಲಾರದಲ್ಲವೆ?

ಅದೇನೋ ನಿಜವೇ. ಒಂದು ಸಲ ನಾವೇ ಅದನ್ನು ನೋಡಿದ್ದರೆ ಒಳಿತಾಗುತ್ತಲಿದ್ದಿತು, ಆದರೆ ನಾವು ಇಲ್ಲಿಗೆ ಬರುವಷ್ಟರಲ್ಲಿಯೇ ಆ ಕೆಲಸ ಸಂಭವಿಸಿ ಹೋಗಿ-, ಆದರೂ ಪೋಲೀಸರಿಂದ ಆ ಸಂಗತಿ ದೊರೆಕಿಸ ಬಹುದು. ಅವರಾದರೂ ದಕ್ಷತೆಯಿಂದಲೇ ಕಾರ್ಯ ಮಾಡಿರಬಹುದು.

ಅದಂತೂ ಸರಿಯೆ, ಆದರೆ ಇಷ್ಟರಿಂದಲೇ ಮಧುಕರನ ವಿಷಯಕ್ಕೆ ನಿಮ್ಮ ಅಭಿಪ್ರಾಯವೇನಿದ?

ಒಳ್ಳೇದು ಮುರಾರಿ, ಅವನ ಬಗ್ಗೆ ನಿನ್ನ ಮನೋಭಾವನೆ ಹೇಗಿದೆ?

ನನಗೆ ಮಧುಕರನು ನಿರಪರಾಧಿಯಿರಬೇಕೆಂದು ತೋರುತ್ತದೆ.

ಏತರಿಂದ ನೀನು ಈ ಅನುಮಾನ ತೆಗೆದಿರುವೆ?

ಅವನ ಮುಖಮುದ್ರೆಯಿಂದ

ಬರಿಯ ಅವನ ಮುಖಮುದ್ರೆಯಿಂದಲೇ ಹೀಗೆ ಭಾವಿಸಿದೆಯೋ ಅಥವಾ ಇನ್ನೇನಾದರೂ ಆಧಾರಗಳಿವೆಯೊ?.

ಈ ಬಗ್ಗೆ ಇನ್ನೂ ಒಂದೆರಡು ಆಧಾರಗಳಿವೆ. ಅವೇನು?

ಆದರೆ ಅವು ನಿಮಗ ಹೇಗೆನಿಸುವವೋ ನಾನರಿಯೆ

ಅದೇನೇ ಇರಲಿ. ಅದನ್ನು ಆ ಮೇಲೆ ಹೇಳುವೆನು ಈಗ ನಿನ್ನ ವಿಚಾರಗಳನ್ನು ಹೇಳು ನೋಡುವಾ

ಒಂದು ವಿಚಾರವೆಂದರೆ, ಮಧುಕರನು ಕೊಲೆಗಾರನೇ ಆಗಿದ್ದರೆ ಅವನ ವರ್ತನವೇ ಭಿನ್ನ ತರದ್ದಾಗುತಲಿದ್ದಿತು, ಅಂದರೆ ಮಧುಕರನೇ ಕೊಲೆ ಮಾಡಿದ್ದರೆ ಇಷ್ಟು ಬೇಗನೆ ಅವನು ಈ ಸ್ಥಳದಲ್ಲಿ ಕಾಣುತ್ತಿರಲಿಲ್ಲ ಯಾವ ದೊಂದು ಉದ್ದೇಶದಿಂದ ಕೊಲೆ ಮಾಡಿರಬೇಕು ಹಾಗೆ ಅವನು ತನ್ನ ಉದ್ದೇಶ ಸಾಧಿಸುತ್ತಲೇ ಎಲ್ಲಾದ್ಯರೂ ಒಂದು ದೂರ ಸ್ಥಳಕ್ಕೆ ಹೊರಟು ಹೋಗಬಹುದಾಗಿದ್ದಿತ್ತು ಕೊಲೆಯಾದಂದಿನಿಂದ ಇಲ್ಲಿಯೇ ಸುತ್ತುತ್ತಲಿರು ತ್ತಾನೆ ಕೊಲೆಯು ಅಪರಾಧಿಯು ಗೊತ್ತುಹತ್ತ ಬಹುದೆಂಬ ಆಶೆಯೋ ಅದಕ್ಕೆ ಕಾರಣವಿರಬೇಕಲ್ಲವೆ' ತಾನೇ ಕೊಲೆಗಾರನಾಗಿದ್ದರೆ ಇಲ್ಲಿ ಇರುವದು ಘಾತುಕ ವೆಂದರಿತು ಬೇರೆ ದಾರಿ ಸ್ವೀಕರಿಸಬೇಕಾಗುತ್ತಿದ್ದಿಲ್ಲವೆ? ಅಥವಾ ತನ್ನೀ ಅಪರಾಧವು ಬಯಲಿಗೆ ಬರಕೂಡದೆಂದು ಯತ್ನವನ್ನಾದರೂ ಮಾಡಬೇಕಾ ಗುತ್ತಿರಲಿಲ್ಲವೆ? ಈ ಎಲ್ಲ ಸಂಗತಿಗಳನ್ನು ಮರೆತರೂ ಆತನು ಆತ್ಮಹತ್ಯೆಗೆ ಉದ್ಯುಕ್ತನಾದ ಸಂಗತಿಯೇ ಅವನು ನಿರಪರಾಧಿಯೆಂದು ಸಿದ್ಧಮಾಡಲು ಸಾಕಷ್ಟಾಗಿದೆ ಅಪರಾಧಿಯೇ ತಾನಾಗಿದ್ದಲ್ಲಿ ಅಪಮಾನದ ಬಗ್ಗೆ ಯೋಚಿ ಸದೆ, ಶಿಕ್ಷೆಗೆ ಗುರಿಯಾಗುತ್ತಲಿದ್ದನು ಒಂದುವೇಳೆ ಸಚ್ಛೀಲನಿದ್ದು ಕ್ರೋಧ.

ವಶನಾಗಿ ಕೊಲೆ ಮಾಡಿದ್ದರೆ ಪಶ್ಚಾತ್ತಾಪಹೊಂದಿ, ತನ್ನ ಅಪರಾಧಕ್ಕೆ ಆಲೋಚಿಸಿದರೂ ಮಧುಕರನು ನಿರಪರಾಧಿಯೇ ಇರಬೇಕೆಂದು ನನ್ನ ಮನವರಿಕೆಯಾಗಹತ್ತಿದೆ. ನಿಮ್ಮವಿಚಾರ ಹೇಗಿದೆಯೋ ನಾನರಿಯೆ

ಹಾಗಾದರೆ ಮಧುಕರನು ನಿರಪರಾಧಿಯೆನ್ನುವೆಯಾ?

ನನ್ನ ವಿಚಾರವಂತೂ ಹಾಗಿದೆ, ಆದರೆ ಸುಬ್ಬಣ್ಣವರ, ಈ ಕೊಲೆಯನ್ನು ಯಾರು ಮಾಡಿರಬೇಕು?

ಸದ್ಯದ ಪರಿಸ್ಥಿತಿಯಲ್ಲಿ ಈ ಸಂಗತಿಯು ವಿಚಾರಕ್ಕೆ ನಿಲುಕದುದಿದ ಏಕೆಂದರೆ, ನಮಗೆ ಇನ್ನೂ ಕೊಲೆ ಹೇಗಾಯಿತು, ಏತರಿಂದಾಯಿತು' ಮುಂತಾದ ಯಾವ ಸಂಗತಿಯೂ ತಿಳಿದಿರುವುದಿಲ್ಲ ಅದನ್ನು ನಾವು ಮೊದಲು ತಿಳಿಯಬೇಕಲ್ಲವೆ! ಅದೇನೋ ಸರಿಯೇ, ಆದರ .

ಮುರಾರಿ, ನಾವಿನ್ನೂ ಬಹುತರ ಕತ್ತಲೆಯಲ್ಲಿಯೇ ಇರುತ್ತೇವ ಅಲ್ಪವಾದರೂ ಪ್ರಕಾಶ ಸಿಕ್ಕದೆ ಅನುಮಾನ ತೆಗೆಯುವದು ಸಾಧ್ಯವಿಲ್ಲ ಆದರೂ ನಾವು ಈ ಸಂಗತಿಯ ಬಗ್ಗೆ ಒಂದೆರಡು ಊಹೆ ಕಟ್ಟಲು ಸಾಧ್ಯವಿದ ಈ ಊಹಗಳು ತೀರಾ ಅಪಕ್ವಸ್ಥಿತಿಯಲ್ಲಿ ಕಟ್ಟಿದವುಗಳೆಂಬವನ್ನು ಮರಯ ಲಾಗದು ಈಗಿನ ನಮ್ಮ ಊಹೆಗಳು ಆ ಮೇಲೆ ಆಧಾರವಿಲ್ಲದ ಉರುಳ ಬಹುದು, ಅಥವಾ ಆಧಾರ ದೊರೆತು ಬಲವುಳ್ಳವೂ ಆಗಬಹುದು

ನಿಮ್ಮ ಊಹೆಗಳಾವವು?

ಎಲ್ಲರಿಗೂ ತಿಳಿಯಬಹುದಾದ ಒಂದು ವಿಚಾರವೆಂದರೆ, ಸದ್ಯದ ಕೊಲೆಯ ಪ್ರಕರಣದಲ್ಲಿ ಮಧುಕರನೇ ಕೊಲೆ ಮಾಡಿರಬೇಕು, ಅಥವಾ ಇನ್ನೊಬ್ಬನು ಕೊಲೆಮಾಡಿ ಅಪರಾಧವು ಮಧುಕರನ ಮೇಲೆ ಹೊರಳುವಂತೆ ಸಾಧನಗಳನ್ನಿರಿಸಿ ಹೋಗಿರಬೇಕು

ನಿಜ ಇವು ಮುಖ್ಯವಾದ ಎರಡು ಮಾರ್ಗಗಳು. ಇವುಗಳಲ್ಲಿ ಸರಿಯಾದ ಮಾರ್ಗವಾವುದೆಂದರಿಯಬೇಕು?

ಮಧುಕರನು ನಿರಪರಾಧಿಯೆಂದು ನೀನು ಅನ್ನುವೆಯಲ್ಲವೆ?

ಅಹುದು, ಹಾಗೆ ನನ್ನ ವಿವೇಕವು ಹೇಳುತ್ತಲಿದೆ

ವಿವೇಕವು ಹೇಳುತ್ತಲಿರಲು, ಅದನ್ನು ಅಲಕ್ಷ್ಯಮಾಡುವದು ಅನುಚಿತವು. ಆದುದರಿಂದ ಅವನು ನಿರಪರಾಧಿಯೆಂದೇ ತಿಳಿಯೋಣ ಮಧುಕರನು ನಿರಪರಾಧಿಯಿದ್ದುದಾಗಿದ್ದರೆ, ಅನ್ಯರಾರೋಕೊಲೆಗಾರರಿರಬೇಕೆನ್ನುವದು ಸಹಜವಲ್ಲವೆ?

ಅಹುದು, ಆದರೆ ಆ ಅನ್ಯರಾರಿರಬೇಕು?

ಆಗಲಿ ಕೊಂಚ ಅವಧಿ ಈ ಸಂಗತಿಯನ್ನು ಮರೆತುಬಿಟ್ಟು ಶ್ರೀನಿವಾಸರಾಯರ ಕೊಲೆ ಏಕಾಗಿರಬಹುದೆಂಬದನ್ನು ಊಹಿಸಲೆತ್ನಿಸುವಾ

ಸಾವುಕಾರರಿದ್ದುದರಿಂದ ಹಣಕ್ಕೋಸುಗವಾಗಿ ಆಗಿರಬಹುದು, ಇಲ್ಲವೆ ಯಾವನೊಬ್ಬ ಗುಪ್ತಶತ್ರುವಿದ್ದು, ಅವನು ಕೊಲೆ ಮಾಡಿರಬೇಕು.

ಅಥವಾ ಅವರ ದೂರದ ಆಪ್ತನೊಬ್ಬನಿದ್ದು, ಅವರ ಆಸ್ತಿ ದೊರಕಿಸುವ ಹೊಂಚು ಹಾಕಲು ಹೀಗೆ ಮಾಡಿದ್ದರೂ ಮಾಡಿರಬಹುದು

ನಿಜ ಈ ಕೊಲೆಯ ಸುದ್ದಿಯನ್ನು ವೃತ್ತಪತ್ರದಲ್ಲಿ ನಾವು ಓದಿರುವೆವು ಅವರಲ್ಲಿ ಶ್ರೀನಿವಾಸರಾಯರ ಹಣ ಹೋಗಿಲ್ಲವೆಂದು ತಿಳಿದಿದೆ, ಎಂದು ಬರೆದಿರುವದು ಅಂದಮೇಲೆ ಹಣದ ಸಲುವಾಗಿ ಈ ಕೊಲೆ ಆಗಿರಲಿಲ್ಲವೆಂಬ ವಿಚಾರ ಬರುತ್ತಲಿದೆ.

ಹಣಕ್ಕೆಂದು ಅವರ ಕಲ್ಪನೆಯಾಗದಿದ್ದರೆ ಮೇಲೆ ಹೇಳಿದ ಮೂರರಲ್ಲಿ ಎರಡರ ವಿಚಾರಗಳು ಮಾತ್ರ ಉಳಿಯುವವು. ಇನ್ನು ಇವುಗಳ ವಿಚಾರ ಮಾಡುವದಕ್ಕೆ ಮೊದಲು ನಾವು ಇನ್ನೊಂದು ಸಂಗತಿ ವಿಚಾರಿಸಬೇಕಾಗುವುದು ಏನೆಂದರೆ, ಮಧುಕರನ ಮೇಲೆಯೇ ಅಪರಾಧ ಹೊರಲು ಪ್ರಬಲವಾದ ಕಾರಣಗಳಿವೆ, ಎಂದು ನಾವು ಅರಿತಿರುವೆವು ಅವಾವವು? ಎಂಬುದು ನಮಗೆ ಇನ್ನೂ ಗೊತ್ತಾಗಿಲ್ಲ; ಆದರೂ ಅಷ್ಟು ಪ್ರಬಲವಾದ ಕಾರಸ್ಥಾನ ರಚಿಸಲು ಕಾರಣವಾದರೂ ಅಂಥ ಪ್ರಬಲವಾದುದೇ ಇರಬೇಕಲ್ಲವೆ?

ಅಂದರೇನು?

ಅಂದರೆ ಇಷ್ಟೇ. ಕೊಲೆಗಾರನ ಮನಸ್ಸಿನಲ್ಲಿ ಸಾವುಕಾರರ ಕೊಲೆಯಾಗಬೇಕು ಎಂದಿಷ್ಟೇ ಇರದೆ, ಅದರಿಂದ ಮಧುಕರನೂ ಮರಣಹೊಂದಬೇಕೆಂದಿರಬೇಕೆಂದೂ ಅನುಮಾನಿಸಲು ಬರುವುದಲ್ಲವೆ?

ಅಹುದು, ನಿಮ್ಮ ವಿಚಾರ ನಿಜವಿದೆ, ಆದರೆ ಸುಬ್ಬಣ್ಣವರೇ, ಹಿಗೇಕಿರಬಹುದು?

ಅದಕ್ಕೆ ಕಾರಣಗಳು ಎರಡಿವೆ? ಅವಾವು?

ಒಂದು, ಯಾರ ಮೇಲಾದರೂ ಕೊಲೆ ಹೊತ್ತು ತಾನು ಸುರಕ್ಷಿತವಾಗಿ ಉಳಿಯಬೇಕೆಂದಿರಬೇಕು, ಆದರೆ ಈ ಸ್ಪಷ್ಟೀಕರಣವು ಅಷ್ಟು ಬಲವತ್ತರವಾಗಿ ತೋರುವುದಿಲ್ಲ ಹೇಗೆ?

ಅದಕ್ಕೆ ಅವನು ಮಧುಕರನನ್ನೇ ಏಕೆ ಆರಿಸಬೇಕು? ಎಂದು ಸಂದೇಹ ಬರುತ್ತಿದೆಯಲ್ಲವೆ? ಶ್ರೀನಿವಾಸರಾಯರ ಮನೆಯಲ್ಲಿ ಬೇರೆ ಆಳುಗಳಿದ್ದುವು ಅವರಲ್ಲೊಬ್ಬನನ್ನು ಹಾಕಿದರೆ ಆಗುತ್ತಲಿದ್ದಿತು. ಇದರಿಂದ ನೋಡಲಾಗಿ

ಕೊಲೆಗಾರನ ಮನಸ್ಸಿನಲ್ಲಿ ತನ್ನ ಮೇಲೆ ಕೊಲೆಯ ಆರೋಪ ಬರಕೂಡ ದೆಂದಿರಬೇಕೆಂಬದಂತೂ ಸರಿಯೇ, ಆದರೆ ಆ ಕೊಲೆಯ ಆರೋಪವು ಮಧು ಕರನ ಮೇಲೆಯೇ ಹೊರಬೇಕೆಂದಿರುವಂತೆ ತೋರುತ್ತದಲ್ಲವೆ? ಈ ವಿಷಯದ ವಿಚಾರಮಾಡಲು, ನಾನು ಮೇಲೆ ಹೇಳಿದ ಮೂವರಲ್ಲಿ ಕೊನೆಯವನಿ ಬೇಕೆಂದು ತೋರುತ್ತದಲ್ಲವೆ?

ಅಂದರೆ, ಶ್ರೀನಿವಾಸರಾಯರ ದೂರದ ಆಪ್ತನಿರಬೇಕೆಂದೇನು?

ಅಹುದು, ಆದರೆ ಅವನಿಗೆ ಮಧುಕರನಲ್ಲಿ ಮತ್ಸರವೇಕೆ?

ಅದನ್ನು ಈಗ ಹೇಳಲಾರೆನು. ಆ ಬಗ್ಗೆ ಊಹೆ ಮಾತ್ರ. ಈ ಎಲ್ಲ ಊಹೆಗಳು ಸುಳ್ಳಾಗಿ ಅವುಗಳ ಸ್ಥಳದಲ್ಲಿ ಬೇರೊಂದು ಬಂದು ನಿಂತರೂ ನಿಲ್ಲಬಹುದು.

ನಿಜ ಮುಂದಿನ ಸಂಗತಿಗಳನ್ನರಿತವರಾರು? ಆದರೆ ಸುಬ್ಬಣ್ಣವರೆ, ಈ ಸಂದರ್ಭದಲ್ಲಿ ನಾವು ಯಾವ ಮಾರ್ಗವಾಗಿ ಹೋಗಬೇಕು?

ಮುರಾರಿ, ಈಗಲೆ ನಾವು ಮಾರ್ಗ ನಿಶ್ಚಯಿಸುವದು, ಅಪ್ರಸ್ತುತ ವಾಸಗುತ್ತದೆ. ಮೊದಲು ಪೋಲೀಸರಿಂದ ಎಲ್ಲ ವಿವರ ತಿಳಿಯಬೇಕು ಆ ಮೇಲೆ ವಿಚಾರಿಸಲಿಕ್ಕೆ ಬರಬಹುದು. ಈಗಲೆ ನಾವು ಮುಂದೆ ಹೋಗಲಾ ರೆವು; ಆದರೂ ನಮಗೆ ಒಂದು ಮಾರ್ಗವು ಇರುವಂತೆ ತೋರುತ್ತದೆ.

ಅದಾವುದು?

ತೀರಾ ಅಸ್ಪಷ್ಟವಾದ ಕಲ್ಪನೆ ಮಧುಕರನು ಹೇಳಿದ ಸಂಗತಿಯನ್ನು ಲಕ್ಷ್ಯವಿಟ್ಟು ಕೇಳಿದೆಯಾ? ಕೇಳಿದೆನು

ಹಾಗಾದರೆ ನಿನಗೆ ನನ್ನ ವಿಚಾರವು ಮೊದಲೇ ತಿಳಿದಿರಬೇಕು

ಅದಾವುದು?

ನಿನಗೆ ಕೊಲೆಗಾರರ ಬಗ್ಗೆ ಕೊಂಚವಾದರೂ ಕಲ್ಪನೆ ಬಂದಿದೆಯೇ?

ಇಲ್ಲ, ಅತ್ಯಲ್ಪವಾದರೂ ಊಹೆಯಿಲ್ಲ ಸುಬ್ಬಣ್ಣವರೇ, ಈಗಲೇ ನೀವು ಕೊಲೆಗಾರನಾರೆಂಬದನ್ನು ಊಹಿಸಿರುವಿರಾ?

ಇಲ್ಲ ಕೊಲೆಗಾರನ ಬಗ್ಗೆ ಯಾವ ಊಹೆಯನ್ನೂ ನಾನು ಕಂಡು ಹಿಡಿಯಲು ಶಕ್ತನಾಗಿರುವದಿಲ್ಲ.

ಹಾಗಾದರೆ ನಿಮಗೆ ಹೊಳೆದ ವಿಚಾರವೇನು?

ನೀನು ಮಧುಕರನು ಹೇಳಿದ ಸಂಗತಿಯನ್ನು ಚನ್ನಾಗಿ ವಿಚಾರಿಸಿಲ್ಲ ಆದರಿಂದ ಪ್ರತ್ಯಕ್ಷ ಕೊಲೆಗಾರನಿಲ್ಲದಿದ್ದರೂ ಅವನ ಸಹಾಯಕರ ಹೆಸರು ಹೊಳೆಯುವಂತಿದೆ

ಅಂ, ನಾನಾದರೂ ಚನ್ನಾಗಿಯೇ ಕೇಳಿದನು, ಆದರೆ ನನಗೆ ಏನೂ ಹೊಳೆಯುವದಿಲ್ಲ. ಅದೇನು? ನೀವೇ ಹೇಳಿರಿ.

ಈ ನಾಲ್ಕಾರು ದಿವಸ ನಾನು ಇದೇ ಊರಲ್ಲಿ ಇರುತ್ತಿರುವೆನು. ತನ್ನ ದುಃಖದಲ್ಲಿಯೇ ಮುಳುಗಿ ಹೋಗಿ ಅರಣ್ಯವಾಸ ಕೈಕೊಂಡು, ಜನರ ಕಣ್ಣಿಗೆ ಕೂಡ ಬೀಳದಿರುವ ಮಧುಕರನಿಗೆ ಈ ಸಂಗತಿ ಗೊತ್ತಿರಲು ಶಕ್ಯವಿಲ್ಲ, ಆದರೆ ಮಧುಕರನ ಮಿತ್ರ ಇಂದುಶೇಖರನಿಗ ನನ್ನ ಇಲ್ಲಿಕೆಯ ಬಗ್ಗೆ ಚನ್ನಾಗಿ ಗೊತ್ತಿರಲೇಬೇಕಲ್ಲವ? ನಿಜ.

ಹಾಗಿದ್ದರೂ ಅವನು ಮಧುಕರನಿಗೆ ನನ್ನ ಬಗ್ಗೆ ಸ್ವಲ್ಪ ಸಂಗತಿಯನ್ನೇಕೆ ಹೇಳಿರಬೇಕು? ನಾನು ಇದೇ ಊರಿನಲ್ಲಿದ್ದ ಸಂಗತಿ ನನಗೆ ತಿಳಿಯದಿದ್ದರ ತಾನರಿಯನೆಂದು ಹೇಳಬೇಕಿದ್ದಿತಲ್ಲವೆ? ಹೀಗಿದ್ದರೆ ಅವನು ನನ್ನ ವಿಷಯವಾಗಿ ಸಟೆಯಾಡಲು ಕಾರಣವೇನು?

ಅಂದರೆ ಇಂದುಶೇಖರನು ಕೊಲೆಗಾರನಾಗಲಿ ಕೊಲೆಗಾರನ ಹಸ್ತಕನಾಗಲಿ ಇರಬೇಕೆಂದು ನಿಮ್ಮ ತರ್ಕವಿದಯೋ?

ಬರಿಯ ತರ್ಕವಿರದೆ, ನಿಜ ಸಂಗತಿಯೇ ಇರಬೇಕೆಂದು ತೋರುತ್ತದೆ. ಏಕೆಂದರೆ, ಮಧುಕರನು ನನಗೆ ಹೇಳಿಕೊಂಡರ ಹಣದ ಕಳುವಿಲ್ಲವಿದ್ದರೂ ನಾನು ಇವರ ಶೋಧ ಕೈಕೊಳ್ಳಬಹುದು. ಆಗ್ಗೆ ಇವರ ಅಪರಾಧ ಬಯಲಿಗೆ ಬಂದು, ಅವರು ಮಾಡಿದ ಯತ್ನವು ನಿಷ್ಫಲವಾಗುವುದು. ಇಷ್ಟೇ ಅಲ್ಲ, ಇವರೆಲ್ಲರೂ ಶಿಕ್ಷೆಗೆ ಗುರಿಯಾಗಬೇಕಾಗುವುದು. ಆದುದರಿಂದ ನನ್ನ ವರಗೆ ಈ ಸಂಗತಿ ಬರದಂತೆಯೇ ಮಾಡಬೇಕೆಂದು ಅತ ಅವಶ್ಯ ನುಡಿದಿರಬೇಕಲ್ಲವೆ?

ಒಂದು ವೇಳೆ ನಿಮ್ಮ ವಿಚಾರದಂತೆ ಇಂದುಶೇಖರನು ಕೊಲೆಗಾರನಾಗಲಿ ಕೊಲೆಗಾರನ ಹಸ್ತಕನಾಗಲಿ ಇದ್ದುದಾಗಿದ್ದರೆ, ಇಷ್ಟು ಶ್ರಮಪಟ್ಟು ಮಧುಕರನ ಯೋಗಕ್ಷೇಮವನ್ನೇಕೆ ವಿಚಾರಿಸುತ್ತಿದ್ದನು?

ಓಹೋ! ಅದರೊಳಗೇನೂ ಮಹತ್ವವಿಲ್ಲ. ಮಿತ್ರತ್ವದ ನಟನೆಗಾಗಿರಬಹುದು, ಇಲ್ಲವೆ ಅವನು ಫರಾರಿಯಾಗದಂತೆ ನೋಡಿಕೊಳ್ಳುವ ಸಕ್ಕಿದ್ದರೂ ಇರಬಹುದು. ಏನೇ ಆದರೂ ನಾವು ಈಗ ಈ ಸಂಗತಿಯನ್ನು ಚನ್ನಾಗಿ ವಿಚಾರಿಸಲೇಬೇಕು, ಆದರೆ ಅದಕ್ಕೂ ಮೊದಲಿನ ವಿಷಯ ಪೋಲೀಸರ ಬಳಿಗೆ ಹೋಗುವುದಿದೆ. ನಡೆ, ಅಲ್ಲಿಗೆ ಹೋಗುವಾ.

ಒಡನೆಯೇ ಇಬ್ಬರೂ ಪೋಲೀಸ ಆಫೀಸಿಗೆ ಹೊರಟರು. ಕುಸುಮಪುರದ ಕಿಂಚಿತ್ ಪರಿಚಯವನ್ನು ಈ ಮೊದಲೇ ತಮಗೆ ಮಾಡಿಕೊಟ್ಟಿರುವೆನು. ರಾಜಸ್ಥಾನದ ಹೊರಭಾಗದಿಂದ ನಾಲ್ಕು ದಿಕ್ಕಿಗೆ ನಾಲ್ಕು ವಿಶಾಲ

ವಾದ ರಾಜಮಾರ್ಗಗಳಿದ್ದುವೆಂದು ಹಿಂದೆ ಹೇಳಿರುವೆನು. ಇದರಿಂದ ಪಟ್ಟಣವೇ ನಾಲ್ಕು ಭಾಗವಾಗಿ ವಿಭಾಗಿಸಲ್ಪಟ್ಟಿದ್ದಿತು. ಒಂದೊಂದು ಭಾಗದಲ್ಲಿ ಒಂದೊಂದು ಸಂಸ್ಥೆಯಿದ್ದಿತು. ಒಂದರಲ್ಲಿ ಪ್ರಾಥಮಿಕ ಶಿಕ್ಷಣದಿಂದಾರಂಭವಾಗಿ ಉಚ್ಚ ವರ್ಗದ ವರೆಗಿನ ಎಲ್ಲ ಶಿಕ್ಷಣ ಸಂಸ್ಥೆಗಳಿದ್ದುವು. ಇನ್ನೊಂದರಲ್ಲಿ ಎಲ್ಲ ಬಗೆಯ ಅಧಿಕಾರೀ ವರ್ಗದವರ ಕಚೇರಿಗಳಿದ್ದವು. ಮತ್ತೊಂದರಲ್ಲಿ ಪೇಟೆ, ಮನರಂಜನೆಯ ಸಾಧನಗಳಿದ್ದುವು. ನಾಲ್ಕನೆಯ ಭಾಗದಲ್ಲಿ ಊರ ಜನವಸತಿಯಿದ್ದಿತು. ಆ ಎಲ್ಲ ಇದರ ವಿಕೆಯು ಮೊದಲೇ ಯೋಚಿಸಿ ಪೂರ್ವಸೂಚನೆಗಳನ್ನೆಲ್ಲ ಒಳಗೊಂಡಂತೆ ಕಟ್ಟಲ್ಪಟ್ಟಿದ್ದಿತು. ಸಹಜವಾಗಿಯೂ ಅದೊಂದು ಮಾದರಿಯ ಪಟ್ಟಣವೇ ಆಗಿದ್ದಿತು.

ಆಯಾ ಭಾಗಗಳಲ್ಲಿ ಆಯಾ ಉದ್ಯೋಗಕ್ಕೆ ಸಂಬಂಧಿಸಿದ ಜನರು ವಾಸಮಾಡಲು ಸಾಕಷ್ಟು ಬಂಗಲೆಗಳಿದ್ದುವು. ಸುಬ್ಬಣ್ಣವರು ಅಲ್ಲ ಹೋದಾಗ ಸ್ವತಃ ಮಹಾರಾಜನು ತನ್ನ ಅರಮನೆಯಲ್ಲಿಯೇ ವಾಸಮಾಡುವಂತೆ ಹೇಳಿದನು, ಆದರೆ ಅದು ಅವರಿಗೆ ಒಪ್ಪಿತವಾಗಲಿಲ್ಲ. ಅವರು ಊರ ಬಹಿರ್ಭಾಗದಲ್ಲಿನ ಒಂದು ಶಾಂತ ಸ್ಥಳದಲ್ಲಿ ವಾಸ ಮಾಡಿದ್ದರು. ಕುದುರೆಯ ಗಾಡಿಯಿಂದ ನಿತ್ಯವೂ ಬೇರೆ ಬೇರೆ ಸ್ಥಳಗಳಿಗೆ ಹೋಗುತ್ತಲಿದ್ದರು. ಇಬ್ಬರೂ ಮನೆಯಿಂದ ಹೊರಟು ಒಂದು ಕುದುರೇಗಾಡಿ ಹತ್ತಿ, ಪೋಲೀಸು ಕಚೇರಿಗೆ ಹೋದರು. ಪೋಲೀಸ ಚಾವಡಿಗೆ ತಲ್ಲುಪುತ್ತಲೆ ಸುಬ್ಬಣ್ಣನವರು ತಮ್ಮ ಹೆಸರಿನ ಕಾರ್ಡು ಕೊಟ್ಟು ಕಳುಹಿದರು. ಒಡನೆಯೇ ಪೋಲೀಸ ಕಮಿಶನರ ಶ್ರೀನಿವಾಸರಾಯರು ಸ್ವತಃ ಹೊರಗ ಬಂದು ಸುಬ್ಬಣ್ಣವರಿಗೆ ಹಸ್ತಾಂದೋಲನವಿತ್ತು, ನಗುಮುಖದಿಂದ ಸ್ವಾಗತಿಸಿ ಒಳಗೆ ಕರೆದೊಯ್ದರು. ಶ್ರೀನಿವಾಸರಾಯರ ಸ್ವಂತದ ಕಚೇರಿ ಕೋಣೆಯಲ್ಲಿ ಕುಳ್ಳಿರುತ್ತಲೇ ಅವರ ಮಾತಿಗಾರಂಭವಾಯಿತು.

ಸುಬ್ಬಣ್ಣವರೇ, ಸಹಜವಾಗಿ ಬಂದಿರುವಿರೊ ಅಥವಾ ಏನಾದರೂ ಕೆಲಸವಿದ್ದಿತೋ? ಕೊಂಚ ಕೆಲಸವೂ ಇದ್ದಿತು.

ಹಾಗಾದರೆ ಕೇಳಬಹುದಲ್ಲವೆ, ನಿಮ್ಮ ಯಾವ ಕಾರ್ಯ ಮಾಡಬೇಕೆಂಬುದನ್ನು? ತಿಳಿಸಿದರೆ ನಾನು ಆನಂದದಿಂದ ಕೈಕೊಳ್ಳುವೆನು

ಈಗ ತಮ್ಮಲ್ಲಿ ಒಂದು ಕೊಲೆಯ ಪ್ರಕರಣ ನಡೆದಿದೆಯಲ್ಲವೆ?

ಯಾವದು? ಆ ಶ್ರೀನಿವಾಸರಾಯರ ಕೊಲೆಯ ಪ್ರಕರಣವೇನು?

ಅಹುದು, ಅದೇ. ಆ ಬಗ್ಗೆ ನನಗೆ ಎಲ್ಲ ಸಂಗತಿ ಬೇಕಾಗಿದ. ನಿಮಗೆ ತಿಳಿದಿರುವ ಎಲ್ಲ ಸಂಗತಿ ಹೇಳುವಿರಾ?

ಓಹೋ! ಅದಕ್ಕೇನು? ಆ ಸಂಬಂಧದ ಕಾಗದ-ಪತ್ರಗಳನ್ನೇ ನಿಮ್ಮ ಅವಲೋಕನೆಗಾಗಿ ಕೊಡುವೆನು, ಆದರೆ ಸುಬ್ಬಣ್ಣವರೇ, ಅವುಗಳು ನಿಮಗೆ ಬೇಕಾಗಿರುವ ಕಾರಣವನ್ನು ನಾನು ಕೇಳಬಹುದೆ? ಏನೋ ಸುಮ್ಮನೆ ಕೇಳಿದೆನು. ನೀವು ಅನ್ಯಥಾ ಭಾವಿಸಕೂಡದೆಂದು ವಿನಂತಿಯುದೆ

ಛೆ! ಅದಕ್ಕೇನು ಶ್ರೀನಿವಾಸರಾಯರೇ? ಆ ವಿಷಯವಾಗಿ ನಾನು ಪೂರ್ಣ ವಿಚಾರಮಾಡಬೇಕೆಂದಿರುವೆನು.

ಅಂದರೆ? ಮಧುಕರನ ಆಪರಾಧದ ವಿಷಯದಲ್ಲಿ ನಿಮಗೆ ಸಂಶಯ ಬಂದಿದೆಯೇನು?

ಈಗಲೆ ನಾನು ಏನೂ ಹೇಳಲಾರೆನು ನಿನ್ನೆ ಆಕಸ್ಮಿಕವಾಗಿ ನಾನು ಆತನನ್ನು ಕಂಡೆನು. ಆ ತರುಣನು ಬಹಳವಾಗಿ ದುಃಖಿಸುತ್ತಿದ್ದನು ತನ್ನ ದುರ್ದೈವದ ಬಗ್ಗೆ ಬಹಳವಾಗಿ ಹಳಹಳಿಸಿದನು ಒಂದು ಸಲ ಎಲ್ಲ ಸಂಗತಿಯನ್ನೂ ಸಮಾಲೋಚಿಸಬೇಕೆಂದು ನನಗೆ ಹೇಳಿಕೊಂಡಿರುವನು ಆದುದರಿಂದ ಎಲ್ಲ ಕಾಗದ-ಪತ್ರಗಳನ್ನೂ ನೋಡಿ ಆ ಮೇಲೆ ಮುಂದಿನ ವಿಚಾರ ತಿಳಿಸುವೆನು

ಹಾಗೇಯೇ ಮಾಡಿರಿ ಅದಕ್ಕೆ ನನ್ನ ಆತಂಕವೇನೂ ಇಲ್ಲ

ಶ್ರೀನಿವಾಸರಾಯನು ಕರೆಯುವ ಗಂಟೆ ಬಾರಿಸಲು ಒಬ್ಬ ಶಿಪಾಯಿ ಬಂದು ಸಲಾಮು ಮಾಡಿದನು ಅವನಿಗೆ ಒಂದು ಚೀಟಿ ಕೊಟ್ಟು ಪೋಲೀಸ ಸುಪರಿಂಟೆಂಡೆಂಟ ವೆಂಕಟರಾಯರ ಬಳಿಗೆ ಕಳುಹಿಸಿದನು.

ಶ್ರೀನಿವಾಸರಾಯರೇ, ಸಾವುಕಾರರ ಕೊಲೆಯ ಬಗ್ಗೆ ನಿಮ್ಮ ಅಭಿಪ್ರಾಯವೇನು?

ನಮ್ಮ ಅಭಿಪ್ರಾಯವೇನು? ನಾವು ಕಾಯಿದೆಯ ಗುಲಾಮರು ಅದರ ವ್ಯತಿರಿಕ್ತ ನಾವು ವಿಚಾರವನ್ನೇ ಮಾಡುವದಿಲ್ಲ

ರಾಜ್ಯದಾಡಳಿತದ ಸೌಲಭ್ಯಕ್ಕೋಸುಗ ಹಾಗೆ ಮಾಡಲೇಬೇಕು. ನಮ್ಮಲ್ಲಿಯಂತೂ ಹೆಚ್ಚು ವಿಚಾರ ಕೂಡ ಮಾಡುವದಿಲ್ಲ ಆದರೆ ನಿಮ್ಮ ರಾಜ್ಯದ ಮಾತು ಹಾಗಿಲ್ಲ ಪ್ರತಿಯೊಂದು ವಿಷಯದಲ್ಲಿಯೂ ವಿವೇಕಕ್ಕೆ ಸ್ಥಾನವಿದೆ ಮಧುಕರನ ವಿಷಯದಲ್ಲಿ ನಿಮ್ಮ ವಿಚಾರ ಹೇಗಿದೆ?

ಸುಬ್ಬಣ್ಣವರೇ, ನೀವು ಹೆಸರಾದ ತುಂಬ್ಬಿಗಾರರು. ನನ್ನ ವಿಚಾರಗಳನ್ನು ಮುಖಾವಲೋಕನ ಮಾತ್ರದಿಂದಲೇ ಅರಿಯುವಿರಿ ನಿಮ್ಮೆದುರು ಸಟೆಯಾಡಿದರೆ ನಡೆಯದು

ಸಾಹೇಬರೇ, ನಿಮ್ಮ ಸೌಜನ್ಯ ಬಹಳವಾಯಿತು ಹೋಗಲಿ ನಾವಿ ಬ್ಬರೂ ನಮ್ಮ ನಮ್ಮ ಸ್ಥಳ-ಮಾನಗಳನು ಕ್ಷಣಹೊತ್ತು ಮರೆಯೋಣ ನಿಜವಾಗಿಯೂ ನನಗೆ ಮಧುಕರನು ನಿರಪರಾಧಿಯಿರಬೆ-ಕಂದು ತೋರು ತ್ತಿನೆ, ನಿಮ್ಮ ವಿಚಾರ ಹೇಗಿದೆ?

ಸುಬ್ಬಣ್ಣವರೇ, ನಿಜವಾಗಿಯೂ ನನಗೆ ಮಧುಕರನ ವಿಷಯವಾಗಿ ಕನಿಕರವೆನಿಸುತ್ತದೆ ಆದರ ಎಷ್ಟು ಸೂಕ್ಷ್ಮವಾಗಿ ಯೋಚಿಸಿದರೂ ಅವನನ್ನುಳಿ ಸುವ ಸಾಧನವೇ ಸಿಕ್ಕುವದಿಲ್ಲ ಬದ್ದಿರುದ್ಧವಾಗಿ ಪ್ರತಿಯೊಂದು ಸಂಗ ತಿಯೂ ಅವನೇ ಅಪರಾಧಿಯೆಂದು ಸಾರಿ ಹೇಳುತ್ತಲಿವೆ ಆ ಎಲ್ಲ ಸಂಗತಿ ಗಳಿಗೆ ಎದುರಾಗಿ ನಮ್ಮ ಮನೋಭಾವನೆ ದೂರದಗೆಯುವದೇ ಮೂರ್ಖ ತನದ್ದೆಂದು ತೋರುತ್ತದೆ ಅಂತೆಯೇ ಸುಮ್ಮನ ಕುಳಿತಿರಬೇಕಾಗಿದೆ

ಒಳ್ಳೇದು ಶ್ರೀನಿವಾಸರಾಯರೇ, ಸಾವುಕಾರರ ಬಗ್ಗೆ ನಿಮ್ಮ ಅಭಿ ಪ್ರಾಯವೇನು?

ಸಾವುಕಾರರು ಒಳ್ಳೆಯವರಿದ್ದರು ಹಣಗಾರರು. ಮನುಷ್ಯನೆಂದಲ್ಲ ಲೋಪಗಳಿರಲೇಬೇಕಲ್ಲವ? ಹಾಗ ಅವರಲ್ಲಾದರೂ ಒಂದೆರಡು ದುರ್ಗುಣ ಗಳಿದ್ದವು; ಆದರೆ ಅವುಗಳಿಂದ ಅನ್ಯರಿಗೆ ಅಲ್ಪವಾದರೂ ಅಪಾಯವಿರಲಿಲ್ಲ ಹಣಗಾರರೆಂದು ಗರ್ವಿಷ್ಟರಲ್ಲ, ಒಡ-ಬಗ್ಗರಿಗ ಅನೇಕ ಅರ್ಥವಾಗಿ ಸಹಾಯ ಮಾಡಿರುವರು ಹಾಗಾದರ ಈ ಕೊಲೆ ಏಕಾಗಿರಬಹುದು?

ಆದಕ್ಕೆ ಕಾರಣವನ್ನು ಹೇಗೆ ಊಹಿಸಬೇಕು? ಆದರೆ ಮಧುಕರನೇ ಈ ಕೊಲೆಮಾಡಿರಬೇಕಂದು ಊಹಿಸಲು ಒಂದು ಕಾರಣವಿದೆ?

ಅದೇನು?

ಸಾವುಕಾರರು ತಮ್ಮದೆಲ್ಲಕ್ಕೂ ಮಧುಕರನನ್ನೇ ಉತ್ತರಾಧಿಕಾರಿ ಯಾಗಿ ನಿಯಮಿಸಿರುವರು ಅಹದೇ?

ಅಹುದು ಸಾವುಕಾರರು ತಮ್ಮ ಕೊಲೆಗೆ ಎರಡು ದಿನಸ ಮೊದಲು ಮೃತ್ಯುಪತ್ರ ಮಾಡಿರುವರು ನನ್ನ ಬಳಿ ಆ ಮೃತ್ಯುಪತ್ರವೇ ಇದೆ

ಹೀಗೆ ಅವರಲ್ಲಿ ಮಾತುಗಳು ನಡೆದಿರುವಾಗಲೆ ಪೋಲೀಸ ಸುಪರಿಂಟೆಂ ಡೆಂಟ ವೆಂಕಟರಾಯನು ಒಳಗೆ ಬಂದು ಇಬ್ಬರಿಗೂ ನಮಸ್ಕರಿಸಿ ಶ್ರೀನಿವಾಸ ರಾಯರಿಗೆ ಕಾಗದಗಳನ್ನಿತ್ತನು ಶ್ರೀನಿವಾಸರಾಯರು ಅವುಗಳನು ತೆಗೆದು ಮೇಜಿನ ಮೇಲಿಟ್ಟರು ಅವುಗಳಲ್ಲೊಂದನ್ನು ಸುಬ್ಬಣ್ಣನವರ ಕೈಗೆ ಕೊಡುತ್ತ: ಸುಬ್ಬಣ್ಣವರೇ, ಇದು ನೋಡಿ ಪಂಚನಾಮೆ, ಎಂದು ಹೇಳಿದರು.

ಸುಬ್ಬಣ್ಣನವರು ಅದನ್ನು ಪೂರ್ಣವಾಗಿ ಓದಿದರು ಅದರಲ್ಲಿ ಅಲ್ಲಿದ್ದ ಸಾಮಾನುಗಳ ವಿವರ, ಸಾವುಕಾರರಿಗಾದ ಗಾಯ, ಸಾವುಕಾರರ ಶವ ಪರೀಕ್ಷೆ ಮುಂತಾದ ಸಂಗತಿಗಳ ವಿವರವಿದ್ದಿತು ಅವುಗಳನ್ನೆಲ್ಲ ಅವರು ಪೂರ್ಣವಾಗಿ ಓದಿದರು. ಆ ಮೇಲೆ ಶ್ರೀನಿವಾಸರಾಯರು ಮತ್ತೊಂದು ಕಾಗದ ಕೊಟ್ಟರು ಅದರಲ್ಲಿ ಸಾವುಕಾರರ ಮನೆಯ ಹೆಣ್ಣಾಳು ಗಂಗವ್ವ ನೆಂಬ ಸ್ತ್ರೀಯ ಹೇಳಿಕೆಯಿದ್ದಿತು ಗುಪ್ತಪೋಲೀಸ ಇನಸ್ಪೆಕ್ಟರ್ ನರಸಿಂಗ ರಾಯನೇ ಆಕೆಯ ಜವಾಬು ತೆಗೆದುಕೊಂಡಿದ್ದನು. ಅದರಲ್ಲಿ ಅವರ ಸಂಭಾಷಣೆಯು ಪೂರ್ತಿ ಇದ್ದಿತು:-

ನಿನ್ನ ಹೆಸರೇನು? ನನ್ನ ಹೆಸರು ಗಂಗವ್ವರಿ

ನೀನು ಏನು ಮಾಡುವೆ? ನಾನು ಮಾಡೋದೇನರಿ? ಹೋರೇವು

ಅವನ್ನು ಕೇಳಲಿಲ್ಲ ನಿನ್ನ ನಿತ್ಯದ ಉದ್ಯೋಗವೇನು?

ಸಾವುಕಾರರ ಮನ್ಯಾಗ ಇರ್ತೇನ್ರಿ ಇಲ್ಲಿ ನಿನ್ನ ಉದ್ಯೋಗವೇನು?

ಹೊರಗಿಂದು ಒಳಗಿಂದು ಎಲ್ಲಾ ನಂದರಿ

ಅಂದರೆ? ಕಸ, ಮುಸುರೆ, ಹಾಸಿಗೆ

ನಾ ಮಾಡೂ ಅಂಥದೆಲ್ಲಾನೂ ಮಾಡತೇನ್ರಿ

ಒಳ್ಳೇದು ಸಾವುಕಾರರ ಕೊಲೆಯು ಯಾರಿಂದಾಗಿರಬೇಕೆಂದು ನಿನ್ನ ಅನುಮಾನವಿದೆ ಅದನ್ನು ನಾ ಹ್ಯಾಂಗ ಹೇಳ್ಲಿ ಧನೇರ?

ಅಂದರೆ, ನಿನಗೆ ಯಾರ ಮೇಲಾದರೂ ಊಹೆ ಇದೆಯೋ?

ಛೆ, ಏಳ್ರಿ ಸಾಹೇಬರೇ, ನನಗೆ ಹ್ಯಾಂಗ ತಿಳೀಬೇಕರಿ?

ಹೋಗಲಿ, ತಿಳಿಯದಿದ್ದರಿಲ್ಲ? ಸಾವುಕಾರರ ಕೊಲೆಯಾದ ದಿವಸ ನೀನು ಊರಲ್ಲಿದ್ದೆಯಷ್ಟೆ? ಹೌದರೀ, ಊರಾಗ ಇದ್ನೆರಿ

ಅಂದು ಸಾವುಕಾರರ ಮನೆಗೆ ಕೆಲಸಕ್ಕೆ ಬಂದಿದ್ದೆಯಾ?

ಹೂಂನರಿ, ಬಂದಿದ್ದೆ

ಕೊಲೆ ಆದದ್ದನ್ನು ಯಾರು ಯಾರು ನೋಡಿದರು?

ಮುಂಜಾನೆ ನಾನು ನೋಡಿದ್ನೆರಿ ನೋಡಿದಾಕೀನ ಪೋಲೀಸರ ಕಡೆಗೆ ಹೋದ್ನಿರಿ ಒಳ್ಳೇದು. ರಾತ್ರಿ ಕೊಲೆ ಆಗಿರಬೇಕಲ್ಲವೆ?

ಹೌದರಿ ರಾತ್ರಿ ಸಾವುಕಾರರು ಎಷ್ಟು ಹೊತ್ತಿಗೆ ಮಲಗಿದರು?

ಅದನ್ನು ನಾ ಹ್ಯಾಂಗ ಹೇಳ್ಲಿರಿ

ನಿತ್ಯವೂ ನೀನು ಮನೆಗೆ ಎಷ್ಟು ಹೊತ್ತಿಗೆ ಹೋಗ್ತೀದಿ?

ಒಂಬತ್ತರ ವ್ಯಾಳ್ಯಾಕ ಹೋಗ್ತೇನಿರಿ.

ಮಧುಕರರಾಯರು ಮತ್ತು ಉಳಿದವರು ಯಾವಾಗ್ಗೆ ಹೋಗುತ್ತಾರೆ?

ಅವರೂ ಆಗs ಹೋಗ್ತಾರಿ ಒಂದೊಂದು ದಿವಸ ತಡಾನೂ ಆಗತೃತ್ರಿ

ಅವತ್ತು ಎಷ್ಟೊತ್ತಿಗೆ ಹೋದರು?

ಅವತ್ತ ಗಡಾನ ಎಲ್ಲಾರೂ ಹೋಗಿದ್ದರರಿ.

ಹಾಗಾದರೆ ನೀನು ಹೋಗುವ ವೇಳೆಯಲ್ಲಿ ಮನೆಯಲ್ಲಿ ಸಾವುಕಾರ ರೊಬ್ಬರೇ ಇದ್ದರೇನು?

ಮದ್ಲ ನಾ ಒಂಬತ್ತಕ್ಕ ಹೋಗಿದ್ನಿರಿ ಆದ್ರ ಅವತ್ತ ಸಾವುಕಾರ್ರನ್ನ ಸಂಬಳದ್ದಸಿಂದ ಭೆಟ್ಟಿ ಆಗ್ಬೇಕಾಗಿತ್ತರಿ. ಆದರ ದಸಿಂವ ಹತ್ತೂವರಿ ಸುಮಾರಕ್ಕೆ ತಿರಗಿ ಬಂದಿನ್ರಿ,

ಆಗ್ಗ ಸಾವುಕಾರರು ಏನು ಮಾಡುತ್ತಲಿದ್ದರು?

ಅವರು ಯಾರ್ದೂ ಸಂಗಡ ಮಾತಾಡ್ಕೊಂತ ಕುಂತಿದ್ರಿರಿ

ಯಾರ ಸಂಗಡ ಮಾತಾಡತಿದ್ದರು ?

ಯಾರೋ ಏನೋ ಹ್ಯಾಂಗ ಹೇಳ್ಬೇಕರಿ? ಅವರು ಮಲಗೂ ಕೋಣ್ಯಾಗ ಬಾಯಿ ಆಗ್ತಿತ್ತರಿ ನೀನು ಮೇಲೆ ಹೋಗಿ ನೋಡಲಿಲ್ಲವೆ

ಇಲ್ಲರಿ ಮುಂದಿ ಬಂದಾಗ್ಗೆ ಸಾವುಕಾರ್ರನ ಕಾಣ್ತಾದ್ದಿಲ್ಲಗಿ. ಆಗ ನಾವ್ಹ ಹೋದ್ರ ಸಾವುಕಾರ್ರು ಭಾಳ ಸಿಟ್ಟಾಗ್ತಿದ್ರರಿ

ಒಳ್ಳೇದು, ಧ್ವನಿಯಿಂದಲೂ ತಿಳಿಯಲಿಲ್ಲವೆ? ಹ್ಯಾಂಗ ಹೇಳ್ಬೇಕರಿ?

ಅಪರಿಚಿತರ ಸ್ವರವಿದ್ದಿತೆ?

ಯಾರೋ ಹೊರಗಿನವರು ಇರಬಹುದು, ಅಂತಾ ಅನಸ್ತದರಿ

ಮತ್ತು ಆಗ್ಗೇನು ಕಲ್ಪನೆಯಾಯಿತು? ಆಗ್ಗ ಮತ್ತ ..

ಅನುಮಾನಿಸಬೇಡ ನಿನಗೆ ಕಲ್ಪನೆಯಾದುದನ್ನು ಸ್ಪಷ್ಟವಾಗಿ ಹೇಳು

ಮತ್ತು .. .... ಹೆದುರುವಿಯೇಕೆ?

ಮತ್ತು ನಮ್ಮ ಮಧು.. . ಕರರಾ ..ಯರು ಅನ್ನೊಹಾಂಗ ಕಾಣಿಸ್ತರಿ ಆದ್ರ ಅವ್ರು ಕೂನು-ಗೀನು ಮಾಡೂ ಅವ್ರು ಅಲ್ಲರಿ ಅದಕ್ಕ ಯಾರಾರ ಹೊರಗಿನವರಿರಬೇಕುಅಂತ ಅನಿಸ್ತದರಿ. ಆವಾಗ ಹಾಂಗ ಸುಳ್ಳೇಆಗಿಟ್ಟತಿರಿ

ಮಧುಕರರಾಯರಿರಬೇಕಂದೆ? ನೀನು ಹೆಚ್ಚು ಚಿಕಿತ್ಸೆಮಾಡಲಿಲ್ಲವೆ?

ಹೌದ್ರಿ ಧನೇರ ಸುಳ್ಳೇನು? ನನಗೆ ಹಾಂಗ ಭಾಸವಾದದ್ದು ಖರೇರಿ ಆದ್ರ.......,

ನಿನ್ನ ಟೀಕೆ ಅವಶ್ಯವಿಲ್ಲ. ಕೇಳಿದ್ದಷ್ಟನ್ನು ಮಾತ್ರ ಹೇಳು. ಒಳ್ಳೇದು ನಿಮ್ಮ ಸಾವುಕಾರರ ಸ್ವಭಾವ ಹೇಗಿದ್ದಿತು?

ಸಾಹೇಬರ, ಅವರಂಥಾವ್ರು ಹುಡುಕ್ಕೊತ ಹೊದ್ರೂ ಸಿಗಾಕಿಲ್ಲ ನೋಡ್ರಿ.

ಸಾವ್ಕಾರರಿಗೂ ಮತ್ತು ಮಧುಕರರಾಯರಿಗೂ ಹೇಗಿದ್ದಿತು? ಒಬ್ಬ ರನ್ನೊಬ್ಬರು ಹೇಗೆ ಕಾಣುತ್ತಿದ್ದರು?

ಸಾವುಕಾರರು ಮಧುಕರರಾಯರ ಮೇಲೆ ಬಹಳ ಪ್ರೀತಿಮಾಡ್ತಿದ್ರು ಮತ್ತು ಮಧುಕರರಾಯರಾದ್ರು ಸಾವುಕಾರರ ಮೇಲೆ ಬಹಳ ಪ್ರೇಮಮಾಡ್ತಿದ್ರರಿ. ನೋಡು ಚನ್ನಾಗಿ ವಿಚಾರಿಸಿ ಹೇಳು

ಬಹಳ ಪ್ರೀತಿ ಇತ್ತರಿ ಇಬ್ಬರಿಗೂ, ಆದ್ರ ... ಆದರೇನು

ಈಗೀಗ ಅವರಲ್ಲಿ ಒಂದೀಟು ತಂಟೆಸೂ ಆಗ್ತಿತ್ತರಿ.

ಏತ ಸಲುವಾಗಿ?

ಮಧುಕರರಾಯರು ಹೊಸ ಹೇಣ್ತಿ ಮಾಡಿಕೊಂಡಾಗಿನಿಂದ ಸಾವ ಕಾರರು ಅವರ ವ್ಯಾಲ ಬಹಳ ಸಿಟ್ಟಾಗಿದ್ರರಿ ಅದೇಕೆ?

ಏನೋ, ಹ್ಯಾಂಗ ತಿಳಿಯಬೇಕರಿ ಆದರೂ ಅವರು ಮಧುಕ ರಾಯರ ಹೇಣ್ತಿ ಕಮಲವ್ವ ಅಂದ್ರ ಚಲೋ ಹೆಣ್ಮಗಳು ಇಲ್ಲಾ, ಹಾಂಗ ಹಿಂಗ ಅಂತಿದ್ರರಿ.

ನೀನು ನೋಡಿರುವಿಯಾ ಮಧುಕರರಾಯರ ಪತ್ನಿಯನ್ನು?

ಹೂಂನರಿ ನೋಡೇನಿ ನಿನಗೆ ಹೇಗೆನಿಸುತ್ತಲಿದ್ದಿತು?

ಆಕೀ ಖರ್ಚು ಭಾಳರಿ ತಿಂಗಳಾ ನೂರು ರೂಪಾಯಿ ಸಾಲ್ತಿರಾಕಿಲ್ರಿ

ಹಾಗಾದರೆ ಮಧುಕರ ದುಡ್ಡಿಗೆ ಹೇಗೆ ಮಾಡುತ್ತಿದ್ದ?

ಅದಕ್ಕೆ ಸಾವುಕಾರ ಸಂಗತಿ ನ್ಯಾಯ ಮಾಡುತ್ತಿದ್ರರಿ.

ಮತ್ತೆ ಸಾವುಕಾರರ ಕೊಲೆ ಆಗುವ ಮೊದಲು, ಅಂದರೆ ಈ ನಾಲ್ಕಾರು ದಿವಸದ ಹಿಂದೆ ಅವರಲ್ಲಿ ತಂಟೆಯಾಗಿದ್ದಿತೇನು?

ಹೌದ್ರಿ, ನಿನ್ನೆ ಅಲ್ಲ ಮೊನ್ನೆ ಅವರಿಬ್ಬರಿಗೂ ಬಾಯಿಗೆ ಬಾಯಿ ಹತ್ತಿತ್ತರಿ ಸಾವುಕಾರ್ರು ಮಧುಕರರಾಯರಿಗೆ ಭಾಳು ಸಿಟ್ಟು ಮಾಡಿದ್ರರಿ

ದುಡ್ಡಿನ ಸಲುವಾಗಿಯೋ ಏನು? ಹೌದ್ರಿ

ಆ ತಂಟೆಯಾದಂದಿನಿಂದ ಅವರವರಲ್ಲಿ ಹೇಗಿದ್ದಿತು?

ಒಂದೀಟು ಗುಸುಮುಸಿನೇ ಇತ್ತರಿ

ಇಷ್ಟರ ಮೇಲಿಂದ ಹಣದ ಸಲುವಾಗಿ ಮಧುಕರನೇ ಸಾವುಕಾರನ ಕೊಲೆ ಮಾಡಿರಲಿಕ್ಕಿಲ್ಲವೆಂದು ಹೇಗೆ ಹೇಳುವೆ?

ಛೇ, ಅದು ಮಾತ್ರ ನನ್ನಿಂದ ಆಗಾಕಿಲ್ಲ ನೋಡ್ರಿ ಮಧುಕರರಾಯ
ರಂದ್ರೆ ಭಾಳ ಚಲೋ ವ ನಸ್ಯಾರಿ ಈಗ ಆ ಹೇಣ್ತಿ ಮುಂದ ಒಂದೇ
ತಂಟೆ ತಗೀತಿದ್ರರಿ ಆದ್ರೇನು? ಅವ್ರಿಂದ ಕೂನಾಗೈತಿ ಅಂತ ನಾ ಅನ್ನ
ಕಿಲ್ರಿ ಒಳ್ಳೇದು. ಮಧುಕರರು ಇಂದು ಬಂದಿಲ್ಲವಲ್ಲ?
ಇವತ್ತ ಬರೂದಿಲ್ಲಾ ಅಂತ ನಿನ್ನೇ ಹೇಳ್ಯಾರ್ರಿ ಆವರೇನ
ಯಾವದೋ ಊರಿಗೆ ಹೊಕ್ಕಾರಂತರಿ
ಒಳ್ಳೇದು. ನೀನು ನಿನ್ನ ಕೆಲಸಕ್ಕೆ ಹೋಗು
ಸುಬ್ಬಣ್ಣವರು ಹೆಣ್ಣಾಳಿನ ಹೇಳಿಕೆ ಓದಿ ಮುಗಿಸಿ ಶ್ರೀನಿವಾಸರಾ
ರಿಗೆ ಕೊಡಲು, ಅವರೀರ್ವರಲ್ಲಿ ಪುನಃ ಮಧುಕರನೇ ಅಪರಾಧಿಯೆಂಬ ಒಗ
ಚರ್ಚೆ ನಡೆಯಿತು

ಸ ಬ್ಬಣ್ಣವರೇ, ಇದ ಲ್ಲಿ ಸಂದೇಹಾಸ್ಪದ ವಿಷಯಗಳು ಯಾವವೆಂ
ದನ್ನು ನೀವು ಊಹಿಸಿತಬಹುದು

ನಾನೇನೋ ಊಹಿಸಿರುವೆನು, ಆದರೂ ಈ ವಿಷಯದಲ್ಲಿ ನೀವಾ
ಗಲೀ ನರಸಿಂಗರಾಯರಾಗಲಿ ಮಧುಕರನೇ ಕೊಲೆಗಾರನೆಂದು ಹೇಗೆ ನಿರ್ಣ
ಯಿಸಿದಿರೆಂಬದನ್ನು ಹೇಳಬಹುದಲ್ಲವೆ?

ಈ ಜವಾಬಿನಲ್ಲ ಮೂರು ಮುಖ್ಯ ವಿಷಯಗಳಿವೆ ಅವಾವವು?
ಮೊದಲಿನದು ಆ ಹೆಣ್ಣಾಳು ನಿತ್ಯವೂ ಸಾವುಕಾರರ ಮನೆಯಲ್ಲಿಯೇ
ದುಡಿಯುವವಳು. ಅಲ್ಲಿಯ ಎಲ್ಲರ ಸ್ವಭಾವ ಪರಿಚಯವಾಗಿರುವಂತೆ, ಸ್ವರ
ಪರಿಚಯವಾದರೂ ಇರುವದು ಸಹಜವು ಕೊಲೆಯಾದ ರಾತ್ರಿ ಹತ್ತು
ಗಂಟೆಗೆ ಸಾವುಕಾರರ ಕೋಣೆಯಲ್ಲಿ ಬಾಯಿ ಕೇಳುತ್ತಲಿದ್ದಿತೆಂದು ಹೇಳಿರು
ವಳು ಆ ವೇಳೆಗೆ ಸಾವುಕಾರರೊಡನೆ ಕಲಹಮಾಡುತ್ತಲಿದ್ದವನು ಮಧು
ಕರನೇ ಎಂದು ಆಗ್ಗೆನೇ ಆಕೆಗೆ ಪೂರ್ಣ ನಂಬಿಗೆಯಾಗಿರಬೇಕು ಇಲ್ಲವಾಗಿ
ದ್ದರೆ ಅಷ್ಟು ಪ್ರಬಲ ಕಾರಣವಿರದಿದ್ದರೂ ಬರಿಯ ಉತ್ಕಂಠೆಯಿಂದಾದರೂ
ಮೇಲಿನ ವರೆಗೆ ಹೋಗಿ, ಇಣುಕಿ, ಹೊಸಬರಾರು? ಎಂದು ಅರಿಯದೇ ಇರು
ತ್ತಿರಲಿಲ್ಲ ಅಂದಮೇಲೆ ಆ ವೇಳೆಗೆ ಅಲ್ಲಿದ್ದವನು ಮಧುಕರನೇ ಆಗಿರಬೇಕು,
ಮತ್ತು ಡಾಕ್ಟರರು ಸರ್ಟಿಫಿಕೇಟು ಕೊಟ್ಟಂತೆ ಕೊಲೆಯು ಮಧ್ಯರಾತ್ರಿಯ
ಸುಮಾರಕ್ಕೇ ಆಗಿದೆ. ಆದುದರಿಂದ ಮಧುಕರನೇ ಕೊಲೆಮಾಡಿರಬೇಕು.

ಎರಡನೆಯದು ಮಧುಕರನು ಈ ಕೊಲೆಯನ್ನು ಏಕೆ ಮಾಡಿರಬೇಕು?
ಎನ್ನುವ ಪ್ರಶ್ನೆಗೆ ಉತ್ತರವಾದರೂ ಇದರಲ್ಲಿದೆ ಹಣದ ಸಲುವಾಗಿಯೇ
ಕೊಲೆಯಾಗಿರಬೇಕು? ಎನ್ನುವುದು ಸ್ಪಷ್ಟವಿದೆ, ಮತ್ತು ಆ ಹಣದ ಸಲು

ವಾಗಿಯೇ ಮಧುಕರನು ಸಾವುಕಾರರೊಡನೆ ಆವಾಗ ಕಲಹ ಮಾಡುತ್ತಲಿದ್ದನೆಂಬುದೂ ಬಂದಿದೆ ಇನ್ನು ಇದಕ್ಕೆ ಶಂಕೆಯೆಂದರೆ ಹಣದ ಸಲುವಾಗಿ ಕೊಲೆ ಮಾಡಿದವನು ಹಣವನ್ನೇಕೆ ತೆಗದುಕೊಂಡು ಹೋಗಿಲ್ಲ? ಎಂಬದು ಇದಕ್ಕೆ ಉತ್ತರವಾದರೂ ಮೇಲೆಯೇ ಇದೆ. ಆ ಸಮಯದಲ್ಲಿ ಸಾವುಕಾರರಲ್ಲಿ ರೋಖ ಹಣವು ತೀರ ಸ್ವಲ್ಪ ಇದ್ದಿತೆಂದು ಅವರ ದಿನವಹಿಯಿಂದ ತಿಳಿಯುತ್ತದೆ ಎಲ್ಲವೂ ಬ್ಯಾಂಕಿನಲ್ಲಿಯೇ ಇದೆ, ಮತ್ತು ಆಗ್ಗೇನೇ ಹಣ ಕೊಡಬೇಕೆಂದು ದುಧುಕರನ ಆಗ್ರಹವೂ ಇದ್ದಿಲ್ಲ ಮಾತಿಗೆ ಮಾತು ಹತ್ತಿ ಪ್ರಸಂಗವು ಕೊಲೆಯುವರೆಗೆ ಹೋಗಿರಬೇಕು

ಮೂರನೇದು. ಈ ವಿಧಾನಕ್ಕೆ ಪುಷ್ಟಿಕೊಡುವ ಸಂಗತಿ ಅವನ ಪತ್ನಿಯದು. ಮಧುಕರನ ಪತ್ನಿ ಕಮಲಿನಿಯ ವಿಷಯವು ನಮ್ಮ ಕಿವಿಯ ವರೆಗೆ ಬಂದಿದೆ ಆಕೆಯ ವೆಚ್ಚ ಬಹಳ ಹಣದ ಸಲುವಾಗಿ ಯಾ... ಏನು ತಾನೇ ಮಾಡಲಿಕ್ಕಿಲ್ಲ! ನಿಜವಾಗಿಯೂ ಹಣದ ಆಶೆ ಅಪಾರವಾದದ್ದು

ಶ್ರೀನಿವಾಸರಾಯರೇ, ಸದ್ಯದ ಜವಾಬಿಗೆ ಸಂಬಂಧಿಸಿದ ನಿಮ್ಮ ಸ್ಪಷ್ಟೀಕರಣವು ಸಾಕಷ್ಟು ಸಮಾಧಾನಕಾರಕವಿದೆ ಈ ಸಂದರ್ಭದ ನಾವು ಇನ್ನೇನಾದರೂ ಊಹಿಸಲು ಬರಬಹುದ, ಆದರ ಸದ್ಯ ಅದು ಬೇಡ ಈಗ ಕೇಳತಕ್ಕ ಇನ್ನೊಂದು ಸಂಗತಿಯಿದೆ.

ಸಾವುಕಾರರು ತಮ್ಮ ಉತ್ತರಾಧಿಕಾರಿಯೆಂದು ಮಧುಕ ನನ್ನೇ ನಿಯಮಿಸಿರುವರೆಂದು ನೀವು ಹೇಳಲಿಲ್ಲವೆ?

ಅಹುದು, ಅವರ ಮೃತ್ಯುಲೆ ಖವೇ ಇಲ್ಲದೆ, ನೋಡಿರಿ

ಹಾಗಿದ್ದರ ನಿಮ್ಮ ಸ್ಪಷ್ಟೀಕ ಣಕ್ಕೆ ಬಾಧೆ ತಟ್ಟುವದಿಲ್ಲವೆ? ಹೇಗೆ?

ಹೀಗೆ ಕಲಹ ಮಾಡುವವನನ್ನೇ ತಮ್ಮ ಉತ್ತರಾಧಿಕಾರಿಯೆಂದು ನಿಯಮಿಸುವುದು ಶಕ್ಯವಿದೆಯೆ? ಆದರೂ ನಿಯಮಿಸಿರುವರು ಅಂದಮೇಲೆ ಅವರಿಬ್ಬರಲ್ಲಿ ತಂದೆ-ಮಕ್ಕಳ ಪ್ರೇಮವಿರಬೇಕಲ್ಲವೆ?

ಅಹುದು, ಈ ಶಂಕೆಯೇನೋ ಸರಿಯೇ ಇದೆ. ಒಂದು ವಿಷಯವೆಂದರೆ, ಮೃತ್ಯುಪತ್ರದ ಸಂಗತಿ ಸಾವುಕಾರರು ಮತ್ತು ಇಬ್ಬರು ಸಾಕ್ಷಿದಾರರು ಇವರ ಹೊರತು ಬೇರೆ ಯಾರಿಗೂ ತಿಳಿದಂತೆಯೇ ತೋರುವದಿಲ್ಲ, ಎಂದೂ ಅನ್ನುವ ಪರಿಸ್ಥಿತಿಯಿದೆ. ಆದರೆ ಮಧುಕರನಿಗೆ ಈ ಸಂಗತಿ ತಿಳಿದಿರಬೇಕೆಂದು ತೋರುತ್ತದೆ. ಅಂತೆಯೇ ಅವನು ಕೊಲೆಮಾಡಿರಬೇಕು. ಸ್ವತಃ ಅವನನ್ನೇ ತಮ್ಮ ಪಶ್ಚಾತ್ ಒಡೆಯನನ್ನು ಮಾಡಿದ ಸಂಗತಿ ಅವನಿಗೆ ತಿಳಿಸಿರಲಿಕ್ಕಿಲ್ಲ. ನಾನು ಕೇಳಿದ ಪ್ರಶ್ನೆ ಬಿಟ್ಟೇ ಬಿಟ್ಟರಲಿಲ್ಲ

ನಿಮ್ಮ ಪ್ರಶ್ನೆಗೆ ಉತ್ತರ ಕೊಡುವುದು ಸುಲಭವಲ್ಲ. ನಾವಾದರೋ ಈ ಪ್ರಶ್ನೆಯಿಂದ ಮೂಕರೇ ಆಗಿದ್ದೆವು. ಮಧುಕರನು ಅಪರಾಧಿಯೋ ನಿರಪರಾಧಿಯೋ ಯಾವುದನ್ನು ನಿರ್ಧರಿಸಬೇಕು? ಎಂಬ ಶಂಕೆಯಲ್ಲಿರುವಾಗಲೇ ಬೇರೊಂದು ಸಂಗತಿ ಸಂಭವಿಸಿ ನಮಗೆ ವಿಚಾರಕ್ಕಾಸ್ಪದವೇ ಇಲ್ಲದಂತೆ ಮಾಡಿತು. ಅದೇನು?

ಇಲ್ಲಿದೆ ನೋಡಿ.

ಹೀಗೆನ್ನುತ್ತ ಶ್ರೀನಿವಾಸರಾಯರು ಒಂದು ಕಾಗದವನ್ನು ಸುಬ್ಬಣ್ಣವರ ಕೈಯಲ್ಲಿ ಕೊಟ್ಟರು. ಸುಬ್ಬಣ್ಣವರು ಅದನ್ನು ತೆಗೆದುಕೊಂಡು ನೋಡಿದರು. ಅದರಲ್ಲಿ ಒಬ್ಬ ಮನುಷ್ಯನ ಬಲಗೈ ಹೆಬ್ಬೆರಳಿನ ಗುರತಿನ ಭಾವಚಿತ್ರವಿದ್ದಿತು. ಫೋಟೋ ಬಲು ಚನ್ನಾಗಿ ಮೂಡಿದ್ದು ಬೆರಳಿನ ಪ್ರತಿಯೊಂದು ರೇಖೆಯೂ ಸ್ಪಷ್ಟವಾಗಿ ಕಾಣುತ್ತಲಿದ್ದಿತು. ಸುಬ್ಬಣ್ಣವರು ಕೊಂಚ ವೇಳೆ ಅದನ್ನೇ ದಿಟ್ಟಿಸಿ ನೋಡುತ್ತ ಕುಳಿತರು.

ಇದು ಕೊಲೆಗಾರನ ಹೆಬ್ಬೆರಳಿನ ಗುರತೆ?

ಅಹುದು, ಸಾವುಕಾರರ ಕೊಲೆಯಾದ ಕಿರುಗತ್ತಿಯ ಮೇಲಿನದು.

ಕಿರುಗತ್ತಿಯು ಎಲ್ಲಿ ದೊರೆಕಿತು?

ಸಾವುಕಾರರ ಶರೀರದ ಸಮೀಪದಲ್ಲಿ.

ಇದಿಷ್ಟೇ ಗುರತು ದೊರೆಕಿತೇನು?

ಅಹುದು. ಹೆಬ್ಬೆರಳು ಮೂಡಿದ ಭಾಗವೇ ಮೇಲಾಗಿ ಬಿದ್ದಿದ್ದಿತು. ಬುಡದಲ್ಲಿನ ಗುರತುಗಳು ಹಾಸಿನ ಮೇಲೆ ಬಿದ್ದುದರಿಂದ ಅಳಿಸಿರಬೇಕೆಂದು ತೋರುತ್ತದೆ. ಒಂದೇ ಬೆರಳಿನ ಗುರತು ದೊರೆಕಿದೆ.

ಒಳ್ಳೇದು. ಕೊಲೆಯಾದ ನಾಲ್ಕೆಂಟು ದಿನ ಮಧುಕರನು ನಿಮಗೆ ಕೂಡಿಯೇ ಇಲ್ಲ. ಅಂದಮೇಲೆ ಇದು ಅವನ ಬೆರಳಿನ ಗುರತೇ ಎಂದು ಹೇಗೆ ಕಂಡುಹಿಡಿದಿರಿ?

ಅದಾದರೂ ಇಲ್ಲಿದೆ ನೋಡಿರಿ. ಇಕೊಳ್ಳಿ, ಈ ಪುಸ್ತಕದಲ್ಲಿ ಸಾವುಕಾರರಲ್ಲಿ ಕೆಲಸಕ್ಕಿದ್ದವರೆಲ್ಲರ ಎರಡೂ ಕೈಬೆರಳುಗಳ ಗುರತುಗಳಿವೆ.

ಆ ಕೋಣೆಯಲ್ಲಿ ಇವರಿಬ್ಬರಲ್ಲದೆ ಇನ್ನೊಬ್ಬನಿದ್ದನು. ಬಹುಶಃ ವಾಚಕರು ಕೊಲೆಯ ವರದಿ ಓದುವುದರಲ್ಲಿಯೇ ತನ್ಮಯರಾಗಿ ಅವನನ್ನು ಮರೆತಿರಬಹುದು, ಅವನಾರೆಂದರೆ, ಮುರಾರಿ. ಸುಬ್ಬಣ್ಣವರ ಸಂಗಡವೇ ಮುರಾರಿಯೂ ಬಂದಿದ್ದನು, ಆದರೆ ಯಾವ ವಿಷಯದಲ್ಲಿಯೂ ಭಾಗವಹಿಸಿರಲಿಲ್ಲ. ಅವನ ಈ ಸ್ವಭಾವದ ಬಗ್ಗೆ ನಾನು ಈ ಮೊದಲೇ ಹೇಳಿರುವೆನು.

ಮುರಾರಿ ಅಲ್ಲಿಯೇ ಕುಳಿತಿದ್ದನು ಅವನು ಅವರೀರ್ವರ ಸಂಭಾಷಣೆಗಳನ್ನೂ ಲಕ್ಷ್ಯಪೂರ್ವಕವಾಗಿ ಕೇಳುತ್ತಲಿದ್ದನು ಮಧುಕರನ ವಿಷಯವಾಗಿ ಅವನ ಮನಸ್ಸಿನಲ್ಲಿ ಅನೇಕ ವಿಚಾರಗಳು ಬರಲಾರಂಭಿಸಿದ್ದವು ಸರೋವರದಲ್ಲಿ ಅವನನ್ನು ಮೇಲೆ ತಂದಾಗ್ಗೆ ಅವನ ಉಡುಪು-ತೊಡುಪುಗಳಿಂದ ಅವನೊಬ್ಬ ಸುಶಿಕ್ಷಿತ ಬೇಕಾರನಿರಬಹುದೆಂಬ ಅವನ ಊಹೆ ಹಿಂದೆಯೇ ಬಂದಿದೆ. ಮುಂದೆ ಅವನ ನಿಜಸ್ವರೂಪ ತಿಳಿಯಲು, ಅವನು ಅಪರಾಧಿಯೇ ಇರಬಹುದೆಂದು ಊಹಿಸಿದ್ದನು ಮುರಾರಿಯು ಈ ವಿಚಾರವನ್ನು ಹೊಡೆದೋಡಿಸಲು ಸುಬ್ಬಣ್ಣವರು ಕೊಂಚ ಯತ್ನಿಸಿದ್ದರು ಅವರಿಂದ ಮಧುಕರನು ಅಪರಾಧಿಯೋ ನಿರಪರಾಧಿಯೋ ಎಂಬದನ್ನು ನಿರ್ಣಯಿಸಲು ಅವನು ಪೂರ್ಣವಾಗಿ ಶಕ್ತನಾಗಿರಲಿಲ್ಲ ಶ್ರೀನಿವಾಸರಾಯರ ಸಂವಿಧಾನಲ್ಲದನ್ನು ಕೇಳಿದ ಅವನಲ್ಲಿದ್ದ ಅಲ್ಪಸ್ವಲ್ಪ ಸಂದೇಹವೂ ಹಾರಿ ಹೋಗಿ ಮಧುಕರನು ಕೊಲೆಗಾರನೇ ಇರಬೇಕೆಂದು ನಂಬಿಬಿಟ್ಟನು.

ಮಧುಕರನು ಹುಟ್ಟಾ ಸಭ್ಯ ಸ್ವಭಾವದವನು. ಆದರೆ ಹೊಸ ಹೆಂಡತಿಯ ಮನರಂಜನೆ ಮಾಡಲೆಂದು ಹಣ ದೊರಕಿಸಲೇಬೇಕಲ್ಲವೆ? ಇನ್ನು ಅವನಿಗೆ ಹಣ ಸಿಕ್ಕುವ ಸ್ಥಳವೆಲ್ಲಿ? ಮತ್ತೂ ಮತ್ತೂ ಸಾವುಕಾರರೇ ಮೆತ್ತಗಿದ್ದಲ್ಲಿ ಮೊಳಕೈ ಚುಚ್ಚು ಎಂಬಂತೆ ಅವರು ಮಧುಕರನ ಮೇಲೆ ಪ್ರೀತಿಯುಳ್ಳವರಾಗಿದ್ದರು ಆದುದರಿಂದ ಮಧುಕರನು ಪುನಃ ಪುನಃ ಅವರಿಗೆ ತೊಂದರೆ ಕೊಡಹತ್ತಿರಬೇಕು ಸಾವುಕಾರರಾದರೂ ಅವನಲ್ಲಿ ಪುತ್ರವತ್ ಮಮತೆಯುಳ್ಳವರಿದ್ದರೆಂಬುದು ಅವರ ಮೃತ್ಯುಪತ್ರದಿಂದ ಚನ್ನಾಗಿ ತಿಳಿದು ಬರುತ್ತಿದೆ. ಇನ್ನಾರಾದರೂ ಆಗಿದ್ದರೆ ಅವನನ್ನು ಆವಾಗಲೋ ಹೊರಗೆ ಹಾಕುತ್ತಲಿದ್ದರು. ಅವರು ಮಧುಕರನಿಗೆ ಕೈ ಬಿಗಿಹಿಡಿಯಲು ಚನ್ನಾಗಿ ಉಪದೇಶ ಮಾಡಿರಬೇಕು; ಆದರೆ ಅದು ಡಬ್ಬು ಕೊಡದ ಮೇಲೆ ಸುರಿದ ನೀರಿನಂತೆ ವ್ಯರ್ಥವೇ ಆಗಿ ಆತ ಅವರ ಮೇಲೆಯೇ ಸಿಟ್ಟಾಗಿರಬೇಕು.... ಹೀಗೆ ಮುರಾರಿಯು ತನ್ನ ವಿಚಾರ ತಂದ್ರಿಯಲ್ಲಿಯೇ ಕುಳಿತಿದ್ದನು. ಅಗ್ಗೆ ಪುನಃ ಸುಬ್ಬಣ್ಣ-ಶ್ರೀನಿವಾಸರಾಯರಲ್ಲಿ ಚರ್ಚೆ ನಡೆಯಿತು.

ಏಕೆ ಸುಬ್ಬಣ್ಣವರೇ, ನಿಮ್ಮ ಅಭಿಪ್ರಾಯವೇನು?

ಶ್ರೀನಿವಾಸರಾಯರೇ, ಹೀಗೆ ಒಮ್ಮೆಲೆ ಅಭಿಪ್ರಾಯ ವ್ಯಕ್ತಪಡಿಸುವದು ನನ್ನ ಸ್ವಭಾವವಲ್ಲ, ಮತ್ತು ಅದು ಒಳ್ಳೆಯದೂ ಅಲ್ಲವೆಂದು ನನ್ನ ಮತ.

ಅದೇಕೆ?

ಶ್ರೀನಿವಾಸರಾಯರೇ, ನನ್ನ ಮತ್ತು ನಿಮ್ಮ ಪರಿಸ್ಥಿತಿಯಲ್ಲಿ ಅಂತರ ವಿದೆ ನೀವು ಅಧಿಕಾರಿಗಳು ಅಧಿಕಾರಿಗಳೊಂದೊಡನೆ ಸಾರಾಸಾರ ವಿಚಾರ ಮಾಡುವುದೇ ಇಲ್ಲವೆಂದ ನಾನನ್ನುವುದಿಲ್ಲ, ಆದರೂ ಚಿಕಿತ್ಸೆ ಕಡಿಮೆ, ಮತ್ತು ನಮ್ಮ ಹಾಗೆ ಪಕ್ಷಪಾತ ವಹಿಸುವ ಕಾರಣವೂ ಅವರಿಗಿಲ್ಲ ಅದೇಕೆ

ನಾವು ಖಾಸಗೀ ನೌಕರರು, ನಮ್ಮ ಮಡಿತದಿಂದಲೇ ನಮ್ಮ ಆದಾಯ. ನಾವು ಎಲ್ಲ ರೀತಿಯಿಂದಲೂ ಪಕ್ಷಪಾತ ವಹಿಸಿ, ಚನ್ನಾಗಿ ಆಲೋಚಿಸಿ, ಎಲ್ಲ ಪರಿಸ್ಥಿತಿ, ಸಾಕ್ಷಿ ಸಮಾಚಾರಗಳ ಸಮಾಲೋಚನೆ ಮಾಡಿ ಅಭಿಪ್ರಾಯ ವ್ಯಕ್ತಮಾಡಬೇಕಾಗುವದು ಶ್ರೀನಿವಾಸರಾಯರೇ, ನನ್ನ ವಿಚಾರ ತಿಳಿಯಿತೇ?

ತಿಳಿಯಿತು ಅಂತೂ ಯಾವಾಗಲೂ ನೀವು ಆರಂಭಕ್ಕೆ ಯಾವ ಮತ ವನ್ನೂ ವ್ಯಕ್ತಮಾಡುವವರಲ್ಲವೆಂದಂತಾಯಿತು

ಅಹುದು, ಮತ್ತು ಇಷ್ಟೇ ಅಲ್ಲ, ಅಧಿಕಾರಿಗಳು ಕಂಡು ಹಿಡಿದ ನಿರ್ಣಯವು ಸಟಿಯೆಂದು ಗ್ರಹಿಸಿ ಅವನ್ನು ಸಟಿಮಾಡಿ ತೋರಿಸುವ ಸಾಧನ ಗಳನ್ನು ದೊರಕಿಸಲು ಹೊರಡುತ್ತೇವೆ ಇದರಿಂದ ಯಾವಾಗಲೂ ಅಧಿ ಕಾರಿಗಳ ಗ್ರಹಿಕೆ ತಪ್ಪಿರುತ್ತದೆಂದು ತಿಳಿಯಕೂಡದು, ಆದರೂ ತಪ್ಪುವ ಸಂಭವಗಳೇ ಬಹಳವೆಂದು ನನ್ನ ಅನುಭವದಿಂದ ಹೇಳಬಲ್ಲೆ.

ನಿಮ್ಮ ವಿಚಾರಗಳು ಯೋಗ್ಯವಾದವುಗಳಿವೆ, ಆದರೆ ಸುಬ್ಬಣ್ಣನವರೇ, ನನಗೊಂದು ಶಂಕೆ ಬಂದಿದೆ ಕೇಳಬಹುದೆ? ಅದೇನು?

ನೀವು ತುಬ್ಬಿಗಾರರು ನಿಮ್ಮ ಎಲ್ಲ ವಿಚಾರಗಳೂ ಶಕ್ಯವಿದ್ದಮಟ್ಟಿಗೆ ಗುಪ್ತವಾಗಿಡುವುದೇ ಯೋಗ್ಯ ಆದುದರಿಂದ ನಾನು ನಿಮ್ಮನ್ನು ವಿಚಾರಿಸ ದಿರುವದೇ ಒಳಿತೆಂದು ತೋರುತ್ತದೆ

ಶ್ರೀನಿವಾಸರಾಯರೇ, ನಿಮ್ಮ ಅಭಿಪ್ರಾಯ ಸರಿಯಾದುದು. ನಾವು ನಮ್ಮ ವಿಚಾರಗಳನ್ನು ಗುಪ್ತವಾಗಿಯೇ ಇಡುತ್ತೇವೆ. ನಮ್ಮ ವಿಚಾರ ಗಳೆಂದರೇನೇ ನಮ್ಮ ಕಾರ್ಯದ ರೂಪ-ರೇಖೆ ಅದನ್ನು ಬಹಿರಂಗಕ್ಕೆ ಹಾಕು ವುದರಿಂದ ನಮ್ಮ ಶತ್ರುಗಳು ಸಾವಧರಾಗುತ್ತಾರೆ. ಆಗ್ಗೆ ನ್ಯಾಯದೇವತೆ ಯಲ್ಲಿ ನ್ಯಾಯ ಸಿಕ್ಕುವುದು ಬಹಳ ಕಠಿಣವಾಗುತ್ತದೆ, ಆದರೂ ನೀವು ನಿಮ್ಮ ಶಂಕೆ ಕೇಳಬಹುದು.

ಇಷ್ಟೇ, ನೀವು ಆರಂಭದಲ್ಲಿ ಯಾವದೊಂದು ಅಭಿಪ್ರಾಯ ನಂಬಿ ಹೊರಡುವಿರೊ? ಇಲ್ಲವೆ-ಪ್ರಕೃತ ವಿಷಯವನ್ನೇ ತೆಗೆದುಕೊಳ್ಳಿರಿ. ಮಧು ಕರನು ನಿರಪರಾಧಿಯೆಂದು ನಿಮಗೆ ಯಾವದೊಂದು ರೀತಿಯಿಂದ ಮನ ವರಿಕೆಯಾಗಿ, ನೀವು ಅವನ ಬಿಡುಗಡೆಗಾಗಿ ಯತ್ನಿಸುವಿರೋ? ಇಲ್ಲವೆ .

ಶ್ರೀನಿವಾಸರಾಯರೇ, ಕೇವಲ ಮಿತ್ರತ್ವದ ಸಂಬಂಧದಿಂದ ಹೇಳ
ತ್ತೇನೆ ನನಗೆ ಮಧುಕರನು ನಿರಪರಾಧಿಯೇ ಎಂದು ನಂಬಿಗೆಯಾಗಿದ

ಹೇಗೆ?

ಇದು ಕೊಂಚ ಬಿರಿ. ಏಕೆಂದರೆ, ನಮ್ಮ ನಿಮ್ಮ ದೃಷ್ಟಿಕೋನದ
ಅಂತರವಿದೆ ಕೆಲವೊಂದು ಸಂಗತಿಯಿಂದ ನಾವು ಒಂದು ಅರ್ಥ ಗ್ರಹಿಸಿದ
ನೀವು ಬೆ ರೊಂದು ಅರ್ಥಗ್ರಹಿಸ ಬಿರಿ  ಇದೇನು, ವಿಚಿತ್ರವಲ್ಲವೆ

ಅಲ್ಲ, ಇದು ವಾಸ್ತವ ವಿಚಾರ ಈಗ ನಾನೊಂದು ಸಂಗತಿ ಹೇಳ
ತ್ತೇನೆ, ಅಥವಾ ಸದ್ಯದ ವಿಷಯವನ್ನೇ ತೆಗೆದುಕೊಳ್ಳಿರಿ. ಮಧುಕರ
ಕೊಲೆಯಾದ ದಿವಸ ಬಾರದಿದ್ದವನು, ಎಂಟು ದಿವಸ ತಲೆ ತಪ್ಪಿಸಿಕೊಂ
ಆ ಮೇಲೆ ಮಧ್ಯರಾತ್ರಿಯ ಸಮಯಕ್ಕೆ ಆತ್ಮಹತ್ಯೆಗೆ ಉದ್ಯುಕ್ತನಾದರೆ—
ಸಮಯದಲ್ಲಿ ನೀವಿದ್ದರೆ ಮಧುಕರನ ಬಗ್ಗೆ ಯಾವ ವಿಚಾರಗಳು ನಿಮ್ಮ
ಬರುತ್ತವೆ?

ಇನ್ನೇನು? ಕೊಲೆ ಮಾಡಿ ತಲೆ ತಪ್ಪಿಸಲು ಯತ್ನಿಸಿ, ಅಶಕ್ಯವಾಗ
ಆತ್ಮಹತ್ಯೆಗ ಆರಂಭಿಸಿದನು, ಎಂದು

ಇದೇ ನಾನು ಈಗಲೇ ಹೇಳಿದುದು?  ಅಂದರೆ?

ಯಾವ ಘಟನೆಯಿಂದ ನೀವು ಅವನು ಅಪರಾಧಿಯೇ ಇರಬೇಕೆಂ
ಅಭಿಪ್ರಾಯ ವ್ಯಕ್ತಮಾಡಿದಿರೋ ಅದೇ ಘಟನೆಯಿಂದ ನಾನು ಅವನು ನಿ
ರಾಧಿಯಿರಬೇಕೆಂಬ ಅಭಿಪ್ರಾಯ ಗ್ರಹಿಸುವೆನು

ನೀವು ಹಾಗೇಕೆ ಭಾವಿಸಬೇಕು? ಮತ್ತು ನನ್ನ ವಿಚಾರ ಹೀಗೇಕಾ
ಬೇಕು?

ಶ್ರೀನಿವಾಸರಾಯರೇ, ನಾನು ಮಾಡುವ ವ್ಯವಸಾಯದಿಂದ ಆಯ
ಜನರ ಸೂಕ್ಷ್ಮ ಮನೋಧರ್ಮಗಳನರಿಯುವ ಪ್ರಸಂಗ ನನಗೆ ಬಹ
ಬಂದಿದೆ; ಆದರೆ ನಿಮಗೆ ಜನರ ಮನೋಧರ್ಮಗಳ ಸಂಬಂಧವೇ ಇಲ್ಲ
ಇದೇ ಅದಕ್ಕೆ ಕಾರಣ ಇರಲಿ, ಇನ್ನಾವಾಗಲಾದರೂ ನಾವು ಈ ವಿಷಯ
ಚರ್ಚಿಸೋಣ.

ಹಾಗೇ ಹಾಗಲಿ ಈಗಲೆ ನಾನು ಎಷ್ಟೋ ಸಂಗತಿ ಕಲಿತೆನು.

ಶ್ರೀನಿವಾಸರಾಯರೇ, ಪ್ರತಿಯೊಬ್ಬ ಮಾನವಪ್ರಾಣಿಯೂ ಒಬ್ಬ
ವಿದ್ಯಾರ್ಥಿ. ಜೀವನ ಪ್ರಪಂಚವೇ ಒಂದು ಪ್ರಯೋಗಶಾಲೆ ನಿತ್ಯವು
ಹೊಸ ಹೊಸ ಪ್ರಯೋಗಗಳನ್ನು ಪೂರಯಿಸಿ ಅವುಗಳಿಂದ ಹೊಸ ಬೋಧ
ತಿಳಿಯುವದೇ ಅವನ ನಿತ್ಯದ ವ್ಯವಸಾಯ.

ಆಗಲಿ ನೀವಿರುವವರೆಗೆ ಇನ್ನೂ ಅನೇಕ ಸಂಗತಿ ತಿಳಿಯುವೆನು. ಈಗ ನಾನು ಏನು ಮಾಡಬಹುದು?

ಇನ್ನೇನೂ ಇಲ್ಲ ಈ ಎರಡು ಕಾಗದಗಳನ್ನು—ಕಿರುಗತ್ತಿಯ ಮೇಲಿನ ಕೈಬೆರಳಿನ ಗುರತಿನ ಛಾವಚಿತ್ರ ಮತ್ತು ಸಾವುಕಾರರಲ್ಲಿದ್ದ ಮಧು ಕರನ ಕೈಬೆರಳಿನ ಗುರುತಿನ ಕಾಗದ ಇವೆರಡನ್ನು-ಅಲ್ಪಾವಧಿ ನನಗೆ ಕೊಡಬೇಕು. ಆ ಬಗ್ಗೆ ನಾನು ನನ್ನ ಹೆಸರಿನ ಪಾವತಿ ಬರೆದು ಕೊಡುವೆನು

ಅದೇನೂ ಬೇಡ ನೀವು ಹಾಗೆಯೇ ತೆಗೆದುಕೊಂಡು ಹೋಗಬಹುದು

ಇವುಗಳನ್ನು ನಾಳೆ ಮುಂಜಾವಿನಲ್ಲಿ ನಿಮಗೆ ತಲುಪಿಸುವೆನು

ಹಾಗೆಯೇ ಮಾಡಿರಿ. ಒಳ್ಳೇದು ನಮುಸ್ಕಾರ.

ನಮುಸ್ಕಾರ

---

ಕಮಲಿನಿ

ಸುಬ್ಬಣ್ಣ ಮುರಾರಿ ಇಬ್ಬರೂ ಪೋಲೀಸು ಕಚೇರಿಯಿಂದ ತಮ್ಮ ಬಿಡಾರಕ್ಕೆ ತಲುಪುವ ಸಮಯಕ್ಕೆ ಮಧ್ಯಾಹ್ನವಾಗಿದ್ದಿತು. ಇಬ್ಬರೂ ಕುಳಿತು ಊಟ ಮಾಡಿದರು ಸುಬ್ಬಣ್ಣವರು ಊಟವಾಗುತ್ತಲೇ ಕೂಡ್ರುವ ಕೋಣೆಯಲ್ಲಿ ಹೋಗಿ ಸಮಾಧಿಸ್ಥರಾದರು ಮುರಾರಿ ಬಂದು ನೋಡು ವಲ್ಲಿ ಸುಬ್ಬಣ್ಣವರು ಸಮಾಧಿಯ ಏಳನೇ ಮೆಟ್ಟಲಲ್ಲೋ ಎಂಟನೇ ಮೆಟ್ಟಲಲ್ಲೋ ಇರುವಂತೆ ತೋರಿತು. ಸುಬ್ಬಣ್ಣವರ ತುಟಿಗಳ ಮಧ್ಯದಲ್ಲಿನ ಸಿಗಾರು ಒಂದೇಸವನೆ ಬೆಂಕಿ ಕಾರುತ್ತಲಿದ್ದಿತು. ಆಗಾಗ್ಗೆ ಸುಬ್ಬಣ್ಣವರ ಮುಖದಿಂದ ಹೊಗೆ ರೈಲುಗಾಡಿಯ ಇಂಜನ್ನಿನ ಹೊಗೆಯಂತೆ ಹೊರಬಿದ್ದು ಕೋಣೆಯಲ್ಲೆಲ್ಲ ತುಂಬುತ್ತಲಿದ್ದಿತು. ಸುಬ್ಬಣ್ಣವರು ಒರಗು ಖುರ್ಚಿಯಲ್ಲಿ ಕುಳಿತು ಮೇಲು ನೋಟದಿಂದ ಜಂತೆಯನ್ನೇ ದೃಷ್ಟಿಸುತ್ತಲಿದ್ದರು ಸುಬ್ಬಣ್ಣವರು ಗಾಢವಾದ ಸಮಾಧಿಯಲ್ಲಿರುವರೆಂದು ತಿಳಿಯುತ್ತಲೇ ಮುರಾರಿ ಬೇರೊಂದು ಸ್ಥಳದಲ್ಲಿ ಹೋಗಿ ಕುಳಿತನು. ಅವನ ಮನಸ್ಸಿನಲ್ಲಿಯೂ ಅನೇಕ ವಿಚಾರಗಳು ತಾಂಡವವಾಡುತ್ತಲಿದ್ದವು ಅವುಗಳನ್ನರಿಯುವ ಉತ್ಸುಕತೆಯಿಂದ ಅವನು ಸುಬ್ಬಣ್ಣವರ ಬಳಿಗೆ ಬಂದಿದ್ದನು

ಶ್ರೀನಿವಾಸರಾಯರ ಕೊಲೆ ಮಾಡಿದವರು ಯಾರು? ಮಧುಕರನೇ ಮಾಡಿರಬಹುದೆ? ಸುಬ್ಬಣ್ಣವರು ಮಧುಕರನು ನಿರಪರಾಧಿಯೆನ್ನುವರು ನಾನಾದರೂ ಮೊದಲು ಅವನು ನಿರಪರಾಧಿಯೆಂದೇ ನಂಬಿದ್ದೆನು. ಆದರೆ ಇಷ್ಟೆಲ್ಲ ಆಧಾರಗಳು ಅವನೇ ಅಪರಾಧಿಯೆಂದು ಸ್ಪಷ್ಟವಾಗಿ ಹೇಳುತ್ತಲಿರಲು

ಯಾರು ತಾನೇ ಮಧುಕರನು ನಿರಪರಾಧಿಯೆಂದು ಹೇಳಬಹುದು? ಸರ್ವ ಸಾಧಾರಣ ತರಗತಿಯ ಯಾವನೂ ಮಧುಕರನು ನಿರಪರಾಧಿಯೆಂದು ಹೇಳಲಾರನು ನಾನಾದರೂ ಈಗ ಅವನು ನಿರಪರಾಧಿಯೆಂದು ಅನ್ನಲಾರೆನು ಏಕೆಂದರೆ, ಬರಿಯ ಬಾಯಿ ಮಾತು ಕೂಡದು. ಮಧುಕರನು ನಿರಪರಾಧಿಯೆಂದು ಹೇಳುವುದಾದರೆ ಅದನ್ನು ಸಿದ್ಧಮಾಡುವ ಸಾಮರ್ಥ್ಯ ಬೇಕಲ್ಲವೆ? ಇಷ್ಟೆಲ್ಲ ಸಬಲ ಕಾರಣಗಳನ್ನು ಸಟಿಮಾಡಿ ತೋರಿಸಿ ದಿಟವನ್ನು—ಕೊಲೆಗಾರನು ಬೇರೆ ಇದ್ದರೆ ಆ ಕೊಲೆಗಾರನನ್ನು ಬಯಲಿಗೆಳೆಯುವ ಪ್ರಚಂಡ ಸಾಹಸವನ್ನು ಕೈಕೊಂಡು ಸತ್ಯಸಂಗತಿ— ತೋರಿಸುವ ಎದೆಗಾರನು ಮಾತ್ರ ಮಧುಕರನು ನಿರಪರಾಧಿಯೆಂದು ಅನ್ನಬಹುದು? ಆದರೆ ಸುಬ್ಬಣ್ಣವರು ಮಧುಕರನು ನಿರಪರಾಧಿಯೆಂದು ಭಾವಿಸಿರುವರಲ್ಲ! ಅಬ್ಬಾ! ಅವರು ಅಂತಹ ಗಟ್ಟಿಗರೇ ಇರುವರು ನೋಡಲಿಲ್ಲವೇ ತಾರಾದಾಸನ ಅಪರಾಧವನ್ನು ಎಷ್ಟು ಚಾತುರ್ಯದಿಂದ ಬಯಲಿಗೆಳೆದರು!! ಅವರು ಹಾಗೆ ಭಾವಿಸಿರುವರೆಂದ ಮೇಲೆ ಅವ ವಿಧಾನಗಳು ಸಟೆಯೆನ್ನುವ ಸಾಹಸಿಗನಾವನು!

ಮುರಾರಿ ಅದೆಷ್ಟೋ ವೇಳೆ ವಿಚಾರಿಸುತ್ತಲೇ ಕುಳಿತನು ಆ ವಿಚಾರ ತಂದ್ರಿಯಲ್ಲಿಯೇ ಅವನಿಗೆ ನಿದ್ದೆಹತ್ತಿ ಎಚ್ಚರಾಯಿತು ಅದೇ ಸಮಯಕ್ಕೆ ಸುಬ್ಬಣ್ಣವರೂ ಅಲ್ಲಿಗೆ ಬಂದರು.

ಏನು ಮುರಾರಿ, ನಿನ್ನೆ ರಾತ್ರಿ ಜಾಗರಣೆಯಾಗಿತ್ತು. ಈಗ ನಿದ್ರೆಯಾಯಿತಲ್ಲವೆ?

ಸುಖನಿದ್ರೆ ದೊರೆಕಿತು, ಆದರೆ ನೀವು ಮಾತ್ರ ನಿದ್ರಿಸಿದಂತೆ ತೋರುವುದಿಲ್ಲ.

ಇಲ್ಲ, ಯೋಚಿಸುತ್ತಲೇ ಕುಳಿತಿದ್ದೆ.

ಏನಾದರೂ ಉತ್ತರ ದೊರೆಕಿರುವದೇ?

ಇಲ್ಲ, ಬಹುತರ ಇನ್ನೂ ಅಭೇದ್ಯವೇ ಆಗಿದೆ.

ಹಾಗಾದರೆ ಈಗ ನೀವು ಯಾವ ಅಭಿಪ್ರಾಯಕ್ಕೆ ತಲುಪಿರುವಿರಿ? ಮಧುಕರನು ನಿಮಗೆ ಹೇಗೆ ಕಾಣುತ್ತಾನೆ? ಅಪರಾಧಿಯೆಂದೋ-ನಿರಪರಾಧಿಯೆಂದೋ?

ನೀನೇನು ಕಲ್ಪಿಸಿರುವೆ

ನನ್ನ ವಿಚಾರ ದೃಢವಾಗಿದೆ.

ಏನೆಂದು?

ಅಪರಾಧಿಯೆಂದು

ಅವನೇ ಕೊಲೆಮಾಡಿರಬೇಕೆನ್ನುವೆಯಾ?

ನಾನೇಕೆ ಅನ್ನುವುದು? ಕಿರುಗತ್ತಿಯ ಮೇಲಿನ ಗುರತು ತಾನೇ ತೋರಿಸುತ್ತದೆ.

ಅಹುದು. ನಿಜ ಕಿರುಗತ್ತಿಯ ಮೇಲಿನ ಕೈಬೆರಳಿನ ಗುರತು ಮಧುಕರನೇ ಅಪರಾಧಿಯೆಂದು ತೋರಿಸುತ್ತದೆ.

ಹಾಗಾದರೆ ನೀವಾದರೂ ಅದೇ ಅಭಿಪ್ರಾಯದವರೇ ಆದಂತಾಯ್ತು.

ಹಾಗೆ ಹೇಳಿದವರಾರು?

ಈಗ ನೀವೇ ಹೇಳಲಿಲ್ಲವೆ, ಕಿರುಗತ್ತಿಯ ಮೇಲಿನ ಕೈಬೆರಳಿನ ಗುರತು ತೋರಿಸುತ್ತಿದೆಯೆಂದು?

ಅಹುದು, ಆದರೆ ಇಷ್ಟರಿಂದ ಮಧುಕರನೇ ಅಪರಾಧಿಯೆಂದು ನಾನು ಅನ್ನಲಾರೆ.

ಅದರಿಂದ ಎಂತಹ ತೊಂದರೆಗೆ ಸಿಲುಕುವಿರೆಂಬದನ್ನು ನೀವು ಯೋಚಿಸಿರಬಹುದು.

ಅಹುದು ಅದನ್ನು ನಾನು ಬಲ್ಲೆ ಮುಖ್ಯವಾದ ತೊಡಕೆಂದರೆ. ಮಧುಕರನನ್ನು ಅಪರಾಧಿಯಾಗಿ ಮಾಡಿದ ಕಿರುಗತ್ತಿಯ ಮೇಲಿನ ಕೈ ಬೆರಳಿನ ಗರುತೇ.

ಅಹುದು ಮಧುಕರನೇ ಅಪರಾಧಿಯೆಂದು ಸಾರಿ ಹೇಳುವ ಸಾಧನವೇ ಅದು ಸಾವುಕಾರರ ಕೊಲೆಗಾರನನ್ನು ಶೋಧಿಸುವ ವರೆಗೆ ರಾಜ ಮಾರ್ಗವೇ ಅದು ಕೊಲೆಗಾರ ಮತ್ತು ಅಧಿಕಾರಿ ಇವರಿರ್ವರಲ್ಲಿನ ಕೊರಕಲು ದಾಟಲು ಸಾಧನವಾದ ಸಂಕವೇ ಅದು.

ನಿಜ ಅದನ್ನು ನಾನು ಮರೆತಿರುವದಿಲ್ಲ.

ಹಾಗಿದ್ದರೂ ಮಧುಕರನು ನಿರಪರಾಧಿಯೆನ್ನುವಿರಾ?

ಓಹೋ! ಹಾಗಿದ್ದರೂ ಅನ್ನುವೆನು. ಸತ್ಯವೇ ಅದಾಗಿದೆ ಸತ್ಯ ಪನ್ನಾಡಲು ಸರ್ವೇಶನ ಭಯವೂ ಇಲ್ಲ. ನಿಜ. ಆದರೆ. .

ಅಹುದು ಮುರಾರಿ, ನಿನ್ನ ಆ ಆದರವನ್ನು ನಾನು ಅನಾದರ ಮಾಡಿಲ್ಲ. ಆ ಆದರವನ್ನ ಆದರಿಸಿ ವಿಚಾರಿಸುವದರಲ್ಲಿಯೇ ಇರುವೆನು

ಹಾಗಿದ್ದರೆ ನೀವು ಯಾವ ಸಂಗತಿ ಕಂಡುಹಿಡಿದಿರುವಿರಿ?

ಈ ಕೊಲೆಯ ಬಗ್ಗೆ ಒಂದೇ ಮಾತಿನಲ್ಲಿ ಹೇಳಬೇಕೆಂದರೆ, ಇದು ಹುಬ್ಬಳ್ಳಿಯಲ್ಲಾದ ಸಾವುಕಾರ ರಾಮರಾಯರ ಕೊಲೆಯ ಪುನರಾವೃತ್ತಿ- ಬರಿಯ ಪುನರ್ಮುದ್ರಣವಲ್ಲ, ತಿದ್ದಿಬೆಳಸಿದ ಪುನರಾವೃತ್ತಿ. ಆಂ, ಅಂದರೆ?

ಅಲ್ಲಿಯ ಕೊಲೆಗಾರ ತಾರಾದಾಸನಿಗಿಂತಲೂ ಇಲ್ಲಿಯ ಕೊಲೆಗಾರ ಬಹಳ ಚಾಣಾಕ್ಷನಿರುತ್ತಾನೆ. ಅಲ್ಲಿಯ ಆರೋಪಿ ಮನೋಹರನಿಗಿಂತಲೂ ಇಲ್ಲಿಯ ಆರೋಪಿ ಮಧುಕರ ಕೀಳು ಪರಿಸ್ಥಿತಿಯಲ್ಲಿರುತ್ತಾನೆ. ಅಲ್ಲಿ ಕೊಂಚ ವಿಚಾರಮಾಡಿ ಮನೋಹರ ನಿರಪರಾಧಿಯಿರಲಾರನು ಎನ್ನುವ ಸಂಭವ ವಿದ್ದಿತು; ಆದರೆ ಇಲ್ಲಿಯೇನು? ಯಾರು ಎಷ್ಟು ವಿಚಾರಿಸಿದರೂ ಮಧುಕರನು ನಿರಪರಾಧಿಯೆನ್ನುವ ವಿಚಾರವೇ ಬರುವಂತಿಲ್ಲ.

ಅಹುದು, ಆದರೂ ನೀವು ಅವನನ್ನು ನಿರಪರಾಧಿಯೆನ್ನುವಿರಲ್ಲ!

ಸತ್ಯವೇ ಆದಿರಬೇಕು.

ಹಾಗಾದರೆ ಕೈಬೆರಳಿನ ಗುರತಿನ ಗತಿಯೇನು?

ಅದಕ್ಕಾದರೂ ಅಂದು ನಾವು ಹಾಕಿದ ರೂಪರೆಷೆಯೇ ಇಲ್ಲಿ ಅನುಸರಿಸುತ್ತದೆ. ನಾನು ಅಗ್ಗೆ ಹೇಳಿದ ಸಂಗತಿ ನಿನ್ನ ಸ್ಮರಣೆಯಲ್ಲಿರಬಹುದು, ಅಂದಿನ ಆರೋಪಿ ಮನೋಹರ ನಿರಪರಾಧಿಯೆಂದು ನಮ್ಮ ವಿವೇಕಕ್ಕೆ ಅನಿಸಲು, ನಾವು ಇಂತಹದೇ ಕೈಬೆರಳಿನ ಗುರತಿನಿಂದ ಪಾರು ಗಾಣಸಲು ಮೂರು ಮಾರ್ಗಗಳನ್ನು ಶೋಧಿಸಿದ್ದೆವು (ಒಂದು) ಮಂತ್ರ ಸಾನ್ನಿಧ್ಯದಿಂದ ಮನೋಹರನನ್ನು ವಶಪಡಿಸಿಕೊಂಡು ಕೊಲೆಮಾಡಿರಬೇಕು (ಎರಡು) ಮನೋಹರನ ಕೈಬರಳಿನಂತಹ ಬೆರಳುಗಳುಳ್ಳ ಬೇರೊಂದು ವ್ಯಕ್ತಿ ಅಸ್ತಿತ್ವದಲ್ಲಿರಬೇಕು (ಮೂರು) ಕೃತಕ ಕೈಬೆರಳು ಸಿದ್ಧಪಡಿಸಿರಬೇಕು ಅಲ್ಲವೆ? ಅಹುದು

ಇಲ್ಲಿಯಾದರೂ ಅದೇ ಸಂಗತಿ ಅನ್ವಯಿಸುತ್ತದೆ.

ಇದರಲ್ಲಿ ಯಾವದು ನಡೆದಿರಬೇಕೆಂದು ನಿಮ್ಮ ಊಹೆಯಿದೆ?

ಯಾವ ಸಂಗತಿ ಸಂಭವಿಸಿದರೂ ಅಷ್ಟೇ. ಕೊಲೆಗಾರನು ಮಧುಕರನನ್ನುಳಿದು ಬೇರೊಬ್ಬನಿರಬೇಕು. ಆತನನ್ನು ಶೋಧಿಸಿದರಾಯಿತು ಏನಿದ್ದದು ಆ ಮೇಲೆ ತಾನೆ ಸ್ಪಷ್ಟವಾಗವುದು.

ನಿಜ, ಆದರೆ ಕೊಲೆಗಾರನನ್ನು ಹೇಗೆ ಗೊತ್ತುಹಚ್ಚಬೇಕು? ನೀವು ಮುಂಜಾವಿನಲ್ಲಿ ಹೇಳಿದಂತೆಯೇ ಹೊರಡಬೇಕನ್ನುವಿರೋ, ಇಲ್ಲವೆ ಅದೇ ಮಾರ್ಗವೇ ಸರಿಯಾದುದೆನ್ನುವಿರೊ?

ಅದೇ ಸರಿಯಾದದಿರಬೇಕೆನ್ನುವೆನು ಕೊಲೆಗಾರನ ಬಗ್ಗೆ ನಾನು ಹೇಳಿದ ವಿಚಾರವು ಪೋಲೀಸಿನವರ ಹೇಳಿಕೆಯಿಂದ ಇನ್ನೂ ಬಲವಾಯಿತಲ್ಲವೆ?

ಅದಾವುದು? ಸಾವುಕಾರರು ಮಧುಕರನ ಹೆಸರಿನಲ್ಲಿ ಮಾಡಿಟ್ಟ ಮೃತ್ಯುಪತ್ರ?

ಅಹುದು ಅದನ್ನು ಸ್ವತಃ ಮಧುಕರ ಅರಿತಿರುವನೋ, ಇಲ್ಲವೋ? ಅವನನ್ನು ಕೇಳಿ ತಿಳಿಯಬೇಕು ಒಂದು ವೇಳೆ ಅವನಿಗಿದು ತಿಳಿದಿರಲಿಕ್ಕಿಲ್ಲ; ಇಲ್ಲವಾದರೆ ಅವನು ನಮ್ಮೆದುರು ಹೇಳದಿರುತ್ತಿರಲಿಲ್ಲ, ಆದರೆ ಧೂರ್ತ ಕೊಲೆಗಾರ ಮಾತ್ರ ಅದನ್ನರಿತವನು. ಅಂತೆಯೇ ಮಧುಕರನನ್ನೇ ಕೊಲೆಗಾರನನ್ನಾಗಿ ಮಾಡಲು ಇಷ್ಟೆಲ್ಲ ಕಾರಸ್ಥಾನ ಕೈಕೊಂಡಿರುತ್ತಾನೆ.

ಹಾಗಾದರ ಈಗ ಏನು ಮಾಡಬೇಕು? ಮಧುಕರನ ಒಳಿಗೆ ಹೋಗಬೇಕೋ ಅಥವಾ ಮಧುಕರನ ಪ್ರಿಯಕರಿಣಿಯು ಒಳಿಗೆಹೋಗಬೇಕೊ?

ನಾವು ಎರಡೂ ಸ್ಥಳಗಳಿಗೆ ಹೋಗಬೇಕಾಗಿದೆ, ಆದರೆ ಅದಕ್ಕೂ ಮೊದಲು ಕೊಂಚ ಕೆಲಸವಿದೆ ಅದೇನು?

ಪೋಲೀಸಿನವರಲ್ಲಿ ತಂದ ಕಾಗದಗಳ ಫೋಟೋ ತೆಗೆಯಬೇಕು.

ಹಾಗಾದರೆ ನಮ್ಮ ಕ್ಯಾಮರಾ ತರೋಣವೇ?

ಹಾಗೆಯೇ ಮಾಡು. ಮತ್ತು ನನ್ನ ಆ ಇನ್ನೊಂದು ಕ್ಯಾಮರಾದಿಂದ ಈಗಿದ್ದ ಎಂಟು ಮಡಿಯಷ್ಟು ದೊಡ್ಡ ಆಕಾರದ ಫೋಟೋ ತೆಗೆಯಬೇಕು. ಅದನ್ನು ನಾಳೆ ಮಾಡು ಈಗ ಒಂದು ಸಾದಾ ಫೋಟೋ ತೆಗೆದು ಬಿಡು.

ಒಡನೆಯೇ ಮುರಾರಿ ತನ್ನ ಕಾರ್ಯಕ್ಕಾರಂಭಿಸಿದ ಅಲ್ಪಾವಕಾಶದಲ್ಲಿಯೇ ತನ್ನ ಕಾರ್ಯ ಪೂರಯಿಸಿಯೂ ಬಿಟ್ಟ ಸುಬ್ಬಣ್ಣವರು ಅದನ್ನು ನೋಡಿ, ಭೇಷ್-ಚನ್ನಾಗಿದೆ ಈಗ ಜೇಲುಮನೆಗೆ ಹೋಗೋಣ ನಡೆ, ಎಂದರು

ಇಬ್ಬರೂ ಕುದುರೆಗಾಡಿಯಲ್ಲಿ ಕುಳಿತು ಹೊರಟರು.

ಜೇಲಿನ ಗೇಟಿಗೆ ತಲುಪುತ್ತಲೇ ಇಬ್ಬರೂ ಕೆಳಗಿಳಿದು ಹೊರಟರು. ಬಾಗಿಲಲ್ಲಿ ನಿಂತಿದ್ದ ಪೋಲೀಸ ಅಧಿಕಾರಿಗೆ ಸುಬ್ಬಣ್ಣವರು ತಮ್ಮ ಕಾರ್ಡು ತೋರಿಸುತ್ತಲೇ ಅವನು ವಿನಯಪೂರ್ವಕವಾಗಿ ನಮಸ್ಕರಿಸಿದನು. ಒಡನೆಯೇ ಸುಬ್ಬಣ್ಣವರು ಮಧುಕರನನ್ನಿಟ್ಟ ಕೋಣೆಗೆ ಕರೆದೊಯ್ಯುವಂತೆ ಹೇಳಲು, ಅವನು ಮುಂದೆಮುಂದೆ ಹೊರಟನು ಮುರಾರಿ ಮತ್ತು ಸುಬ್ಬಣ್ಣ ಇಬ್ಬರೂ ಆತನ ಬೆನ್ನು ಹತ್ತಿ ಹೊರಟರು.

ಮುರಾರಿಗೆ ಅಲ್ಲಿಯ ವ್ಯವಸ್ಥೆ ನೋಡಿ ಆಶ್ಚರ್ಯವಾಯಿತು ಅವನಿಗೆ ತಾನು ಒಳಹೊಕ್ಕ ಸ್ಥಳ ಜೇಲುಮನೆಯೆಂಬುದು ಮರೆತೇ ಹೋಗಿ, ತಾನು ಒಂದು ಔದ್ಯೋಗಿಕ, ಧಾರ್ಮಿಕ ಸಂಸ್ಥೆಯಲ್ಲಿ ಪ್ರವೇಶಿಸಿದಂತೆ ತೋರಿತು.

ಒಂದೆಡೆಗೆ ಬಡಿಗತನ, ಬಣ್ಣ ಕೊಡುವದು, ಚಿತ್ರತೆಗೆಯುವದು ಮುಂತಾದ ಬೇರೆ ಬೇರೆ ಔದ್ಯೋಗಿಕ ಸಂಘಗಳಿದ್ದು, ಅಲ್ಲಿ ಬೇರೆ ಬೇರೆ ಜನರು ತಮ್ಮ ತಮ್ಮ ಕೆಲಸಗಳಲ್ಲಿ ತೊಡಗಿದ್ದರು. ಅವರ ವೇಷ-ಭಾಷೆಗಳಿಂದ ಅವರು ಸಾಮಾನ್ಯ ಜನರಿಗಿಂತ ಯಾವ ವಿಧದಲ್ಲಿಯೂ ಕೀಳು ಸ್ಥಿತಿಯಲ್ಲಿರಲಿಲ್ಲ. ಅವರ ಸ್ವಚ್ಛವಾದ ಉಡುಪು, ನಗುಮುಖ, ಉದ್ಯೋಗದಕ್ಷತೆಗಳನ್ನು ನೋಡಿದರೆ ಅವರು ಕೈದಿಗಳೆಂಬ ಊಹೆ ಕೂಡ ಆಗುವಂತಿರಲಿಲ್ಲ ಅಲ್ಲಿಂದ ಕೊಂಚ ಮುಂದೆ ಹೋಗಲು ಒಂದು ಶಿಕ್ಷಣ ಸಂಸ್ಥೆಯಿದ್ದು, ಅಲ್ಲಿ ಬಾಲಕರು ಶಿಕ್ಷಣ ಹೊಂದುತ್ತಲಿದ್ದರು ಇನ್ನೂ ಮುಂದೆ ಹೋಗಲು, ಅಲ್ಲಿ ಹೆಣ್ಣುಮಕ್ಕಳ ಉದ್ಯೋಗಗಳ ಭಾಗವಿದ್ದಿತು. ಹೊಲಿಗೆ, ಕಸೂತಿ ತೆಗೆಯುವದು, ನೂಲುವದು, ನೇಯುವದು ಮುಂತಾದ ಬೇರೆ ಬೇರೆ ಉದ್ಯೋಗಗಳಲ್ಲಿ ಹೆಣ್ಣುಮಕ್ಕಳು ಹಸನ್ಮುಖದಿಂದ ತೊಡಗಿದ್ದರು ಅದಕ್ಕೆ ಸಮೀಪದಲ್ಲಿಯೇ ಬಾಲಕಿಯರ ಪಾಠಶಾಲೆಯಿದ್ದಿತು ಇವುಗಳನ್ನು ದಾಟಿ ಮುಂದೆ ಹೋಗಲು ದೇವಾಲಯಗಳಿದ್ದವು ಹಿಂದುಗಳ ದೇವಾಲಯಗಳಲ್ಲಿ ಪುರಾಣ-ಪ್ರವಚನಗಳು ನಡೆದಿದ್ದವು. ಕೊಂಚ ದೂರದಲ್ಲಿ ಮುಸಲ್ಮಾನರಿಗೋಸುಗ ಒಂದು ಮಸೀದೆಯೂ ಇದ್ದಿತು.

ಮುರಾರಿಗೆ ಅದನ್ನೆಲ್ಲ ನೋಡಿ ತಾವು ತಲುಪಲಿದ್ದ ಜೇಲು ಇನ್ನೂ ಮುಂದಿರಬಹುದೆಂಬ ಕಲ್ಪನೆ ಬಂದಿತು ಅವನು ಸಂಗಡ ಬಂದ ಪೋಲೀಸಿನವನಿಗೆ:-ಜೇಲು ಇನ್ನೂ ಎಷ್ಟು ದೂರ? ಎಂದು ಕೇಳಿದನು.

ಮುರಾರಿಯ ಅವಸ್ಥೆಯನ್ನು ಸುಬ್ಬಣ್ಣವರು ಅರಿತರು. ಅವರು ಮುರಾರಿಯತ್ತ ಹೊರಳಿ:-ಮುರಾರಿ, ನೀನು ಈ ನಾಡಿಗೆ ಹೊಸಬನು ಇಲ್ಲಿಯ ವಿದ್ಯಮಾನಗಳು ನಿನಗೆ ಅಪರಿಚಿತವಿವೆ ನಮ್ಮ ಕಡೆಯ ಸೆರೆಮನೆಗಳನ್ನು ನೋಡಿ ನೋಡಿ ನಿನ್ನ ಕಣ್ಣಲ್ಲಿ ಆ ನೋಟವೇ ಕುಳಿತುಬಿಟ್ಟಿದೆ. ಅಂತಹದರಲ್ಲಿ ಇಲ್ಲಿರುವ ಈ ಭಾಗವು ಸೆರೆಮನೆ ಎಂದು ಹೇಳಿದರೆ, ನಿನಗೆ ಹೇಗೆ ತಿಳಿಯಬೇಕು?

ಸುಬ್ಬಣ್ಣವರೇ, ಇದು ಸೆರೆಮನೆಯೇ?

ಮುರಾರಿ ಸೆರೆಮನೆಯೆಂದರೆ ಅಪರಾಧಿಗಳನ್ನು ಒಂದೆಡೆ ಸೆರೆಯಿಟ್ಟು ಅವರನ್ನು ಕಠೋರವಾಗಿ ದಂಡಿಸುವ ಸ್ಥಳವಲ್ಲ, ಆದರೆ ಅವರ ನೈತಿಕ ವಿಚಾರಾಚಾರಗಳು ಪೂರ್ಣ ಸುಧಾರಣೆ ಹೊಂದುವಂತಹ ಉಚ್ಚತರಗತಿಯ ಸಂಸ್ಥೆಯಿದೆ. ಒಮ್ಮೆ ತಪ್ಪು ಮಾಡಿದರೆ ಅವನು ಸಮಾಜಕ್ಕೆ ಸಂಪೂರ್ಣವಾಗಿ ತ್ಯಾಜ್ಯನಾಗಲಾರನು. ತಪ್ಪಿಗೆ ಪ್ರಾಯಶ್ಚಿತ್ತ ಹೊಂದಿದರಾಯಿತು. ನಾನು ಮಾಡಿದುದು ತಪ್ಪು, ಎಂದು ಅವನಿಗೆ ಮನವರಿಕೆಯಾಗುವಂತೆ ಮಾಡುವದೇ

ಜೇಲು ಮನೆಯ ಮುಖ್ಯ ಉದ್ದೇಶವು. ಉಣ್ಣಲು ತಿನ್ನಲು ಸಾಕಷ್ಟಿದ್ದು ದುಷ್ಟತನಕ್ಕೆ ಪ್ರವೃತ್ತರಾದವರ ಸಲುವಾಗಿ ಮಾಡಿದ ವ್ಯವಸ್ಥೆಯಿದು; ಆದರೆ ಬಹುತರ ಅಪರಾಧಿಗಳಲ್ಲಿ ತಿನ್ನಲು ಸಾಕಷ್ಟಿರದವರ ಸಂಖ್ಯೆಯೇ ಬಹಳ ಯಾವನೊಬ್ಬನು ಕಳವು ಮಾಡಲಿಕ್ಕಾರಂಭಿಸಬೇಕಾದರೆ ಅವನಿಗೆ ಕೊರತೆ ಇರಬೇಕಲ್ಲವೆ? ಅಂತಹರ ವಿಷಯವಾಗಿ ಸರಕಾರದವರು ಇಬ್ಬಗೆಯಾದ ಶಿಕ್ಷಣ ಕೈಕೊಂಡಿರುವರು ಮಾನಸಿಕ ಶಿಕ್ಷಣ ಕೊಟ್ಟು ನೀತಿ—ಅನೀತಿಗಳನ್ನರಿಯುವಂತೆ ಮಾಡುವುದು, ಮತ್ತು ಅವನಿಗೆ ತಕ್ಕ ಔದ್ಯೋಗಿಕ ಶಿಕ್ಷಣ ಕೊಟ್ಟು ತಮ್ಮ ಹೊಟ್ಟೆಯನ್ನ ಆಯಾಸವಿಲ್ಲದೇ ತುಂಬಿಕೊಳ್ಳುವಂತೆ ಮಾಡುವುದು.

ಇದೊಂದು ಮಾದರಿಯ ಜೇಲುಮನೆಯೇ ಸರಿ.

ಸುಳ್ಳಲ್ಲ ನಿನ್ನ ಅಭಿಪ್ರಾಯ ನಿಜವಿದೆ ಹೇಗೂ ನಾವೀಗ ಇಲ್ಲಿಗ ಬಂದಿರುವೆವು. ಇಲ್ಲಿಯ ಜೇಲುಮನೆಯನ್ನಿನ್ನೊಂದು ದಿನ ಚನ್ನಾಗಿ ನಿರೀಕ್ಷಣ ಮಾಡೋಣ.

ಆ ಸಮಯಕ್ಕೆ ಅವರು ಮಧುಕರನ ಕೋಣೆಗೆ ತಲುಪಿದರು

ಮಧುಕರನು ಇದ್ದದು ಒಬ್ಬ ವಿದ್ಯಾರ್ಥಿಯ ಕೋಣೆಯಂತಿದ್ದಿತ. ಅಲ್ಲಿ ಒಂದೆರಡು ಕುರ್ಚಿಗಳು, ವೃತ್ತಪತ್ರಗಳು, ಪುಸ್ತಕಗಳು ಸಜ್ಜಾಗಿದ್ದವು. ಮಧುಕರನು ತನ್ನ ನಿತ್ಯದ ಉಡುಪಿನಲ್ಲಿಯೇ ಇದ್ದನು ಅದನು ಇಬ್ಬರನ್ನು ನೋಡುತ್ತಲೇ ನಗುಮುಖದಿಂದ ಸ್ವಾಗತಿಸಿದನು. ಅವರು ಅಲ್ಲಿ ಕೂಡುತ್ತಲೇ ಅವರನ್ನು ಕಳುಹಿಸಲು ಒಂದ ಪೋಲೀಸಿನವನು ಮರಳಿ ಹೋದನು

ಏನಪ್ಪಾ ಮಧುಕರ, ಎಲ್ಲ ನೆಟ್ಟಗೆ ತಾನೆ?

ನೆಟ್ಟಗೋ ಅಥವಾ ಕೊಂಕೋ ಎಲ್ಲವೂ ನಿಮ್ಮ ಕೈಯಲ್ಲಿಯೇ ಇದೆ ನನ್ನ ವಿಷಯವಾಗಿ ಏನಾದರೂ ವಿಚಾರ ಮಾಡಿದಿರಾ?

ನಿನ್ನೆಯೇ ನಿನಗೆ ಹೇಳಿಲ್ಲವೆ, ಶಕ್ಯವಿದ್ದ ರೀತಿಯಿಂದ ಯತ್ನಿಸುವೆನೆಂದು

ಅಹುದ, ಅದನ್ನು ಮರೆತಿಲ್ಲ. ನಿಮ್ಮ ಆ ಆಶ್ವಾಸನೆಯಿಂದಲೇ ನಾನಿನ್ನೂ ಜೀವಿಸಿರುವೆನು.

ಕೊಲೆಯ ಸಂಬಂಧವ ಸಂಗತಿಯನ್ನು ನೀನು ಕೇಳಿರಬಹುದು

ಇಂದುಶೇಖರನು ಬಹುತರ ಎಲ್ಲ ಸಂಗತಿಯನ್ನೂ ಹೇಳಿರುವನು

ನಿನ್ನ ಮೇಲೆಯೇ ಆರೋಪ ಬರಲು ಕಾರಣವನ್ನು ನೀನು ಕೇಳಿರುವೆಯಾ?

ಕಿರ ಗತ್ತಿಯ ಮೇಲಿನ ಕೈಬೆರಳಿನ ಗುರತೇ ಕಾರಣವಾಗಿದೆಯಂತೆ ಅನ್ನಕ್ಕೆ ನಿಮ್ಮ ಅಭಿಪ್ರಾಯವೇನು?

ನಾನೇನು ಹೇಳಲಿ? ನನಗೆ ಆ ಬಗ್ಗೆ ಏನೂ ಗೊತ್ತಿಲ್ಲ; ಆದರೆ ನಾನು ಶಿರಪರಾಧಿಯೆಂದು ಮಾತ್ರ ಚನ್ನಾಗಿ ಬಲ್ಲೆ ಯಾವನೋ ಒಬ್ಬ ಚಾಣಾಕ್ಷ ಮನುಷ್ಯನು ಈ ಕಪಟವ್ಯೂಹವನ್ನು ರಚಿಸಿರಬೇಕು. ಅವನು ಒಳ್ಳೇ ಧೂರ್ತನಿರಬೇಕು ನನ್ನ ಕೈಬೆರಳು ಮೂಡಿಸುವ ಬಗೆಯನ್ನು ಅವನು ಹೇಗೆ ಸಾಧಿಸಿರಬೇಕೆನ್ನುವುದೇ ತಿಳಿಯದಾಗಿದೆ. ಇದ ಹೇಗಾಗಿರಬಹುದು?

ಹೇಗೆಯೋ ಆಗಲಿ, ಅದುದಂತೂ ಸರಿಯು ಇದನ್ನು ಬಯಲಿಗೆಳೆಯುವುದೇ ನಮ್ಮ ಮುಖ್ಯ ಕರ್ತವ್ಯವಾಗಿದೆ. ಮಧುಕರ, ಈ ಸಂದರ್ಭದಲ್ಲಿ ನಾನು ಕೆಲವು ಪ್ರಶ್ನೆ ಕೇಳಬೇಕಂದಿರುವೆನು

ಅವಶ್ಯವಾಗಿ ಕೇಳಿರಿ; ಪರಮಾತ್ಮನನ್ನು ಸ್ಮರಿಸಿ ನನಗೆ ತಿಳಿದವ ಟ್ಟಿಗೆ ನಿಜವಾದ ಉತ್ತರವನ್ನೇ ಕೊಡುವೆನು

ಕೆಲವು ನಿನ್ನ ಖಾಸಗಿ ಜೀವನಕ್ಕೆ ಸಂಬಂಧಿಸಿದವಿವೆ.

ಆದರೂ ಅತಂಕವಿಲ್ಲ ಅವು ನಿಮಗೆ ಸಹಾಯವಾಗುವಂತಿದ್ದರೆ ನಿಮಗೆ ಸರಿದೋರಿದ ಎಲ್ಲ ಸಂಗತಿಗಳನ್ನೂ ವಿಚಾರಿಸಬಹುದು

ಸಾವುಕಾರ ಶ್ರೀನಿವಾಸರಾಯರಿಗೂ ನಿನಗೂ ಮನಸ್ತಾಪವಾದುದ ನಿಜವೆ?

ಹಾಗೆ ಹೇಳುವವರಾರು?

ಸಾವುಕಾರರ ಮನೆಯ ಹೆಣ್ಣಾಳು ತನ್ನ ಹೇಳಿಯಲ್ಲಿ ಹೇಳಿರುವಳು

ಎಂದಿಗೂ ಸಾಧ್ಯವಿಲ್ಲ ಅವರು ನನ್ನ ಮೇಲೆ ಪುತ್ರವತ್ ಪ್ರೇಮ ಮಾಡುತ್ತಲಿದ್ದರು ನನ್ನ ನಿಜವಾದ ಹಿತ ಸಾಧಿಸಲ ಅವರು ಯತ್ನಿಸುತ್ತಲಿದ್ದರು ಅಂತಹರೊಡನೆ ಮನಸ್ತಾಪವೆಂದಾದರೂ ಸಾಧ್ಯವಿದೆಯೆ?

ಆಗಾಗ್ಗೆ ಸಾವುಕಾರರಿಗೂ ನಿನಗೂ ವಾದಾಟವಾಗುತಲಿದ್ದುದು ನಿಟವೆ?

ವಾದಾಟವೆ? ವಾದಾಟವೆಂದೆಂದೇ ಅನ್ನಲಾ ದಿದ್ದರೂ ಆಗಾಗ್ಗೆ ನನಗೂ ಅವರಿಗೂ ಕೊಂಚ ಚರ್ಚೆ ನಡೆಯುತ್ತಲಿದ್ದುದು ಮಾತ್ರ ನಿಜ.

ಅದಕ್ಕೆ ಕಾರಣವೇನು?

ಅದಕ್ಕೆ ನಾನು ಮದುವೆಯಾದ ಕಮಲಿನಿಯೇ ಕಾರಣಳು.

ಕಮಲನಿಯ ಪೂರ್ವ ಚರಿತ್ರೆ-ಸ್ವಭಾವಗಳ ಬಗ್ಗೆ ನಮಗೆ ಎಲ್ಲ ಸಂಗತಿ ತಿಳಿಸಬಲ್ಲೆಯಾ;

ನಿಮಗೆ ಈ ಸಂಗತಿ ಬೇಕೇಬೇಕೇನು?

ಅದರ ಆವಶ್ಯಕತೆಯೇನೆಂಬುದು ನಿನಗೆ ಆ ಮೇಲೆ ತಿಳಿದುಬರುವದು.

ಆಗಲಿ. ಕಮಲಿನಿಯ ಪೂರ್ವಚರಿತ್ರೆಯೇನೂ ಅಷ್ಟು ಮಹತ್ವವಾದುದಿಲ್ಲ. ಮುಂಬಯಿಯಲ್ಲಿಯ ಒಬ್ಬ ವ್ಯಾಪಾರಸ್ಥನ ಮಗಳು, ತಕ್ಕಮಟ್ಟಿನ ಶಿಕ್ಷಣ ಹೊಂದಿದವಳು

ಮುಂಬಯಿಯಲ್ಲಿಯ ವ್ಯಾಪಾರಸ್ಥನ ಮಗಳಿಗೂ ನಿನಗೂ ಹೇಗೆ ಕೂಡಿತು?

ಅದೊಂದು ವಿಚಿತ್ರ ಕತೆಯೇ ಆಗಿರುತ್ತದೆ.

ಆಗಲಿ. ಅದನ್ನು ವಿವರಿಸು ನೋಡುವಾ.

ಸುಮ್ಮನೆ ನಿಮ್ಮ ವೇಳೆ ಹಾಳಾಗಬಹುದು

ಅದೇನೋ ಆ ಮೇಲೆ ತಿಳಿಯಬಹುದು ಈಗ ಹೇಳು

ಈಗ ಒಂದು-ಒಂದೂವರೆ ವರುಷಗಳಾಗಿರಬಹುದು ಆಗ ಒಂದು ಸಲ ನಾನು ನಮ್ಮ ಸಾವುಕಾರರ ಒಂದು ಕಳದ ಹತ್ತರ ಹಣ ವಸೂಲ ಮಾಡಲಿಕ್ಕೆಂದು ಮುಂಬಯಿಗೆ ಹೋಗಿದ್ದೆ ಆಕಸ್ಮಿಕವಾಗಿ ನನಗೂ ಇಂದುಶೇಖರನಿಗೂ ಕೂಡಿತು. ಅಂದು ಅವನ ಪರಿಚಯವಾದುದು ಬೆಳೆಯುತ್ತಲೆ ನಡೆಯಿತು. ಹತ್ತೆಂಟು ದಿವಸಗಳಲ್ಲಿ ನಾವೀರ್ವರೂ ಮಿತ್ರರೇ ಆದೆವು ಇಂದುಶೇಖರ ಕಮಲಿನಿಯ ಅಣ್ಣ. ನಾವಿಬ್ಬರೂ ಗೆಳೆಯರಾಗಲು, ಅವನು ತನ್ನ ಮನೆಗೆ ಬರಲು ಆಗ್ರಹ ಮಾಡಹತ್ತಿದ, ಆದರೆ ನಾನು ಬಹಳ ದಿನಗಳ ವರೆಗೆ ತಪ್ಪಿಸುತ್ತಲೇ ಇದ್ದೆ.

ಮುಂದೆ ಒಂದು-ಒಂದೂವರೆ ತಿಂಗಳು ಬಿಟ್ಟು ನಾನು ಪುನಃ ಮುಂಬಯಿಗೆ ಹೋದೆ. ಇಂದುಶೇಖರ ಮತ್ತೆ ನನಗೆ ಭೆಟ್ಟಿಯಾದ; ಆದರೆ ಆವನು ಒಂದು ಭಯಂಕರ ವಿಪತ್ತಿಗೀಡಾಗಿದ್ದ ನಾನು ಹೋಗುವುದಕ್ಕೆ ಕೊಂಚ ಕಾಲವೇ ಮೊದಲು ಅವನ ತಂದೆ ತೀರಿಹೋಗಿದ್ದನಂತೆ. ತಾಯಿಯಂತೂ ಮೊದಲೇ ಸ್ವರ್ಗವಾಸಿಯಾಗಿದ್ದಳು ಸಾವುಕಾರರು ತಮಗೆ ಕೊಡತಕ್ಕ ಗಂಟಿನಲ್ಲಿ ಅಂಗಡಿ ಜಪ್ತುಮಾಡಿದ್ದು, ಬಾಕಿ ಹಣಕ್ಕೆ ಅವರಿದ್ದ ಮನೆಯ ಮೇಲೆ ಕೇಸು ತಂದಿದ್ದರಂತೆ. ಮನೆಯಲ್ಲಿ ಇಂದುಶೇಖರ ಮತ್ತು ಅವನ ತಂಗಿ ಕಮಲಿನಿ ಇಬ್ಬರನ್ನುಳಿದು ಇನ್ನಾರೂ ಇರಲಿಲ್ಲವಂತೆ. ಅದಕ್ಕಾಗಿ ಅವನು ಅತೀವ ದುಃಖಿತನಾಗಿದ್ದ.

ಅವನ ದಾರುಣವಾದ ಸಂಗತಿ ಕೇಳಿ ನನಗೆ ಬಹಳ ಕೆಡಕೆನಿಸಿತು ಅವನು ಕರೆಯದಿದ್ದರೂ ನಾನು ಅವರ ಮನೆಗೆ ಹೋದೆ. ಅನಾಥ

ಕಮಲಿನಿಯ ದುಃಖವನ್ನು ನೋಡಿ ನನಗೆ ಬಹಳ ತಳಮಳವಾಯಿತು. ಎಷ್ಟೋ ವಿಧವಾಗಿ ನಾನಾಕೆಯನ್ನು ಸಂತಯಿಸಿದೆ ನಾಲ್ಕಾರು ದಿನ ಅವರ ಮನೆಯಲ್ಲಿಯೇ ನಿಂತೆ ನಾಲ್ಕು ದಿನಗಳಲ್ಲಿ ಅವರು ನನಗೆ ತೋರಿದ ಪ್ರೇಮವನ್ನು ನೋಡಿ ನಾನು ಮೂಢನೇ ಆದೆ ಕಮಲಿನಿಯು ಸಮ್ಮತಿಯೂ ಸಪ್ರವರ್ತಿನಿಯೂ ಇರುವಳು. ಆಕೆಯ ಪರಿಸ್ಥಿತಿ ಪೂರ್ವದಂತಿದ್ದರೆ ನನಗೆ ಎಂದೂ ದೊರಕುವವಳಲ್ಲ, ಆದರೆ ದೈವಲೀಲೆಯೇ ವಿಚಿತ್ರವಾಗಿತ್ತು. ಆಕೆಯ ತಂದೆ ಸತ್ತು ಸಂಪತ್ತಿಯೆಲ್ಲವೂ ಹೂರಟುಹೋಗಲು, ಅವರು ಈಗವಾಗಿ ದರಿದ್ರಸ್ಥಿತಿಗೆ ತಲ ಪಿದ್ದರು ನನಗೂ ಕಮಲಿನಿಗೂ ಪ್ರೇಮ ಕೂಡಿಕೊಯಿತು. ಇಂದುಶೇಖರ ಆದಕ್ಕೆ ಉತ್ತೇಜನವನ್ನೇ ಕೊಟ್ಟ ಬಹುಕಃ ನಮ್ಮ ವಿವಾಹದ ನಿಶ್ಚಯವೇ ಆದಂತಾಯಿತು ಆ ಸಲ ಇಲ್ಲಿಗೆ ಬರುವ ಸಮಯಕ್ಕೆ ಕಮಲಿನಿಯು ನನ್ನ ಸಂಗಡ ಬರಲು ಸಿದ್ಧಳೇ ಆದಳು. ಇನ್ನು ಉಳಿದವನೆಂದರೆ ಇಂದ ಶೇಖರ. ಅವನಿಗೆ ಆಶ್ರಯಸ್ಥಾನವೇ ಇರಲಿಲ್ಲ; ಪಾಪ! ಸುಸ್ಥಿತಿಯಲ್ಲಿದ್ದವನು ಅಕಸ್ಮಾತ್ತಾಗಿ ಕೀಳ್ತರಗತಿಗಿಳಿದಿದ್ದನು ಬಿ. ಎ. ದ ವರೆಗೆ ಶಿಕ್ಷಣವಾಗಿದೆ ಎಲ್ಲಿಯಾದರೂ ನೌಕರಿ ಶೋಧಿಸುತ್ತಲಿರುವನು. ಆದುದರಿಂದ ಸದ್ಯ ಅವನು ಇಲ್ಲಿಯೇ ಇರುವನು. ಮುಂದೆ ಇಲ್ಲಿಯೇ ನಮ್ಮೀರ್ವರ ವಿವಾಹವಾಯಿತು

ಮಧುಕರನ ಮದುವೆಯ ಸಂಗತಿ ಕೇಳಿ ಸುಬ್ಬಣ್ಣವರಿಗೆ ಏನೆನಿಸಿತೊ ಅದನ್ನು ಅವರೇ ಬಲ್ಲರು; ಆದರೆ ಮುರಾರಿಗೆ ಮಾತ್ರ ಒಳ್ಳೇ ಸೋಜಿಗವೆನಿಸಿತು. ದೈವೀ ಲೀಲೆಯ ಬಗ್ಗೆ ಅವನು ವಿಚಾರಿಸಿದನು ಮುಂಬಯಿಯಂತಹ ಸುಂದರ ಪಟ್ಟಣದಲ್ಲಿ, ಸುಸ್ಥಿತಿಯ ಮನೆತನದಲ್ಲಿ ಬೆಳೆದು ದೊಡ್ಡವಳಾಗಿ ಶಿಕ್ಷಣ ಹೊಂದಿದ ಕಮಲಿನಿಯ ದೈವದ ವಿಚಾರವೇ ಅವನಿಗೆ ಮುಖ್ಯವಾಗಿದ್ದಿತು ಮುನ್ನಿನ ಸ್ಥಿತಿಯಲ್ಲಿಯೇ ಅವಳಿದ್ದರೆ ಮೇಲ್ತರಗತಿಯ ಬಾಳು ಅನುಭವಿಸಬಹುದಾಗಿದ್ದಿತು, ಆದರೆ ದೈವೀ ಆಘಾತದ ಮೂಲಕವಾಗಿ ಮಧುಕರನಂತಹ ಬಡವನನ್ನು ಮದುವೆಯಾಗಿ ಬಡತನದಲ್ಲಿ ಕಾಲಕಳೆಯಬೇಕಾಯಿತೆಂದು ಕಮಲಿನಿಯ ಬಗ್ಗೆ ಕನಿಕರಪಡಹತ್ತಿದನು.

ಹಾಗೆಯೇ ಇಂದುಶೇಖರನ ಭೂತ, ವರ್ತಮಾನ, ಭವಿಷ್ಯತ್‌ಗಳಲ್ಲಿನ ಪರಿಸ್ಥಿತಿಗಳ ವಿಷಯವಾಗಿ ಅದೆಷ್ಟೋ ವೇಳೆ ವಿಚಾರಿಸಿದನು ಹಾಗೆಯೇ ಮನುಷ್ಯನ ಅಸಹಾಯತ್ವ, ನಿರ್ಬಲತೆಗಳ ಯೋಚನೆಯೂ ಅವನ ಮನಸ್ಸಿನಲ್ಲಿ ಬಾರದಿರಲಿಲ್ಲ

ಮೂವರೂ ನಸು ವೇಳೆ ಸುಮ್ಮನೆ ಕುಳಿತುಬಿಟ್ಟಿದ್ದರು. ಮುರಾರಿಗೆ

ಅವನ ವಿಚಾರಗಳೇ ಸಾಕಷ್ಟಕ್ಕೆ ಮಿಕ್ಕಿದ್ದವು. ಮಧುಕರನು ತನ್ನ ಜೀವನ ದಲ್ಲಿನ ಅನೇಕ ಆನಂದ-ದುಃಖಕರ ಸಂಗತಿಗಳ ಚಲನ ಚಿತ್ರಗಳನ್ನ ಒಳಗಣ್ಣು ಗಳಿಂದ ನೋಡುತ್ತ ಕುಳಿತಿದ್ದನು ಇನ್ನು ಸುಬ್ಬಣ್ಣವರ ವಿಚಾರಗಳು ಏನಿದ್ದವೆಂಬದು ಯಾರಿಗೂ ತಿಳಿಯುವಂತಿರಲಿಲ್ಲ ಕೊಂಚ ಅವಧಿಯ ನಂತರ ಸುಬ್ಬಣ್ಣನವರು ಮಧುಕರನಿಗೆ ಪ್ರಶ್ನೆ ಮಾಡಿದರು:—

ಒಳ್ಳೇದು ಮಧುಕರ, ಈ ವಿಷಯದಲ್ಲಿ ಸಾವುಕಾರರಿಗೂ ನಿನಗೂ ವಾದಾಟವೇಕಾಗುತ್ತಲಿದ್ದಿತು?

ಕಮಲಿನಿಯ ಸಲುವಾಗಿಯೇ ಅವರು ನನಗೆ ಮೇಲಿಂದ ಮೇಲೆ ಎಚ್ಚರ ಕೊಡುತ್ತಲಿದ್ದರು ಆದೇಕೆ?

ಅವಳು ನಿಜವಾದ ಸಭ್ಯಮನೆತನದವಳಿರುವರಂತೆ ತೋರುವದಿಲ್ಲ ಯಾರೋ ಬದ್ಮಾಷ್ ಜನರ ಗುಂಪಿನವರೊಳಗಿನವಳಿರುವಂತೆ ತೋರುತ್ತದೆ. ನಿನ್ನನ್ನು ಯಾವದೊಂದು ವಿಪತ್ತಿಗೆ ಗುರಿಮಾಡಬಹುದು.. .. ಮುಂತಾಗಿ ನಾನು ಕಮಲಿನಿಯನ್ನು ಕರೆತಂದ ಕೂಡಲೆ ಅವರು ಹೇಳಿದರು

ಹಾಗೇಕೆ ಅಂದಿರಬಹುದೆಂದು ನೀನು ವಿಚಾರಿಸಿದ್ದೆಯಾ?

ಅಷ್ಟು ವಿಚಾರಿಸುವ ಕಾರಣವೇ ಇರಲಿಲ್ಲ. ಏಕೆ?

ಅವರ ಭಯದ ಕಾರಣವು ಮೇಲೆಯೇ ಇದ್ದಿತು.

ಅದೇನು?

ಮುಂಬಯಿಯೆಂದರೆ ನಮ್ಮಲ್ಲಿಯವರಿಗೊಂದು ದೊಡ್ಡ ಭೀತಿಯೇ! ಅಲ್ಲಿ ಯವರೆಲ್ಲರೂ ಪುಣೆಯ ಭಾಮಟೆಯರೇ, ಎಂದು ಇವರ ವಿಚಾರ ಕರ್ನಾಟ ಕಸ್ಥರೆಂದರೆ ತೀರಾ ಸಭ್ಯರು. ಇವರು ಮುಂಬಯಿಗೆ ಹೋದರೆ ನಿಶ್ಚಯ ವಾಗಿಯೂ ಮೋಸಹೋಗುವರು. ಹೀಗಿರಲು, ಮುಂಬಯಿಯಿಂದ ನಾನು ಇಂದುಶೇಖರ-ಕಮಲಿನಿಯರನ್ನು ಕರೆತರಲು ಅವರ ವಿಷಯವಾಗಿ ಇವರಲ್ಲಿ ಸಂದೇಹಬರುವುದು ಸ್ವಾಭಾವಿಕ.

ಅದಕ್ಕೆ ನೀನೇನೆಂದು ಉತ್ತರ ಕೊಟ್ಟೆ,

ನಾನು ಉತ್ತರ ಕೊಡುವುದೇನು? ಸಾವುಕಾರರೇ, ನಿಮ್ಮ ಅಭಿ-ಪ್ರಾಯ ಅನೇಕ ಸಮಯ ಸರಿಹೋಗುತ್ತಲಿರಬಹುದು; ಆದರೆ ಕಮಲಿನಿ-ಇಂದುಶೇಖರರ ವಿಷಯವಾಗಿ ಸಂಶಯತೆಗೆದುಕೊಳ್ಳಲು ಕಾರಣವೇ ಇಲ್ಲ ಅವರು ಸಭ್ಯರಿರುತ್ತಾರೆಂದು ನನ್ನ ಮನವರಿಕೆಯಾಗಿದೆ, ಎಂದು ಹೇಳುತ್ತ ಲಿದ್ದೆನು.

ಒಳ್ಳೇದು ನಿನ್ನ ಪತ್ನಿ ಕೊಂಚ ಮಿತವ್ಯಯವನ್ನು ಮೀರಿದವಳೆಂದು ವದಂತಿಯಿದೆ. ಆ ಬಗ್ಗೆ ನಿನ್ನ ಮತವೇನು?

ಸುಬ್ಬಣ್ಣವರೆ, ಎಷ್ಟೇ ಆದರೂ ಹೆಣ್ಣುಮಕ್ಕಳು, ಅದರಲ್ಲಿ ಕಮಲಿನಿಯು ಶ್ರೀಮಂತರ ಮಗಳು ಉಡಿಗೆ-ತೊಡಿಗೆಗಳ ಅಭಿಲಾಷೆ ಇರುವುದು ಸಹಜವಾಗಿದೆ, ಆದರೂ ಕಮಲಿನಿಯು ಒಳ್ಳೇ ವಿವೇಕಿಯಿರುತ್ತಾಳೆ. ತನ್ನ ಪರಿಸ್ಥಿತಿಯನ್ನು ಹಾಗೆಯೇ ನನ್ನ ಪರಿಸ್ಥಿತಿಯನ್ನೂ ಮರೆಯುವಷ್ಟು ಮೂಢಳು ಅವಳಲ್ಲವೆಂದು ನಾನು ಅನುಭವಪೂರ್ವಕವಾಗಿ ಹೇಳಬಲ್ಲೆನು; ಆದರೂ ಸುಬ್ಬಣ್ಣವರೇ, ನಾನೇ ಆಕೆ ಕೋರುತ್ತಲಿರುವವನ್ನು ನೋಡಿ ಹೊಸ ಉಡಿಗೆ-ತೊಡಿಗೆಗಳನ್ನು ತಂದೀಯುವನಲ್ಲದೆ, ಆಕೆಯೆಂದೂ ಅವುಗಳಿಗಾಗಿ ತೊಂದರೆಕೊಟ್ಟಿಲ್ಲ

ನೀನು ಹಣಕ್ಕಾಗಿ ಸಾವುಕಾರರಿಗೆ ಮೇಲಿಂದ ಮೇಲೆ ತೊಂದರೆ ಕೊಡುತ್ತಲಿದ್ದೆಯಂತೆ, ನಿಜವೇ? ಅಂ, ಹಣಕ್ಕಾಗಿ ತೊಂದರೆಯೆ?

ಅಹುದು. ಹಾಗೆ ಸೇವಿಕೆಯ ಹೇಳಿಕೆಯುಂಟು, ಮತ್ತು ಆಕೆಯ ಆ ಹೇಳಿಕೆಯ ಮೇಲೆ ಬಹುತರ ಪೋಲೀಸು ಅಧಿಕಾರಿಗಳ ಕಲ್ಪನೆ ಕಟ್ಟಲಾಗಿದೆ

ಏನು ಆಶ್ಚರ್ಯವಿದು? ಸುಬ್ಬಣ್ಣವರೇ, ನಾನೆಂದೂ ಸಾವುಕಾರರಿಗೆ ಒಂದು ಪೈ ಕೂಡಾ ಕೇಳಿಲ್ಲ. ಹೀಗಿದ್ದೂ ಇಂಥ ಅಸಂಬದ್ಧ ಸಂಗತಿ ಹೇಗೆ ಹುಟ್ಟಿತು?

ನೀನು ಹಣಕ್ಕೋಸುಗ ಸಾವುಕಾರರಿಗೆ ತೊಂದರೆ ಕೊಟ್ಟಿಲ್ಲವೆ?

ಛೇ! ಎಂದೂ ಇಲ್ಲ..... ಹಾಗಾದರೆ .

ಆದೇನು ಸುಬ್ಬಣ್ಣವರೇ?

ಇನ್ನೇನೂ ಇಲ್ಲ. ನಿನ್ನ ಹೆಂಡತಿಯ ವೆಚ್ಚ ತಿಂಗಳಿಗೆ ನೂರು ರೂಪಾಯಿಗೆ ಮಿಕ್ಕಿರಬೇಕೆಂದು ಜನವಾರ್ತೆಯಿದೆ ಹಾಗಿದ್ದರೆ ನೀನು ಹಣಕ್ಕೆ ಹೇಗೆ ಮಾಡುವೆ?

ಜನತೆ ಬಲು ವಿಚಿತ್ರವಾದುದು ಯಾವದೊಂದು ಸಂಗತಿಯನ್ನು ತೆಗೆದುಕೊಂಡು ಅದರ ಆಧಾರದಿಂದ ಬಹು ಭವ್ಯವಾದ ಕೋಟೆಯನ್ನೇ ಕಟ್ಟುತ್ತಾರೆ. ತಮ್ಮ ಆ ಕಲ್ಪನೆಗೆ ತಳಹದಿಯು ಗಟ್ಟಿಯಾದುದೋ ಇಲ್ಲವೋ ಎಂಬ ಸಂಗತಿಯನ್ನು ಅತ್ಯಲ್ಪವಾದರೂ ಯೋಚಿಸುವದಿಲ್ಲ ಸುಬ್ಬಣ್ಣವರೇ, ಈ ಸನ್ನಿವೇಶದಲ್ಲಿ ಜನತೆಯ ಕಲ್ಪನೆ ತೀರಾ ನಿರಾಧಾರವಾದದಿದೆ ನಮ್ಮ ವೆಚ್ಚವು ತಿಂಗಳಿಗೆ ನಾಲ್ವತ್ತಕ್ಕೆ ಮೇಲ್ಪಟ್ಟಿಲ್ಲ ಆ ಬಗ್ಗೆ ನನ್ನ ದಿನವಹಿಯನ್ನು ತೋರಿಸಬಲ್ಲೆ. ಇನ್ನು ಒಂದು ವೇಳೆ ಹೆಚ್ಚೇ ಇದ್ದರೂ ಆ ಬಗ್ಗೆ ನಾನು

ಸಾವುಕಾರರಿಗೆ ತೊಂದರೆ ಕೊಡಲು ಕಾರಣವೇನು? ನನ್ನ ಸ್ವಂತದ ಸಿಲ್ಕು ನಾಲ್ಕುನೂರು ರೂಪಾಯಿಗಳುಂಟು.

ಒಳ್ಳೇದು ಮಧುಕರ, ನಿನ್ನ ಪತ್ನಿಯ ಸ್ವಭಾವ ಹೇಗಿದೆ?

ಸುಬ್ಬಣ್ಣವರೇ. ಕಮಲಿನಿಯು ಅದ್ವಿತೀಯ ಸ್ತ್ರೀರತ್ನ. ಸುಗೃಹಿಣಿ. ತಾನು ಶ್ರೀಮಂತರ ಮಗಳಾಗಿದ್ದರೂ ಕಿಂಚಿತ್ತಾದರೂ ಗರ್ವ ವಿಲ್ಲ. ಮನೆತನದ ವೆಚ್ಚವನ್ನೆಲ್ಲಾ ಮಿತವ್ಯಯದಿಂದ ಸಾಗಿಸುವಳು. ನಿಜವಾಗಿಯೂ ಆಕೆಯಂತಹ ಸ್ತ್ರೀಯರು ಸಿಕ್ಕುವುದು ತೀರಾ ಅಪರೂಪವೇ ಆಕೆಯು ಆದರ್ಶ ಗೃಹಲಕ್ಷ್ಮಿಯಾಗಿರುವಳು.

ಒಂದು ಸಲ ಕಮಲಿನಿಯನ್ನು ಕಾಣಬಯಸುತ್ತೇನೆ. ನಿನ್ನ ಆಕ್ಷೇಪ ವೇನೂ ಇಲ್ಲವಷ್ಟೆ?

ನನ್ನ ಆಕ್ಷೇಪವೆ? ಛೆ, ಎಂದಿಗೂ ಇಲ್ಲ. ಅವಶ್ಯವಾಗಿ ಕಾಣಿರಿ. ನಾನು ಹೇಳಿದುದರ ಪ್ರತ್ಯಕ್ಷ ಅನುಭವವು ನಿಮಗಾಗ ವುದು; ಆದರೆ ಸುಬ್ಬಣ್ಣವರೇ, ನೀವು ಕಮಲಿನಿಯನ್ನು ಕಾಣಬಯಸುವುದು ಸವ್ಯದ ಕೊಲೆಯ ವಿಷಯ ದಲ್ಲಿ ಆಕೆಯ ಅಂಗವೇನಾದರೂ ಉಂಟೆಂಬ ಸಂಶಯದಿಂದೇನು? ಹಾಗಿದ್ದರೆ ಮಾತ್ರ ನೀವು ತಪ್ಪು ಕಲ್ಪನೆ ಮಾಡಿಕೊಂಡಿರುವಿರಿ.

ಮಧುಕರ, ನೀನು ಆ ಬಗ್ಗೆ ಅಲ್ಪವಾದರೂ ಆಲೋಚಿಸಬೇಡ. ಕೇವಲ ನಿನ್ನ ಹಿತಚಿಂತನೆಯೇ ನನ್ನ ಉದ್ದೇಶವಾಗಿದೆ. ಅದಕ್ಕೆಂದೇ ನಾನು ಎಲ್ಲ ಸಂಗತಿಯನ್ನು ಯೋಚಿಸಬೇಕಾಗಿದೆ.

ಸುಬ್ಬಣ್ಣವರೇ, ಆ ಬಗ್ಗೆ ನನಗೆ ಪೂರ್ಣ ನಂಬಿಗೆಯಿದೆ..

ಇಲ್ಲಿ ಮಧುಕರ, ಸಾವುಕಾರರು ತಮ್ಮ ಮೃತ್ಯುಪತ್ರ ಮಾಡಿಟ್ಟಿರು ವರೋ, ಇಲ್ಲವೆ ಅವರಿಗೆ ಯಾರಾದರೂ ಆಪ್ತರಿರುವರೋ?

ಆ ಬಗ್ಗೆ ನನಗೆ ಯಾವ ಸಂಗತಿಯೂ ತಿಳಿದಿಲ್ಲ. ಅವರ ಕಕ್ಕನ ಸಂಬಂಧಿಕರಾರೋ ಇರಬೇಕೆಂದು ತೋರುತ್ತದೆ.

ಅವನೆಂದಾದರೂ ಬಂದಿದ್ದನೋ?

ನಾನು ಸಾವುಕಾರರಲ್ಲಿ ನೌಕರಿಗೆ ಸೇರುವುದಕ್ಕೆ ಮೊದಲೇ ಒಂದು ಸಲ ಬಂದಿದ್ದನಂತೆ. ಆ ಮೇಲೆ ಮಾತ್ರ ಇದುವರೆಗೂ ಬಂದಿಲ್ಲ.

ಅವನಿರುವುದೆಲ್ಲಿ?

ಅದನ್ನಾದರೂ ನಾನು ತಿಳಿದಿಲ್ಲ. ಸಾವುಕಾರರು ಆ ಬಗ್ಗೆ ಮಾತೇ ಆಡುತ್ತಲಿರಲಿಲ್ಲ. ಇನ್ನಾರಿಗೂ ಆ ವಿಷಯ ತಿಳಿದಿಲ್ಲ.

ಒಳ್ಳೇದು. ಮಧುಕರ, ಇನ್ನು ಹೋಗುವಾ.

ಜೇಲುಮನೆಯಿಂದ ಇಬ್ಬರೂ ಹೊರಟರು ಮಧುಕರನು ಆದರ ಪೂರ್ವಕವಾಗಿ ಬೀಳ್ಕೊಟ್ಟನು ಸುಬ್ಬಣ್ಣನವರ ಕಲ್ಪನೆಗಳನ್ನರಿಯುವುದು ಮುರಾರಿಗೆ ಶಕ್ಯವಾಗಲಿಲ್ಲ ಅವನ ಸ್ಥಿತಿಯು ವಿಚಿತ್ರವಾಗಿದ್ದಿತು. ಹಿಂದೆಯೆ ಬಂದಂತೆ ಇಂದುಶೇಖರನಲ್ಲಿ ಕೊಂಚ ಸಂಶಯು ಬಂದುದೇನೋ ಸರಿಯೆ ಆ ಬಗ್ಗೆ ಸುಬ್ಬಣ್ಣವರು ಮಧುಕರನನ್ನು ವಿಚಾರಿಸುವರೆಂದು ಯೋಚಿಸಿದ್ದನು, ಆದರೆ ಅದು ಸಟೆಯಾಯಿತು ಇಂದುಶೇಖರನ ಸಲುವಾಗಿ ಕಿಂಚಿತ್ತನ್ನಾದರೂ ವಿಚಾರಿಸಲಿಲ್ಲವಾದುದರಿಂದ ಸುಬ್ಬಣ್ಣನವರ ಮನಸ್ಸನ್ನರಿಯುವುದೇ ಅಶಕ್ಯವಾಯಿತು. ಅವರಿಗೆ ಹಾಗೆ ಕೇಳಬೇಕೆಂದರೆ ರಾಜಮಾರ್ಗದಲ್ಲಿ ಹೊರಟಿದ್ದರು. ಆದುದರಿಂದ ಏನೂ ಮಾತಾಡದೆ ಮನಸಲ್ಲಿಯೇ ಯೋಚನೆ ಮಾಡುತ್ತ ಹೊರಟಿದ್ದನು. ಹೀಗೆ ಇಬ್ಬರೂ ಮಾತಿಲ್ಲದೆ ಮುಂದೊರೆದು ಮಧುಕರನ ಮನೆಗೆ ತಲುಪಿದರು

ಸುಬ್ಬಣ್ಣವರು ಬಾಗಿಲಲ್ಲಿಯೇ ಆಡುತ್ತಲಿದ್ದ ಒಬ್ಬ ಹುಡುಗನ ಕೈಯಲ್ಲಿ ತಮ್ಮ ಕಾರ್ಡು ಕೊಟ್ಟು ಒಳಗೆ ಕಳುಹಿಸಲು ಅಲ್ಪಾವಕಾಶದಲ್ಲಿಯೇ ಆ ಹುಡುಗನು ಹೊರಗೆ ಬಂದು ಅವರನ್ನು ಒಳಗೆ ಕರೆದೊಯ್ದನು.

ಕಮಲಿನಿಯು ಹದಿನೇಳು ಹದಿನೆಂಟು ವರುಷದ ಸುಂದರ ತರುಣಿಯಿದ್ದಳು. ಹಸನ್ಮುಖಿಯಾದಾಕೆಗೆ ಪತಿವಿಯೋಗದ ದಾರುಣವಾದ ದುಃಖವು ಮ್ಲಾನತೆಯನ್ನೇ ಮೂರ್ತಿಮಂತವಾಗಿ ನೆಲಿಸಿತ್ತೆಂದು ತೋರಿತು. ಮಲಿನವಾದ ಉಡುಪು ಆಕೆಯು ದುಃಖಮುದ್ರೆಯು ಸಹಾಯತೆಯನ್ನು ವಹಿಸಿದ್ದಿತು. ಅಸ್ತವ್ಯಸ್ತವಾದ ಕೂದಲು ಆಕೆ ದುಃಖಿ ಎಂದು ಹೇಳುತ್ತಲಿದ್ದಿತು ಆಕೆಯು ಧೈರ್ಯದೊಡನೆ ಆಭರಣಗಳೂ ಕಳಚಿ ಹೋಗಿದ್ದವು ಶೋಕದ ಪ್ರತ್ಯಕ್ಷ ಮೂರ್ತಿಯೇ ಆಗಿದ್ದ ಆಕೆಯನ್ನು ನೋಡಿ ಮುರಾರಿಗೆ ಬಹಳ ಖೇದವೆನಿಸಿತು. ಸುಬ್ಬಣ್ಣವರ ಮತವನ್ನರಿಯುವ ಕುತೂಹಲದಿಂದ ಅವರ ಮುಖದತ್ತ ನೋಡಿದನು ಅದು ನಿರಭ್ರವಾದ ಆಕಾಶದಂತಿದ್ದಿತು'

ಕಮಲಾಬಾಯಿ, ನಾವು ಅನಿವಾರ್ಯವಾಗಿ ನಿಮಗೆ ತೊಂದರೆ ಕೊಡಬೇಕಾಯಿತು

ತೊಂದರೆಯು ಗುಡ್ಡವೇ ಕಳಚಿಬಿದ್ದಿರಲು, ಇಂತಹ ತೊಂದರೆಗಳು ನನಗೆ ಏನು ಮಾಡಬಹುದು? ನನ್ನ ಸಾಧನಸ್ಪಂತೂ ಹಿಡಿದೊಯ್ದಿರುವಿರಿ, ಆದರೆ ಈಗ ಇನ್ನಾರನ್ನು ಕೈದು ಮಾಡಬೇಕಾಗಿದೆ?

ಕಮಲಾಬಾಯಿ, ನನ್ನ ಕಾಡಿನ ಮೇಲಿದ್ದ ಖಾಸಗಿ ಪತ್ತೆದಾರ ಎಂಬ ಶಬ್ದಗಳಿಂದ ನೀವು ಹೀಗೆ ಭಾವಿಸಿರುವಂತೆ ತೋರುತ್ತದೆ

ನಿಜ. ಪತ್ತೆದಾರರಾದ ನೀವು ನನ್ನ ಮನೆಯ ಶೋಧಕ್ಕೆಂದೇ ಬಂದಿರುವಿರೆಂದು ನನ್ನ ಕಲ್ಪನೆಯಾಗಿರುವುದು ನಿಜ, ಮತ್ತು ನೀವಾದರೂ ಅದಕ್ಕೆಂದೇ ಬಂದಿರಬೇಕು. ಇಲ್ಲವಾದರೆ ಇಲ್ಲಿ ಪತ್ತೆದಾರರ ಕೆಲಸವೇನು?

ಅದೇನೋ ನಿಜವೆ, ಆದರೆ ನಾನು ಬಂದ ಉದ್ದೇಶ ಭಿನ್ನವಾದುದಿದೆ                ಅಂದರೆ?

ನನಗೆ ತುಂಬ್ಬಗಾರ ಸುಬ್ಬಣ್ಣನೆನ್ನುವರು

ಸುಬ್ಬಣ್ಣವರ ಯುಕ್ತಿ ನಾಟಿತು ಸುಬ್ಬಣ್ಣವರ ಹೆಸರು ಕೇಳುತ್ತಲೆ, ಕಮಲಿನಿಯು ಒಮ್ಮೆಲೆ ಬೆದರಿದಳು ತನ್ನ ಹೃದಯವನ್ನು ಗಟ್ಟಿಯಾಗಿ ಹಿಡಿದು ಚೀರಿಕೊರೆಸಿದಳು. ಕೂಡಲೆ ಮಾತುಗಳು ಕೂಡ ಹೊರಡಲಿಲ್ಲ ಕೊಂಚ ವೇಳೆ ಸುಮ್ಮನೆ ಕುಳಿತ ಬಿಟ್ಟಳು

ಏಕೆ ಕಮಲಾಬಾಯಿ, ಅಸ್ವಸ್ಥರಿರುವಂತೆ ತೋರುತ್ತದೆ?

ಅಂ ಅಸ್ವಸ್ಥತೆಯೋ! ನಿಜ. ನನಗೆ ಮೊದಲಿನಿಂದಲೂ ಕೊಂಚ ಪಿತ್ಥವಿಕಾರವುಂಟು. ಅದರಲ್ಲಿ ನಮಗೆ ಈ ಸಂಕಟ ಒದಗಿದಂದಿನಿಂದಂತೂ ಮೇಲಿಂದ ಮೇಲೆ ಈ ವಿಕಾರವಾಗುತ್ತಲಿದೆ ದೇವಾ! ಈ ದುಃಖದಿಂದ ಪಾರುಮಾಡು..

ಕಮಲಾಬಾಯಿ ನಾನು ನಿನ್ನನ್ನು ಈ ದುಃಖದಿಂದ ಪಾರುಮಾಡಬೇಕೆಂದೇ ಯತ್ನಿಸುತ್ತಲಿರುವೆನು

ಅಂ. ಸುಬ್ಬಣ್ಣವರೇ, ನಿಜವಾಗಿಯೂ ಪಾರು ಮಾಡುವಿರಾ?

ಮಧುಕರನು ನಿರಪರಾಧಿಯಿರುವನೆಂದು ಸಿದ್ಧಗೊಳಿಸುವಂತೆ ನನ್ನ ಯತ್ನವಿದೆ. ಆ ಬಗ್ಗೆ ಸಾಕಷ್ಟು ಸಂಗತಿಗಳನ್ನು ಕೂಡಹಾಕಲು ಹೊರಟಿರುವೆನು.

ಸುಬ್ಬಣ್ಣವರೇ, ಹೇಗಾದರೂ ಅಷ್ಟು ಕಾರ್ಯ ಕೈಗೂಡಿಸಿಕೊಟ್ಟರೆ ಅತೀವ ಉಪಕಾರವಾಗುವುದು ನೀವು ಹಾಗೆ ಮಾಡುವುದಾದರೆ, ನಾನು ನನ್ನ ಸರ್ವಸ್ವವನ್ನೂ ನಿಮಗೆ ಧಾರೆಯೆರೆಯಲು ಸಿದ್ಧಳಿರುವೆನು.

ಅದಕ್ಕೆಂದೇ ಹೊರಟಿರುವೆನು

ನಾನು ತಮಗೆ ಬೇಕಾದ ಸಾಧನಗಳನ್ನೀಯಲು ಸಿದ್ಧಳಿರುವೆನು; ಆದರೆ ಹೆಣ್ಣುಮಗಳಾದ ನನಗೆ ಯಾವ ಸಂಗತಿ ಗೊತ್ತಿದೆ?

ಮಧುಕರನ ಬಾಹ್ಯಜೀವನದ ವಿಷಯವಾಗಿ ಏನಾದರೂ ಗೊತ್ತಿರುವ ಸಂಭವವುಂಟು ಆದನ್ನೇ ಕೇಳಬಂದಿರುತ್ತೇನೆ ಪುರುಷರ ಚಿತ್ತವೃತ್ತಿ

ಯನ್ನಾಗಲಿ, ಬಾಹ್ಯವೃತ್ತಿಯನ್ನಾಗಲಿ ಸ್ತ್ರೀಯರು, ಅದರಲ್ಲಿ ಆ ಪುರುಷರ ಸಂಬಂಧಿಕರಾದ ಸ್ತ್ರೀಯರು ಬಹು ಬೇಗನೆ ತಿಳಿಯಬಲ್ಲರು

ನನಗೆ ತಿಳಿದ ಮಟ್ಟಿಗೆ ಹೇಳುವೆನು.

ಮುಖ್ಯವಾದ ವಿಚಾರವೆಂದರೆ, ವಧಕರನ ಕೈಬೆರಳಿನ ಗುರತೇ ಅಲ್ಲಿ ಸಿಕ್ಕಿದೆ ಅದು ಅವನು ಅಪರಾಧಿಯೆಂದು ಸಿದ್ಧಗೊಳಿಸುತ್ತಲಿದೆ ಈ ವಿಷಯವಾಗಿ ವಿರುದ್ಧಾಭಿಪ್ರಾಯವನ್ನು ವ್ಯಕ್ತಮಾಡುವುದೇ ಮೂರ್ಖತನವಾಗುವಂತಿದೆ ....

ನಿಜವಾಗಿಯೂ ಆಶೆಯಿಲ್ಲವೆ?

ನಿರಾಶೆಯೇ ಎಂಬುದೇನೋ ಸರಿಯೆ, ಆದರೂ ಕೈಬೆರಳಿನ ಗುರತೇ ಸಟಿಯೆಂದು ಸಿದ್ಧಮಾಡುವುದು ಮಹತ್ಪ್ರಯಾಸಕರವಿದೆ, ಆದರೂ ಅಶಕ್ಯವಿಲ್ಲ.

ಅಂದರೆ? ಆ ಗುರತು ಖೊಟ್ಟಿಯಾಗಿರಬಹದೇ?

ಅದನ್ನೇ ಹೇಳುವುದು ಬೇರೆಯಾಗಿದೆ, ಆದರೆ ಅದು ಮಧುಕರರಾಯನದೇ ಇರಬಹುದೆಂದು ನಿಮ್ಮ ಅನುಮಾನವಿದೆಯೋ?

ಅಂ ಹಾ ಹಾಗೇನೂ ಇಲ್ಲ, ಆದರೆ ನನಗೆ ಆ ಬಗ್ಗೆ ಏನೂ ತಿಳಿಯದಾಗಿದೆ. ✗.

ಅದು ಸಟಿಯೋ ದಿಟವೋ ಎಂಬ ವಿಷಯನಿರ್ಣಯವು ಕಠಿಣವಾಗಿದೆ; ಆದರೂ ನಾವು ಯತ್ನಮಾಡಲೇಬೇಕಲ್ಲವೆ?

ಓಹೊ! ಯತ್ನಿಸಲು ಆಕ್ಷೇಪಣೆಯೇನ? ನಾನು ಇದರಲ್ಲಿ ಯಾವ ಸಹಾಯ ಮಾಡಬಲ್ಲೆನೆಂಬದನ್ನು ತಿಳಿಯಬಹುದೇ?

ಈಗ ನಮಗಿರುವ ದಾರಿಗಳು ಎರಡೇ ಇವೆ ಒಂದು ಕೈಹೆಬ್ಬೆರಳಿನ ಗುರತು ದಿಟವೆಂದು ಗ್ರಹಿಸುವದು. ಹಾಗೆ ಭಾವಿಸಿದರೆ ಮುಗಿದೇ ಹೋಯಿತು. ನಮಗೆ ಮುಂದೊರೆಯಲು ಮಾರ್ಗವೇ ಇಲ್ಲ. ಇನ್ನೊಂದು ದಾರಿಯೆಂದರೆ, ಅದು ಸಟಿಯೆಂದು ಭಾವಿಸುವದು ಸಟಿಯೆಂದರೆ ನಮಗೆ ಬಹಳ ತೊಂದರೆಗಳು ಬಂದು ನಿಲ್ಲುತ್ತವೆ ಮೊದಲನೆಯದು ಆ ಕೈಬೆರಳಿನ ಗುರತು ಮಧುಕರನದಲ್ಲದಿದ್ದರೆ—ಅಂದರೆ ಅದು ದಿಟವಾದುದಲ್ಲದಿದ್ದರೆ, ಖೊಟ್ಟಿಯೇ ಇದ್ದರೆ ಅದನ್ನು ಯಾರು ಮಾಡಿರಬೇಕು? ಅದನ್ನವರು ಹೇಗೆ ಮಾಡಿದರು? ಕೈಬೆರಳಿನ ಗುರತು—ಮಧುಕರನ ಕೈಬೆರಳಿನ ಗುರತನ್ನು—ಅಲ್ಲಿ ಮೂಡಿಸಲು—ಮಾಡಲು ಹೇಗೆ ಸಮರ್ಥರಾದರು? ಇತ್ಯಾದಿ ಪ್ರಶ್ನೆ ಪರಂಪರೆಗೆ ಉತ್ತರ ಸಿಕ್ಕುವುದೇ ಪ್ರಯಾಸಕರವಾಗುತ್ತವೆ

ನಿಮ್ಮ ಅಭಿಪ್ರಾಯ ಹೇಗಿದೆ? ಅದು ಸತ್ಯವೇ ಆವ ಗುರತೋ ಇಲ್ಲವೆ ಖೊಟ್ಟಿಯಾದುದೋ?

ಅದನ್ನು ಈ ವೇಳೆಯಲ್ಲಿ—ನಮಗೆ ಇನ್ನೂ ಯಾವ ಆಧಾರಗಳು ಸಿಕ್ಕದಿರುವಾಗಲೆ ನಾವು ನಿರ್ಧರಿಸುವದು ಅಸಮಂಜಸವಾಗುವುದು, ಮತ್ತು ಆ ನಿರ್ಣಯದ ಅವಶ್ಯಕತೆಯೂ ಇಲ್ಲ ಏಕೆ?

ನಮಗೆ ಆ ನಿರ್ಧರದ ವಿಷಯದ ಅವಶ್ಯಕತೆಯೇ ಇಲ್ಲ. ಏಕೆಂದರೆ ನಮಗೆ ಮುಂದೆ ಸಾಗಲು ಅದೇ ಕಾರಣವಾಗುತ್ತಿಲ್ಲ. ಇಷ್ಟು ಒಂದು ವೇಳೆ ನೀವು ಕೇಳಬಹುದು, ಹಾಗೆ ಅದು ಖೊಟ್ಟಿಯೇ ಎಂದು ಮನವರಿಕೆಯಾಗಿದ್ದಲ್ಲಿ ಪ್ರಯತ್ನ ಮಾಡಬಹುದು ಅದೇ ದಿಟವೆಂದು ನಂಬುಗೆಯಾದರೆ ಮುಂದೆ ಪ್ರಯತ್ನ ಮಾಡುವುದಾದರೂ ಏಕೆ, ಎಂದಲ್ಲವೆ?

ಹಂ. ಅಹುದು... ..ನಿಜ

ಅದಕ್ಕೆ ನನ್ನ ಉತ್ತರವಿಷ್ಟೆ. ನಾವು ತುಬ್ಬುಗಾರರು ಯಾವ ನಿರ್ಣಯಕ್ಕೂ ಹೋಗದೆ ಮಾರ್ಗಹಿಡಿಯುವೆವು; ಮತ್ತು ನಮ್ಮ ಮಾರ್ಗದ ವಿಷಯವಾಗಿಯಾದರೂ ಶಂಕೆಯೇ ಇಲ್ಲ ಇದೇ ಸನ್ನಿವೇಶ ನೋಡಿರಿ ಮಧುಕರನು ಅಪರಾಧಿಯೆಂಬ ಒಂದು ದಾರಿ. ಅವನು ನಿರಪರಾಧಿಯೆಂಬ ದಿನ್ನೊಂದು ಮೊದಲಿನ ದಾರಿಯನ್ನು ಪೋಲೀಸರೇ ಹಿಡಿದು ಬಿಟ್ಟುದರಿಂದ ನಮಗೆ ಅಲ್ಲಿ ಕೆಲಸವೇ ಇಲ್ಲ ಆದುದರಿಂದ ನಾವು ಏನಾದರೂ ಕಾರ್ಯಕ್ಕೈಕೊಳ್ಳಬೇಕೆಂದರೆ, ನಮಗಿರುವ ಇನ್ನೊಂದು ದಾರಿಯೇ, ಎಂದರೆ ಪೋಲೀಸರ ವಿಧಾನಗಳೆಲ್ಲವೂ ಸುಳ್ಳೆಂದು ತಿಳಿದು ಹೊರಡುವೆವು. ಇನ್ನೊಂದು ಸಂಗತಿಯೆಂದರೆ ಅನೇಕ ಸಂದರ್ಭಗಳಲ್ಲಿ ಮನುಷ್ಯನ ಯೋಚನೆಗಳು ತಪ್ಪಿ ಹೋಗುವವೆಂಬದು ನಿಜವಷ್ಟೆ?

ಮನುಷ್ಯನೇನು ತ್ರಿಕಾಲಜ್ಞನೇ?

ಅಹುದು ಅಂತೆಯೇ ನಾವು ಯಾವ ನಿರ್ಧರದ ಗೊಂದಲಕ್ಕೂ ಹೋಗದೆ ಪ್ರಯತ್ನಕ್ಕೇನೇ ತೊಡಗುತ್ತೇವೆ ಏನಾದರೂ ದಾರಿ ಸಿಕ್ಕರೆ ಮುಂದೆ ಹೋಗಿ ಕಾರ್ಯದಲ್ಲಿ ಜಯಪಡೆಯುತ್ತೇವೆ ಸಿಕ್ಕದಿದ್ದರೆ ಮರಳುತ್ತೇವೆ.

ತುಬ್ಬುಗಾರರ ಸಂಗತಿಯೇ ಕಠಿಣ. ಆಗಲಿ ಸುಬ್ಬಣ್ಣವರೇ, ಈಗ ನಾನು ಯಾವ ಸಹಾಯ ಮಾಡಬೇಕು?

ಮಧುಕರನ ಸ್ವಭಾವದ ವಿಷಯಕವಾಗಿ ಕೊಂಚ ಸಂಗತಿ ತಿಳಿದಿದ್ದರೆ ಒಳತೆಂದು ತೋರುತ್ತದೆ. ಆ ಬಗ್ಗೆ ನಿಮಗೇನಾದರೂ ತಿಳಿದಿದ್ದರೆ ಹೇಳಬಹುದು

ಬಹು ಪ್ರೇಮಲ ಸ್ವಭಾವದವರು. ಬಿರು ನುಡಿಗಳು ಅವರ ಮುಖದಲ್ಲಿ ಎಂದೂ ಬರುವುದಿಲ್ಲ. ಸಿಟ್ಟು ಗೊತ್ತೇ ಇಲ್ಲ. ಯಾರ ಮನಸ್ಸೂ ನೋಯಿಸುವವರಲ್ಲ. ಅನ್ಯರ ಆಶೆ ಮಾಡುವವರಲ್ಲ. ಅನೇಕ ವೇಳೆ ತಮ್ಮ ಕೈಯಿಂದಲೇ ಏನಾದರೂ ಕೊಡುವರಲ್ಲದೆ ಅನ್ಯರಿಂದ ಒಂದು ಪೈ ಕೂಡಾ ಆಶೆ ಮಾಡುವವರಲ್ಲ. ಹೇಳಿರಿ, ಇನ್ನೇನು ಬೇಕು?

ಇಷ್ಟು ಸಂಗತಿಯನ್ನೂ ನೀವು ಮನಃಪೂರ್ವಕವಾಗಿಯೇ ಹೇಳಿದಿರೋ ಇಲ್ಲವೆ ಔಪಚಾರಿಕವಾಗಿ ಹೇಳಿರಬಹುದೊ?

ಛೆ! ಸುಬ್ಬಣ್ಣವರೇ, ಈ ಬಗ್ಗೆ ನೀವು ಕೊಂಚವೂ ಸಂದೇಹ ತೆಗೆದುಕೊಳ್ಳಬೇಡಿರಿ. ನನಗೆ ಈ ಬಗ್ಗೆ ಪೂರ್ಣನಂಬಿಗೆಯಾಗಿದೆ. ನನ್ನ ಪೂರ್ವಪುಣ್ಯದ ಬಲದಿಂದಲೇ ಅವರು ನನಗೆ ದೊರೆಕಿರುವರು. ಸುಬ್ಬಣ್ಣವರೇ, ನೀವೇ ಹೇಳಿರಿ. ಬೇಕಾದಷ್ಟು ಶ್ರೀಮಂತಿಕೆಯಿದ್ದರೂ ಪ್ರೇಮಲ ಪತಿ ದೊರೆಯದಿದ್ದರೆ ಆ ಸಂಪತ್ತಿಯಿಂದ ಸುಖವಾಗಬಹುದೇ?

ಸಂಪತ್ತಿವಿರಹಿತ ಪ್ರೇಮದಿಂದಾದರೂ ಸುಖ ಸಿಕ್ಕುವುದೇ?

ನಿಶ್ಚಯವಾಗಿ ಸಿಕ್ಕುತ್ತದೆ. ಸಿಕ್ಕದೇನು? ಪ್ರೇಮಲ ಪತಿ ಸಿಕ್ಕರೆ ಸುಖ, ಅವರೆ ನನಗೆ ಎರಡೂ ಸಿಕ್ಕಿವೆ.

ಅಂದರೆ?

ಪ್ರೇಮಲ ಪತಿ ಮತ್ತು ಸಂಸಾರಕ್ಕೆ ಅವಶ್ಯವೆನಿಸುವಷ್ಟು ಸಂಪತ್ತಿ.

ಸಂಪತ್ತಿ ಸಾಕಷ್ಟಿದೆಯೇ?

ಸಾಲದೇನು? ಯಾವ ತೊಂದರೆಯೂ ಇಲ್ಲದೆ ಉಂಡುಡಲು ಸಾಲುತ್ತಿದೆಯಲ್ಲ. ಇನ್ನೇನು ಬೇಕು?

ಅದೇನೋ ನಾನರಿಯೆ.

ನಿಮ್ಮ ಒಲವು ನನಗೆ ತಿಳಿಯಿತು. ಉತ್ತಮೋತ್ತಮ ವಸ್ತ್ರಗಳನ್ನುಡಲ, ಮೋಟರುಗಳಲ್ಲಿ ತಿರುಗಲು ಬರುವಂತಿಲ್ಲ, ಎಂದು ನೀವು ಆಕ್ಷೇಪಿಸಬಹುದು. ಆದರೆ ಹೊಟ್ಟೆ-ಬಟ್ಟೆಗೆ ದುಡಿಯುವ ತೊಂದರೆ ಇಲ್ಲ. ಇಷ್ಟು ಸಾಲದೆ? ಅಷ್ಟೆಲ್ಲ ದೊರೆತ ಹಣಗಾರರು ಬಹುತರವಾಗಿ ಅವಿವೇಕಿಗಳೇ ಇರುತ್ತಾರೆ. ಅಂತಹ ಅವಿವೇಕಿಗಳಿಂದ ಸುಖ ಬಯಸುವದೆಂದರೆ, ಉಸುಕಿನಿಂದ ಎಣ್ಣೆ ತೆಗೆಯಲು ಯತ್ನ ಮಾಡಿದಂತೆಯೇ ಸರಿ. ನನಗೆ ಉತ್ಕೃಷ್ಟವಾದ ಸುಖವು ಸಿಕ್ಕಿದ್ದಿತು. ಯಾರೋ ದುಷ್ಟರು ನನ್ನ ಸುಖವನ್ನೇ ಹರಣ ಮಾಡಿದರು. ನೀವು ದಯವಿಟ್ಟು ನನಗೆ ಆ ನನ್ನ ಸುಖವನ್ನು ಮರಳಿ ದೊರೆಕಿಸಿ ಕೊಡುವುದಾದರೆ ನಾನು ನಿಮಗೆ ಬಹಳ ಉಪಕೃತಳಾಗುವೆನು.

ಮಧುಕರನ ಗುಪ್ತ ಶತ್ರುಗಳಾರಾದರೂ ಇರಬಹುದೆ?

ಛೆ! ಅವರಂತಹರಿಗೆ ಶತ್ರುಗಳಿರುವುದು ಶಕ್ಯವಿದೆಯೆ?

ಹಾಗಿಲ್ಲವಾದರೆ ಉತ್ತರವೇನು? ಮಧುಕರನೇ ಕೊಲೆ ಮಾಡಬೇಕು, ಇಲ್ಲವಾದರೆ ಅವನ ಶತ್ರುಗಳಾದರೂ ಮಾಡಿರಬೇಕು. ಅವನಿಗೆ ಶತ್ರುಗಳೇ ಇಲ್ಲದಿದ್ದರೆ ಕೊಲೆ ಹೇಗಾಯಿತು?

ಆಂ ...ಅಹುದು . ಅದೇ ನನಗೆ ಹೊಳೆಯದಾಗಿದೆ

ಆಗಲಿ ಯತ್ನವನ್ನೇನೋ ಮಾಡೋಣ ಉಳಿದುದು ಪರಮಾತ್ಮನಾಧೀನ

ದಯವಿಟ್ಟು ಆಗಾಗ್ಗೆ ದೊರೆತ ಸಂಗತಿಯನ್ನು ತಿಳಿಸುತ್ತಿರಬೇಕೆಂದು ಬೇಡಿಕೊಳ್ಳುತ್ತೇನೆ.

ಅವಶ್ಯವಾಗಿ ತಿಳಿಸುವೆನು.

---

# ಕಮಲಿನಿಯ ಕಪಟ.

ಸುಬ್ಬಣ್ಣನವರೇ, ಒಳ್ಳೇ ವಿಚಿತ್ರವಾಗಿ ತೋರುತ್ತದೆ.

ವಿಚಿತ್ರವಿಲ್ಲದೆ ಎಲ್ಲವೂ ಸರಳವಾಗಿಯೇ ಇದ್ದರೆ ಹೇಗಾಗುತ್ತಲಿದ್ದಿತು? ಕನ್ನಡಿಯೊಳಗಿನ ಪ್ರತಿಬಿಂಬದಂತೆ ಎಲ್ಲವೂ ಸ್ಪಷ್ಟವೇ ಇರಲು ಶಕ್ಯವಾದರೂ ಇದೆಯೇ? ಮತ್ತು ಹಾಗೆ ಎಲ್ಲವೂ ಸರಳವಾಗಿಯೇ ಇದ್ದರೆ, ಮಾನವನ ಕೌಶಲ್ಯಕ್ಕೊಂದು ಉದ್ಯೋಗ ಬೇಡವೆ?

ಅದೇನೋ ಸರಿಯೆ, ಆದರೆ........ ಆದರೆ ಏನು?

ಇನ್ನೇನೂ ಇಲ್ಲ, ಇಂದಿನ ದಂಪತಿಗಳ ವಿಷಯ. ಮಧುಕರನು ಮಡದಿಯನ್ನು ಮನಸೋಕ್ತವಾಗಿ ಸ್ತುತಿಸಿದರೆ, ಅವನ ಪತ್ನಿ ಕಮಲಿನಿಯು ಒಂದು ಕೈ ಮುಂದೆಯೇ ನನಗೆ ಇದೇ ಸೋಜಿಗವಾಗಿ ತೋರುತ್ತದೆ

ಅದೇನೂ ಸುಳ್ಳಲ್ಲ ನಾವು ಈ ಸೋಜಿಗಗಡಲಲ್ಲಿಯೇ ಮುಳುಗಿ ಮುಖ್ಯ ಸಂಗತಿಯನ್ನು ಕಂಡು ಹಿಡಿಯಬೇಕಾಗಿದೆ.

ಅಹುದು. ಸುಬ್ಬಣ್ಣವರೇ, ಇಂದಿನ ಕಮಲಿನಿಯ ಮಾತುಗಳಿಂದ ನೀವು ಯಾವ ಕಲ್ಪನೆ ಕಟ್ಟುವಿರಿ?

ನಿನ್ನ ಊಹೆ ಏನಿದೆ?

ಕಮಲಿನಿಯಲ್ಲಿ ಕಾಪಟ್ಯವೇನೋ ಇರಬೇಕೆಂದು ನನ್ನ ಕಲ್ಪನೆಯಿದೆ.

ಹಾಗೆ ಕಲ್ಪಿಸುವ ಕಾರಣವೇನು?

ಕಾರಣವೇನೂ ಅಷ್ಟು ಪ್ರಬಲವಾದುದಿಲ್ಲ: ಆದರೂ ನನ್ನ ಭಾವನೆ ಹಾಗಿದೆ. ಅದಾವುದು?

ಮೊದಲು ಖಾಸಗಿ ಪತ್ರೆದಾರ, ಎಂಬ ಕಾರ್ಡು ನೋಡುತ್ತಲೆ ಆಕೆ ನಿಮ್ಮ ಮೇಲೆ ಕೋಪ ತೋರಿಸಿದುದಂತೂ ಸರಿಯೆ, ಆದರೂ ಆ ಕೋಪದ ಹಿಂಬದಿ ಸಂತೋಷದ ಚಿಹ್ನ ಅಡಕವಾಗಿದ್ದಿತೆಂದು ಸ್ಪಷ್ಟವಾಗಿ ಕಾಣುತ್ತಲಿದ್ದಿತು. ಆ ಮೇಲೆ ನೀವು ನಿಜ ಸಂಗತಿಯನ್ನುಸುರಲು ಆಕೆ ಒಮ್ಮೆಲೆ ಗಾಬರಿಯಾದಳು ತನ್ನ ಹೃದಯದ ಗುಪಿತ ಹೊರಬೀಳಬಹುದೆಂದು ಆಕೆ ಭಯಪಟ್ಟಳು ಆ ವೇಳೆಗೆ ನೀವೇ ಆಕೆಯನ್ನು ಪಾರುಮಾಡಿದಿರಿ. ಆ ಗುರತು ಖೊಟ್ಟಿಯಾಗಿರಬಹುದೇ? ಎಂಬ ಆಕೆಯ ಪ್ರಶ್ನೆಯಂತೂ ಆಕೆಯ ಹೃದಯವೇ ಹೊರಬರವಂತಿದ್ದಿತು. ಹೀಗೆ ನನಗಂತೂ ಕಮಲಿನಿಯು ಕಪಟಮಯಳಾಗಿರುವಂತೆ ತೋರುತ್ತದೆ

ಭಾವು! ಮುರಾರಿ, ನಿಜವಾಗಿಯೂ ನಿನಗೆ ತುಸ್ಸಗಾವಿಕೆಯ ಮರ್ಮ ತಿಳಿಯುತ್ತಿದೆ. ಕಮಲಿನಿಯಲ್ಲಿ ಮೇಲೆ ಕಾಣದಿರುವ ಆ ಕಪಟವನ್ನು ಕಡೆಗೆಳೆಯುವ ಕಾರ್ಯವನ್ನು ನಾವು ಕೂಡಲೆ ಕೈಕೊಳ್ಳಬೇಕಾಗಿದೆ

ಅಂದರೆ, ಆಕೆಯ ಅಂಗವು ಇದರಲ್ಲಿ ಎಷ್ಟು ಮಟ್ಟಿಗಿರಬಹುದು?

ಕಮಲಿನಿಯ ಅಂಗವು ಇದರಲ್ಲ ಒಹಳವಾಗಿದೆ ಅಂದರೆ?

ಕೊಲೆಗಾರನನ್ನಾಗಲಿ, ಅವನು ಕೊಲೆಮಾಡಿದುದನ್ನಾಗಲಿ ಆಕೆ ಅರಿತಿರಬೇಕು.

ಆದರೆ ತನ್ನ ಗಂಡನನ್ನೇ ಘಾತಿಸುತ್ತಲಿರಬಹುದೇ?

ಎಲ್ಲವೂ ತೋರಿಕೆಯದಿದೆ ಅವರದು ಒಂದು ದಕ್ಕರ ಗುಂಪಿದೆ. ಕೊಲೆಗಾರನೇ ಆ ಗುಂಪಿನ ಚಾಲಕನಿರಬಹುದು, ಮತ್ತು ಇವರು ಅವನ ಹಸ್ತಕರಿರಬೇಕು

ಇಂದುಶೇಖರನನ್ನು ಕಾಣಬೇಕೆನ್ನುವಿರಾ?

ಬೇಡ, ಅವನ ಅವಶ್ಯಕತೆಯಿಲ್ಲ ಅವನೊಬ್ಬ ಧೂರ್ತ ಠಕ್ಕನಿರುವನು. ನಾವು ಆದಷ್ಟು ಅವನ ಸಮೀಪಕ್ಕೆ ಹೋಗದಿರುವದೇ ಒಳಿತು

ಅಂದರೆ?....

ಅದು ಆ ಮೇಲೆ ನಿದರ್ಶನಕ್ಕೆ ಬಂದೇ ಒರುತ್ತದೆ ನಿನಗೆ ಇದಿಷ್ಟು ಪೂರ್ವಸೂಚನೆ ಕೊಟ್ಟಿರುವೆನು

ಅಂದು ತಂದ ಹೆಬ್ಬೆರಳಿನ ಗುರತುಗಳ ಭಾವಚಿತ್ರ ತೆಗೆದಿರುವೆನು. ಅವುಗಳನ್ನು ನೋಡುವಿರೇನು?

ಅಹುದು; ತೆಗೆದುಕೊಂಡು ಬಾ, ನೋಡೋಣ.

ಒಡನೆಯೇ ಮುರಾರಿ ಒಳಗೆ ಹೋಗಿ ಒಂದು ಹ್ಯಾಂಡಬ್ಯಾಗ್ ತಂದನು ಅದರಿಂದ ನಾಲ್ಕು ಕಾಗದಗಳನ್ನು ತೆಗೆದು ಸುಬ್ಬಣ್ಣನವರ ಕೈಗೆ ಕೊಟ್ಟನು ಅವುಗಳಲ್ಲಿ ಎರಡು ಪೋಲೀಸರಿಂದ ತಂದುವಿದ್ದು ಇನ್ನೆರಡು ಅವುಗಳ ಭಾವಚಿತ್ರಗಳಾಗಿದ್ದವು ಸುಬ್ಬಣ್ಣವರು ಅವುಗಳನ್ನು ಒಂದೊಂದಕ್ಕೆ ಒರೆ ಹಚ್ಚಿ ಚನ್ನಾಗಿ ನಿರೀಕ್ಷಿಸಿ ಅವು ಸರಿಯಾದುವೆಂದು ಮನಗಂಡು ಅವುಗಳನ್ನು ಮರಳಿ ಮುರಾರಿಯ ಕೈಗೆ ಕೊಟ್ಟರು

ಮುರಾರಿ, ಇವುಗಳ ಎನ್ಲಾರ್ಜ ನಾಳೆ ಮಾಡುವೆಯಾ?

ಅಹುದು, ಬಹುತರ ಎಲ್ಲ ಸಾಹಿತ್ಯವನ್ನೂ ಅಣಿಮಾಡಿರುವೆನು.

ಹಾಗಾದರೆ ಈಗಲೆ ನೀನು ಪೋಲೀಸು ಕಚೇರಿಗೆ ಹೋಗಿ ಇವುಗಳನ್ನು ಶ್ರೀನಿವಾಸರಾಯರಿಗೆ ತಲುಪಿಸಿ, ಬರುವಾಗ್ಗೆ ಜೇಲು ಮನೆಗೆ ಹೋಗಿ, ಮಧುಕರನನ್ನು ಕಂಡು, ಅವನ ಕೈ ಹೆಬ್ಬೆರಳಿನ ೪-೬ ಗುರತು ತೆಗೆದುಕೊಂಡು ಬಾ ಸಂಜೆಯೊಳಗಾಗಿ ಇಷ್ಟು ಕಾರ್ಯಸಾಧಿಸಿ ಬಾ. ರಾತ್ರಿಯಲ್ಲಿ ನಮಗ ಬೇರೆ ಕೆಲಸಗಳಿವೆ

ಒಳ್ಳೇದು. ಹಾಗೆಯೇ ಮಾಡುವೆನು.

ಮಧುಕರನ ಬಳಿಯಲ್ಲಿ ವಿಶೇಷ ಚರ್ಚೆ ಮಾಡಬೇಡ ಇಲ್ಲ

ಒಡನೆಯೇ ಮುರಾರಿ ಕುದುರೆಯ ಗಾಡಿಯನ್ನೇರಿ ಪೋಲೀಸು ಕಚೇರಿಗೆ ಹೋಗಿ ಶ್ರೀನಿವಾಸರಾಯರನ್ನು ಕಂಡು, ಅವರ ಕಾಗದಗಳನ್ನು ಅವರಿಗೊಪ್ಪಿಸಿದನು ಕುಶಲ ಸಮಾಚಾರಗಳಾಗಲು, ಅಲ್ಲಿಂದ ಹೊರಟು ಜೇಲು ಮನೆಗೆ ಹೋಗಿ ಮಧುಕರನನ್ನು ಕಂಡನು. ಮಧುಕರನು ಸುಬ್ಬಣ್ಣವರ ಶೋಧದ ವಿಷಯಕವಾಗಿ ಕೇಳಿದನು ಪರಿಸ್ಥಿತಿಯು ಸಮಾಧಾನಕರವಿದೆ, ಎಂದಿಷ್ಟೇ ತಿಳುಹಿ, ಅಲ್ಲಿಂದ ಅವನ ಹೆಬ್ಬೆರಳಿನ ಗುರತು ತೆಗೆದುಕೊಂಡು ಮರಳಿ ಬರುವ ಸಮಯಕ್ಕೆ ಮುಬ್ಬುಗತ್ತಲಾಯಿತು

ರಾತ್ರಿಯ ಹತ್ತೂವರೆಯ ಹೊತ್ತಿಗೆ ಸುಬ್ಬಣ್ಣವರು ತಮ್ಮ ನಿತ್ಯದ ಉಡುಪು ಧರಿಸದೆ ಕೊಂಚ ಒದಲು ವೇಷದಲ್ಲಿ ಕಾಣಿಸಕೊಂಡರು. ಮುರಾರಿಗೆ ಅವರನ್ನು ನೋಡುತ್ತಲೆ ಅವರು ಕೈಕೊಳ್ಳಲಿದ್ದ ಕಾರ್ಯದ ಕಲ್ಪನೆಯಾಯಿತು ಒಡನೆಯೆ ಅವನೂ ಸುಬ್ಬಣ್ಣವರ ವೇಷಕ್ಕೆ ತಕ್ಕಂತೆ ವೇಷ ಧರಿಸಿ ಸಿದ್ಧನಾದನು ಕೂಡಲೆ ಇಬ್ಬರೂ ಕೂಡಿ ಹೊರಟರು.

ಕುಮುದಪುರದಲ್ಲಿ ಪೋಲೀಸರ ಕಣ್ಣು ತಪ್ಪಿಸಿ ಅಡ್ಡಾಡುವುದು ಸುಲಭವಾಗಿರಲಿಲ್ಲ ಆಗಾಗ್ಗೆ ಪೋಲೀಸರು ತಡೆಯುತ್ತಲಿದ್ದರು ಅವರಿಗೆ ಸಭ್ಯತೆಯ ಸಂಶಯ ಬಂದೊಡನೆಯೇ ಯಾರ ಹೇಳಿಕೆಗೂ ಕಿವಿಗೊಡದೆ, ಕಚೇರಿ

ಯಲ್ಲಿ ಕೂರಿಸಿಯೇ ಬಿಡುತ್ತಲಿದ್ದರು ಸುಬ್ಬಣ್ಣನವರು ಅದನ್ನರಿತಿದ್ದರು ಅಂತೆಯೇ ಅವರು ಒಂದು ಕುದುರೇಗಾಡಿ ಮಾಡಿಕೊಂಡು ಮೊದಲು ಪೋಲೀಸ ಕಮಿಶನರ ಶ್ರೀನಿವಾಸರಾಯರ ಕಚೇರಿಗೆ ಹೋದರು. ಬಾಗಿಲಲ್ಲಿ ಕುಳಿತ ಮನುಷ್ಯನ ಕೈಯಲ್ಲಿ ತಮ್ಮ ಕಾರ್ಡು ಕೊಟ್ಟು ಕಳುಹಿಸಿದರು ಒಡನೆಯೇ ಶ್ರೀನಿವಾಸರಾಯರು ಹೊರಗೆ ಬಂದು ಅತಿಥಿಗಳನ್ನು ನೋಡುತ್ತಲೆ ಅವರಿಗೆ ಆಶ್ಚರ್ಯವೆನಿಸಿತು ಸುಬ್ಬಣ್ಣನವ ಮತ್ತು ಅವರ ಸಹಾಯಕ ಮುರಾರಿಯರನ್ನು ಅವರು ತಮ್ಮ ನಿತ್ಯದ ಉಡುವಾದ ದೋತರ, ಕೋಟು, ರುಮಾಲ, ಟೋಪಿಗಳಲ್ಲಿ ನೋಡಬಹುದೆಂದೆಣಿಸಿದ್ದರು, ಆದರೆ ತಾವು ನೋಡಿದುದು ಬೇರಾ ಹೊಸ ನೋಟವಾಯಿತು ಅವರ ಗೇಣಂಚಿನ ದೋತರ, ಬಗಲಗಸಿಯ ಅಂಗಿ, ಆ ದೊಡ್ಡ ರುಮಾಲು ಕಾಲಲ್ಲಿ ಮೊಚ್ಚೆ ಹೀಗೆ ಅವರ ವೇಷವನ್ನು ನೋಡುತ್ತಲೆ ಒಮ್ಮೆಲೆ ಅವರಿಗೆ ಹೊಳೆಯಲಿಲ್ಲ. ಕೊಂಚ ನಿರೀಕ್ಷಿಸುತ್ತಲೆ ಸುಬ್ಬಣ್ಣನವರನ್ನು ಗುರತಿಸಿದರು.

ಏಕೆ ಶ್ರೀನಿವಾಸರಾಯರೇ, ನೋಜಿಗವೆನಿಸಿತೇನು?

ನೀವೇನು ಕುಬ್ಬುಗಾರರು, ಆದರೂ ಅಷ್ಟು ಮಹತ್ವದ ಕಾರ್ಯವಿರುವಂತೆ ತೋರುವದಿಲ್ಲ, ಏಕೆಂದರೆ, ನಿರೀಕ್ಷಿಸುತ್ತಲೇ ಗೊತ್ತು ಹಿಡಿಯುವಂತಿದೆ.

ನಿಜ, ದೂರಿನಿಂದ ರಾತ್ರಿಯ ಸಮಯದಲ್ಲಿ ಗುರತು ಹಿಡಿಯಕೂಡದೆಂದಿಷ್ಟೇ ಉದ್ದೇಶವಿದೆ.

ತುಬ್ಬುಗಾರಿಕೆಯ ಪ್ರಕರಣವೇನಾದರೂ ಇದೆಯೇ?

ಆ ಬಗ್ಗೆ ಎಲ್ಲ ಸಂಗತಿಯನ್ನೂ ಆ ಮೇಲೆ ತಿಳಿಸುವೆನು. ಮೊದಲು ಪೋಲೀಸರ ಗುರತಿಗೋಸುಗ ನಿಮ್ಮ ಮೌನಮುದ್ರೆಯನ್ನು ಕೊಡಿರಿ

ಒಳ್ಳೇದು

ಮೌನಮುದ್ರೆಯೆಂದರೆ, ಅದೊಂದು ಗುರತಿನ ಉಂಗರ ಅದನ್ನು ಪೋಲೀಸರು ನೋಡುತ್ತಲೆ ಮಾತನಾಡದೆ ಅವರಿಗೆ ಮುಂದೆ ದಾರೀ ಕೊಡಬೇಕಾಗಿದ್ದಿತು. ಸುಬ್ಬಣ್ಣನವರು ದಾರಿಯಲ್ಲಿ ಹೊರಟರೆ ಬಾಯಿಗೆ ಬೀಗವನ್ನೇ ಇಕ್ಕುತ್ತಲಿದ್ದರು. ಅಲ್ಲಲ್ಲಿ ಪೋಲೀಸರ ಸಂಗಡ ಮಾತಾಡುವುದು ತಮ್ಮ ಕಾರ್ಯಕ್ಕೆ ಹಾನಿಕರವೆಂದು ತಿಳಿದು ಹಾಗೆ ಮೌನಮುದ್ರೆ ಕೇಳಿದ್ದರು. ಶ್ರೀನಿವಾಸರಾಯರು ಇಬ್ಬರಿಗೂ ಒಂದೊಂದು ಉಂಗುರ ಕೊಟ್ಟರು. ಸುಬ್ಬಣ್ಣನವರು ಕುದುರೆಗಾಡಿಯುವನಿಗೆ ರಜೆಕೊಟ್ಟು, ಕಾಲು ನಡಿಗೆಯಲ್ಲೇ ಹೊರಟರು.

ಮುಂದೆ ಮುಂದೆ ಸುಬ್ಬಣ್ಣ, ಹಿಂದೆ ಹಿಂದೆ ಮುರಾರಿ ಹೀಗೆ ಮುಂದೊರೆದಿದ್ದರು ಮುರಾರಿಯು ತನ್ನ ವಾಡಿಕೆಯಂತೆ ಸುತ್ತಲಿನ ನೋಟಗಳನ್ನು ನೋಡುವದರಲ್ಲಿ ಮಗ್ನನಾದನು

ಕುಸುಮಪುರದಲ್ಲಿ ಬೆಂಕೆಯಿರಲಿಲ್ಲ ಜನವಸತಿಯಿರುವ ಸ್ಥಳದಲ್ಲಿ ಅಂಗಡಿಗಳಾಗಲಿ ಶಾಲೆಗಳಾಗಲಿ, ಕಚೇರಿಗಳಾಗಲಿ ಒಂದೂ ಇರಲಿಲ್ಲವೆಂದು ಈ ಮೊದಲೇ ಹೇಳಿರುವೆನು. ಹಾಗೆಯೇ ಉಳಿದ ಚೌಕುಗಳ ಸ್ಥಿತಿಯಿದ್ದಿತು. ನಮ್ಮ ತುಬ್ಬುಗಾರಸ್ವಾಮಿಯರು ಪೋಲೀಸ ಕಚೇರಿಯಿಂದ ಹೊರಹೊರಟವರು ಮುಂದೆ ಮುಂದೆಯೇ ಹೊರಟರು ಸುಪರಿಂಟೆಂಡೆಂಟರ ಆಫೀಸಿನಿಂದ ಕೊಂಚ ಮುಂದೆ, ಕೊಂಚವೇ ದೂರದಲ್ಲಿ ಅಸಿಸ್ಟಂಟ ಸುಪರಿಂಟೆಂಡೆಂಟರ ಕಚೇರಿಯಿದ್ದಿತು ಆ ಮುಂದೆ ಸಬ್‌ಇನಸ್ಪೆಕ್ಟರರ ಕಚೇರಿ ಹೀಗೆ ಇನ್ನೂ ಒಂದೆರಡು ಪೋಲೀಸು ಅಧಿಕಾರಿಗಳ ಕಚೇರಿಗಳೇ ಇದ್ದುವು ಪೋಲೀಸ ಕಚೇರಿಗಳ ಕೂಟದಲ್ಲಿ ಗಾಂಭಿರ್ಯವು ಮನೆಮಾಡಿದ್ದಿತು. ನೂರಾರು ಜನ ಪೋಲೀಸರು ಅ[illegible]ದ್ದರೂ ಕಿಂಚಿತ್ತಾದರೂ ಸದ್ದಿರಲಿಲ್ಲ ನಗರ ಸಂರಕ್ಷಣೆಯ ಮುಖ್ಯ ಕಾರಭಾರವನ್ನು ಹೊತ್ತುದರಿಂದ, ಭಿನ್ನ ಭಿನ್ನ ರಸಗಳಲ್ಲೊಂದಾದ ಗಾಂಭೀರ್ಯವು ಮನೆಮಾಡಿದ್ದಿತು ಗಾಂಭೀರ್ಯಕ್ಕೆ ಸಹಕಾರಿಯೇ ಆದ ವೀರರಸವೂ ಅಲ್ಲಿ ನೆಲೆಸಿದ್ದಿತು ಪೋಲೀಸರ ಆ ವೇಷ-ಭೂಷಣಗಳನ್ನೂ ಅವರ ಕಾರ್ಯದಕ್ಷತೆಯನ್ನೂ ಎಂತಹ ಗಟ್ಟಿಗ ಕಳ್ಳನು ನಿರೀಕ್ಷಿಸಿದರೂ, ಅವನ ಎದೆಯು ನಿಶ್ಚಯವಾಗಿ ಒಡೆದು ಹೋಗುವದರಲ್ಲಿ ಸಂದೇಹವೇ ಇರಲಿಲ್ಲ.

ಅಲ್ಲಿಂದ ಮುಂದೆ ಮುಲ್ಕೀಕಚೇರಿಗಳ ಸಮೂಹದಲ್ಲಿ ಪ್ರವೇಶಿಸಿದರು, ರಾತ್ರಿಯ ಸಮಯದಲ್ಲಿ ಅಲ್ಲಿ ಏನಿರಬೇಕು? ಹಗಲಿನಲ್ಲಿ ಕಾರ್ಯಬಾಹುಲ್ಯದ ಸಲುವಾಗಿ ಬೇಗಿನ ವರೆಗೆ ಪೂರ್ಣ ವಿಶ್ರಾಂತಿ ವಹಿಸಲು ಮೌನವನ್ನು ತಳೆದು ಸುಮ್ಮನೆ ನಿಂತಂತೆ ತೋರುತ್ತಲಿದ್ದಿತು, ಅಥವಾ ಬದಿಯಲ್ಲಿನ ಪೋಲೀಸು ಕಚೇರಿಯಲ್ಲಿ ಏನಾಗಲೂ ಗದ್ದಲವಿರುತ್ತಲಿದ್ದು, ತಮ್ಮಲ್ಲಿ ಹಗಲಿನಲ್ಲಿ ಮಾತ್ರವೇ ಜನರ ವಿಹರಿಸಿ ತಮ್ಮ ಕಾರ್ಯಭಾರವನ್ನು ವಹಿಸಿ, ಇರುಳಾಗುತ್ತಲೆ ಅವುಗಳನ್ನು ತ್ಯಜಿಸಿ ತೆರಳಿ ಹೋಗುತ್ತಲಿದ್ದ ಬಗ್ಗೆ ವಿಷಾದವನ್ನು ತಳೆದಂತೆ [illegible] ಯೋಚನೆ ಮಾಡಿದರು

ಮುಲ್ಕೀ ಕಚೇರಿಗೆ ಹೊಂದಿಯೇ ನ್ಯಾಯ ಕಚೇರಿಗಳಿದ್ದವು. ಅವುಗಳ ಸ್ಥಿತಿಯಾದರೂ ಮುಲ್ಕೀ ಕಚೇರಿಗಳಂತೆಯೇ ಆಗಿದ್ದಿತು. ಅಲ್ಲಲ್ಲಿ ಕಾವಲಿಗೆಂದು ನಿಂತಿದ್ದ ಪೋಲೀಸರ ಹೊರತು ಅಲ್ಲಿ ಇನ್ನಾರೂ ಸುಳಿಯುತ್ತಲಿರ

ಲಿಲ್ಲ ಸಹ. ಆಗಾಗ್ಗೆ ಸುಬ್ಬಣ್ಣವರನ್ನು ಪೋಲೀಸರು ತಡೆಯುತ್ತಲಿದ್ದರು, ದರೆ ಇಬ್ಬರೂ ತಮ್ಮ ಬಲಗೈ ಮುಂದೆ ಮಾಡುತ್ತಲೆ ಅವರ ಬೆರಳಿನಲ್ಲಿನ ಮೌನಮುದ್ರೆಗಳನ್ನು ನೋಡಿ ಹಿಂದೆ ಸರಿದು ಅವರಿಗೆ ದಾರಿ ಕೊಡುತ್ತ ಲಿದ್ದರು

ಅಲ್ಲಿಂದ ಮುಂದೆ ಅವರು ನಾಗರಿಕರ ಮನೋರಂಜನೆಯ ಸಾಧನ ಗಳಾದ ನಾಟಕ, ಸಿನೇಮಾ; ಸರ್ಕಸ್ಸು ಮುಂತಾದವುಗಳಿದ್ದ ಚೌಕಿನಲ್ಲಿ ಪ್ರವೇಶಿಸಿದರು. ಕಲೆಯ ನೆಲೆಯೇ ಆದ ಆ ಸ್ಥಳದಲ್ಲಿನ ಶೋಭೆಯು ಅವರ್ಣ ನೀಯವಾಗಿದ್ದಿತು ಸೂರ್ಯಪ್ರಕಾಶಕ್ಕಿಂತಲೂ ಮಿಗಿಲಾದ ಪ್ರಕಾಶವು ಇದ್ದಿತು. ಸಾಧಾರಣವಾಗಿ ನವರಸಗಳೂ ಅಲ್ಲಿ ಮನೆಮಾಡಿದಂತೆ ತೋ- ರುತ್ತಲಿದ್ದಿತು. ಶೃಂಗಾರರಸಕ್ಕೆ ಅಲ್ಲಿ ಕೊರತೆಯೇ ಇರಲಿಲ್ಲ. ನಾಟಕ, ಚಲ ಚ್ಚಿತ್ರಗಳಲ್ಲೆಲ್ಲ ಹೊರಗೆ ಜನತೆಯಲ್ಲಿ ನೂತನ ಪರಿಣಿತ ದಂಪತಿಗಳು ಜಾರ- ಜಾರೆಯರು ಮುಂತಾದವರೆಲ್ಲರೂ ಅಲ್ಲಿ ಬಂದುದರಿಂದ ಶೃಂಗಾರ ಬೀಭತ್ಸ ರಸಗಳು ಅಲ್ಲಿ ಇದ್ದವು ಹಾಸ್ಯರಸವು ಪ್ರಧಾನಪಾತ್ರವನ್ನೇ ವಹಿಸಿದ್ದಿತು ಮನರಂಜನೆಗೆಂದೇ ಬಂದವರು ಅವರ ಎಲ್ಲ ಸುಖ-ದುಃಖಗಳನ್ನೂ ಮರೆಸಿ ಹಾಸ್ಯವು ಅವರ ಮುಖದ ಮೇಲೆ ನಾಟ್ಯವಾಡುತ್ತಲಿದ್ದಿತು ಶೋಕವೀರಾದಿ ರಸಗಳಾದರೂ ಇಲ್ಲದಿರಲಿಲ್ಲ. ನಾ ಮುಂದೆ- ನಾ ಮುಂದೆ ಎಂದು ಸ್ಪರ್ಧೆಗೆ ಒಳಗಾಗಿ ಟಿಕೆಟ್ಟು ತೆಗೆಯುತ್ತಲಿದ್ದ ಜನರಲ್ಲಿ ವೀರರಸವೂ, ತಡವಾದುದ ರಿಂದ ಇಲ್ಲವೆ ಅಷ್ಟು ಗದ್ದಲದಲ್ಲಿ ಹೋಗುವ ಶಕ್ತಿಯಿಲ್ಲದ ಜನರು ಗಟ್ಟಿಗ ರಿಗೆ ಬಿನ್ನವಿಸುವಲ್ಲಿ ಕರುಣಾರಸವೂ, ಟಿಕೆಟ್ಟು ಸಿಕ್ಕದೇ ಮರಳಲಿದ್ದವರ ಮುಖದಲ್ಲಿ ಶೋಕರಸವೂ, ಸರ್ಕಸ್ಸಿನಲ್ಲಿ ನೋಡಬಹುದಾದ ಭಯಂಕರ ನೋಟಗಳ ಪೂರ್ವಸ್ಮರಣೆಯಿಂದಲೇ ಭಯಚಕಿತರಾದ ಸ್ತ್ರೀಯರು—ಚಿಕ್ಕ ಮಕ್ಕಳ ಮುಖದಲ್ಲಿ ಭಯಾನಕ ರಸವೂ ಇದ್ದುವು ಈ ಎಲ್ಲ ರಸಗಳ ಉರುಳಿ ನಿಂದ ಶಾಂತ-ಗಂಭೀರ ರಸಗಳು ಮಾತ್ರಕಾಲ್ದೆಗೆದಂತೆ ತೋರುತ್ತಲಿದ್ದಿತು: ಆದರೆ ಅವು ಅಲ್ಲಿ ಇದ್ದೇ ಇರಲಿಲ್ಲವೆಂದು ಕಲ್ಪಿಸುವಂತಿಲ್ಲ. ಪ್ರತ್ಯಕ್ಷ ಸುಬ್ಬಣ್ಣವರು ಆ ಎರಡೂ ರಸಗಳಿಗೆ ಪೂರ್ಣ ಆಶ್ರಯವನ್ನೇ ಕೊಟ್ಟು ಬಿಟ್ಟಿದ್ದರು.

ಮುರಾರಿಗೆ ಉಳಿದ ಸಂಗತಿಗಳ ಅರಿವೇ ಆಗಲಿಲ್ಲ ಆ ಸಂತೋಷ ಕೂಟವನ್ನು ದಾಟಿ ಬಹಳ ಮುಂದೆ ಹೋಗಿದ್ದರೂ ತನ್ನ ಆ ನವರಸಗಳ ವಿಚಾರದಲ್ಲಿಯೇ ಅವನು ಮಗ್ನನಾಗಿ ಹೊರಟಿದ್ದನು.

ಹಾಗೆಯೇ ಅವರು ಹೋಗುತ್ತಿರಲು ಸುಬ್ಬಣ್ಣನವರು ಮುರಾರಿಯು ಟ್ಟೆ, ಹಿಡಿದು ನಿಲ್ಲಿಸಿದರು. ಮಧುಕರನ ಮನೆಗೆ ಬಂದಂತೆ ಅವನಿಗೆ ತಿಳಿಯಿತು.

ಮಧುಕರನ ಮನೆಯ ಮುಂಬಾಗಿಲು ಬಂದಾಗಿದ್ದಿತು ಅಲ್ಲಿಯೇ ಕಿಡಿಕೆಗಳಲ್ಲಿ ಇಣುಕಲು ಯತ್ನಿಸಿದರು ಅವೂ ಮುಚ್ಚಿಹೋಗಿದ್ದವು ಇನ್ನೂ ಕೊಂಚ ಅತ್ತಿತ್ತ ನೋಡಿ ಹಿಂದಿನ ಮಗ್ಗುಲು ಬರಬೇಕೆಂದು ಹೊರಟರು ನಾಲ್ಕಾರು ಮನೆಗಳನ್ನು ದಾಟಿ ಅವುಗಳನ್ನು ಸುತ್ತುಹಾಕಿ ಹಿಂಭಾಗದಿಂದ ಹಿಂದಿನ ಮಗ್ಗುಲು ಬಂದರು ಮಧುಕರನ ಮನೆಯ ಹಿತ್ತಲ ಗೋಡೆಹತ್ತಿರ ಸುಬ್ಬಣ್ಣನವರು ಗೋಡೆಗೆ ಹೊಂದಿ ನಿಂತು, ಒಳಗೆ ಇಣುಕಿದರು ಒಡನೆಯೇ ಕೊಂಚ ದೂರದಲ್ಲಿ ಕಿಡಿಕೆಯಲ್ಲಿ ಬೆಳಕು ಕಾಣಿಸಿತು ಒಳಗೆ ಎರಡು ವ್ಯಕ್ತಿಗಳು ಮುಸಕು ಮುಸಕಾಗಿ ಕಾಣುತ್ತಲಿದ್ದವು ಅವರು ಇಂದುಶೆಖರ-ಕಮಲಿನಿಯರೇ ಇರಬೇಕೆಂದು ಊಹಿಸಿದರು, ಆದರೂ ಸ್ಪಷ್ಟವಾಗಿ ತಿಳಿಯಬೇಕೆಂದು ತಮ್ಮ ಜೇಬಿನಿಂದ ದೂರದರ್ಶಕ ಯಂತ್ರವನ್ನು ಹೊರದೆಗೆದರು ಅವನ್ನು ಅವರು ಚನ್ನಾಗಿ ಜೋಡಿಸಲು ಅವರಿಗೆ ಸ್ಪಷ್ಟವಾಗಿ ಕಾಣಹತ್ತಿತು ಇಂದುಶೇಖರ ಕಮಲಿನಿಯರಲ್ಲಿ ಪ್ರಣಯಚೇಸ್ಟೆ ನಡೆದಿದ್ದಿತೆಂದು ತಿಳಿಯಿತು ಸುಬ್ಬಣ್ಣನವರು ಅಂತಹ ಬೀಭತ್ಸ ನೋಟಗಳನ್ನು ಎಂದೂ ನೋಡುತ್ತಲಿರಲಿಲ್ಲ, ಆದರೆ ಅಂದು ಅವರ ಚಲನವಲನಗಳನ್ನು ನಿರೀಕ್ಷಿಸ ಬೇಕಾದುದರಿಂದ ಅನಿವಾರ್ಯಹವಾಗಿ ನೋಡುತ್ತ ನಿಂತರು. ಮುರಾರಿಗೆ ದೂರದರ್ಶಕ ಯಂತ್ರವಿಲ್ಲದಿದ್ದರೂ ಒಳನೋಟವು ಅಸ್ಪಷ್ಟವಾಗಿ ಕಾಣದಿರಲಿಲ್ಲ ಅವರು ಅವಸ್ಥೆಯನ್ನು ನೋಡಿ ಅವನಿಗೆ ಖೇದವೆನಿಸಿತು ಆದರ್ಶ ಆರ್ಯಲಲನೆಯೆಂದು ಮಧುಕರನು ಮುಕ್ತಕಂಠದಿಂದ ಹೊಗಳಿದ ಕಮಲಿನಿಯು ತನ್ನ ಗಂಡನನ್ನು ಮರೆತು ಬಿಟ್ಟು, ಅನ್ಯರೊಡನೆ-ಅಣ್ಣನೆಂದು ಜನರೆದುರು ನಟನೆ ಮಾಡುತ್ತಲಿದ್ದ ಇಂದುಶೇಖರನೊಡನೆ-ಪ್ರಣಯದಲ್ಲಿ ತೊಡಗಿದ್ದುದನ್ನು ನೋಡಿ ಅವನಿಗೆ ಸಂತಾಪವಾಯಿತು. ಅದು ಒಂದು ಠಕ್ಕರ ಗುಂಪು, ಎಂದು ಸುಬ್ಬಣ್ಣನವರು ಹೇಳಿದುದು ಅವನ ಲಕ್ಷ್ಯಕ್ಕೆ ಬಾರದಿರಲಿಲ್ಲ ಅವರೆಲ್ಲರೂ ದುಷ್ಟರಾರೋ ಇರಬೇಕೆಂದೂ, ಕುಲೀನರಂತೆ ನಟಿಸುತ್ತಲಿದ್ದರೆಂದೂ ಅವನಿಗೆ ಹೊಳೆಯಿತು ಸಾವುಕಾರರ ಕೊಲೆಗೆಂದೇ-ಅಂತಹ ಆಳವಾದ ಬಲೆಯು ಮಧುಕರನನ್ನು ಹಿಡಿಯಲೆಂದೇ-ರಚಿಸಲ್ಪಟ್ಟಿದ್ದಿತೆಂದು ತಿಳಿದನು ವ್ಯಾಪಾರಸ್ಥನ ಮಕ್ಕಳೆಂಬುದೂ, ಆ ಮೇಲೆ ತಂದೆ ಸತ್ತು ಸಂಪತ್ತಿಯೆಲ್ಲವೂ ಹೋಯಿತೆಂಬದೂ ಅವರ ಬರಿಯ ನಟನೆ ಮಾತ್ರವೇ ಎಂದು ನಂಬಿಬಿಟ್ಟನು ಅವರಾ ಕಾಪಟ್ಯವನ್ನು ಹೊರದೆಗೆಯುವ ಬಗ್ಗೆ ಅವನಿಗೆ ಪೂರ್ಣ ವಿಶ್ವಾಸವಿದ್ದಿತು

ಈ ಬಗ್ಗೆ ಅವನಿಗೆ ಅನ್ಯ ಯೋಚನೆಯೇ ಇರಲಿಲ್ಲ. ಅವನು ಕೋಲೆಗಾರನ ಕೌಶಲ್ಯವನ್ನು ಬಹಳವಾಗಿ ಸ್ತುತಿಸಿದನು. ಆದರೆ ತಮ್ಮ ಮೇಲಿದ್ದ ಭಯಂಕರವಾದ ಜವಾಬುದಾರಿಯನ್ನು ಮರೆತು ಅವರು ಪ್ರಣಯಾಸಕ್ತರಾದುದರಿಂದ ಅವನಿಗೆ ಖೇದವೆನಿಸಿತು. ತಮ್ಮನ್ನು ಯಾರಾದರೂ ನೋಡಿದರೆ ತಮ್ಮ ತಿ ಆಳವಾಗಿ ಬಹಳ ಶ್ರಮದಿಂದ ರಚಿಸಲ್ಪಟ್ಟ ಕಾಪಟ್ಯದ ಬಲೆಯೆಲ್ಲವೂ ಹೊರಬಿದ್ದು, ಅವರಲ್ಲಿ ಮಧುಕರನನ್ನು ಕೆಡಹುವದರ ಬದಲು ತಾವೇ ಬೀಳಬೇಕಾಗುತ್ತಿದ್ದಿತೆಂಬದನ್ನು ಮರೆತು ಅವರು ಪ್ರಣಯಾಸಕ್ತರಾದುದನ್ನು ನೋಡಿ ಅವನಿಗೆ ಕಾಮನ ಬಲದ ಅರಿವಾಗಿ ವಿಸ್ಮಯವೆನಿಸಿತು ಕಾಮಾತುರಾಣಾಂ ನ ಭಯಂ ನ ಲಜ್ಜಾ! ಅವರಿಗೆ ಮುಂಜಾಗ್ರತೆಯು ಬಹಳವಾಗಿರುವದಿಲ್ಲ ಜನನಿಂದೆ ಮನಸಿಂದಗಳ ಭೀತಿಯಿರುವದಿಲ್ಲ. ಅವರಲ್ಲಿ ಸ್ವಚ್ಛಂದವಾಗಿ ನಾಟ್ಯವಾಡುವ ಒಂದೇ ಒಂದು ಭಾವನೆಯೆಂದರೆ, ತಮ್ಮ ಕಾಮತೃಪ್ತಿ. ಅದಕ್ಕಾಗಿ ಅವರು ಬಹಳ ಆತುರವಾದುದರಿಂದ, ಅನ್ಯ ವಿಷಯಗಳಿಗೆ ಗಮನವೀಯದೆ ಆತ್ಮ ಪ್ರಣಯದಾಟದಲ್ಲಿಯೇ ಮಗ್ನರಾಗಿದ್ದರು. ಅವರು ತಮ್ಮಲ್ಲಿಯೇ ಮಾತನಾಡುತ್ತಲಿದ್ದರು, ನಗುತ್ತಲಿದ್ದರು ಅದೆಲ್ಲವನ್ನು ಕೇಳಬೇಕೆಂಬ ಇಚ್ಛೆ ಸುಬ್ಬಣ್ಣವರಲ್ಲಿ ಇರದಿದ್ದರೂ ಅದರಲ್ಲಿ ತಮ್ಮ ಕಾರ್ಯಕ್ಕೆ ಸಹಾಯವಾಗುವಂತಹ ಸಂಗತಿಗಳೇನಾದರೂ ತಿಳಿದರೆ ಕೇಳಬೇಕೆಂಬ ಆಶೆಯಿದ್ದಿತು, ಆದರೆ ದೊರಕುವಂತಿರಲಿಲ್ಲ ಗೋಡೆಯ ಮೇಲೆ ಹತ್ತಿ ಕೆಳಗೆ ಇಳಿದಿದ್ದರೆ ಅವರ ಮಾತು ಕೇಳುವ ಸಂಭವವಿದ್ದಿತು, ಆದರೆ ಅದರಿಂದ ಕಾರ್ಯಹಾನಿಯಾದರೂ ಆಗಬಹುದೆಂದು ಭಯಪಟ್ಟು ಹಾಗೆ ಮಾಡಲಿಲ್ಲ ಮುಂದೆ ಅಲ್ಪಾವಕಾಶ ಅಲ್ಲಿಯೇ ನಿಂತು ಹೆಚ್ಚು ಸಂಗತಿ ತಿಳಿಯುವ ಸಂಭವವಿಲ್ಲೆಂದು ಮನವರಿಕೆ ಮಾಡಿಕೊಂಡು ತಿರುಗಿದರು.

ಅವರು ಮನೆಗೆ ಬಂದಾಗ್ಗೆ ರಾತ್ರಿಯು ಒಂದು ಹೊಡೆದು ಹೋಗಿದ್ದಿತು ದುಷ್ಟ ನೋಟವೊಂದನ್ನು ನೋಡಿದುದರಿಂದ ಇಬ್ಬರ ಮನಸ್ಸಿಗೂ ಬಹಳ ವೇದನೆಯಾಯಿತು ಹಾಗೆಯೇ ಅವರು ಮಾತನಾಡದೆ ಮಲಗಿಕೊಂಡರು

ಮುಂಜಾವಿನಲ್ಲೇಳುತ್ತಲೇ ಮುಂದಿನ ಯೋಚನೆಗಾರಂಭವಾಯಿತು

ಸುಬ್ಬಣ್ಣವರೇ, ಶತ್ರುಗಳು ಬಹಳ ಧೂರ್ತರಿರುವಂತೆ ತೋರುತ್ತದೆ.

ಧೂರ್ತರಿಲ್ಲದಿದ್ದರೆ ಇಷ್ಟು ಉತ್ಕೃಷ್ಟವಾದ ಕಪಟಜಾಲವನ್ನು ರಚಿಸಲು ಶಕ್ತರಾಗುತ್ತಲೇ ಇರಲಿಲ್ಲ

ಸುಬ್ಬಣ್ಣವರೇ, ಸದ್ಯದ ಕಪಟಜಾಲದ ಪೂರ್ಣ ಸಂಗತಿಯೇನಿರಬೇಕು? ಬಹುತರ ಸಂಗತಿಯೆಲ್ಲವೂ ಸ್ಪಷ್ಟವೇ ಆಗಿದೆ.

ಕೊಲೆಗಾರನಾರಿರಬೇಕು?

ಸಾವುಕಾರರ ಒಬ್ಬ ಆಪ್ತವರ್ಗದವನಿರಬೇಕು. ಸಾವುಕಾರರಿಗೆ ಸಂತತಿಯಿಲ್ಲದುದರ ಮೂಲಕ ಅವರ ಸಂಪತ್ತಿಯೆಲ್ಲವನ್ನೂ ಹೊಂದಲು ಈ ಹಂಚಿಕೆ ಹಾಕಿರುವವನು ಸುಶಿಕ್ಷಿತನಿರಬಹುದಲ್ಲವೆ?

ಇಲ್ಲವಾದರೇನು? ಸುಶಿಕ್ಷಿತನಿಷ್ಟೇ ಅಲ್ಲ, ಒಳ್ಳೇ ಧೂರ್ತನೂ ಆಗಿರ ಬೇಕು ರಸಾಯನ ಶಾಸ್ತ್ರದಲ್ಲಿ ಬಲ್ಲವನಿರಬೇಕು

ರಸಾಯನಶಾಸ್ತ್ರವೇಕೆ ಬೇಕು?.

ಈ ಕೇಸಿನಲ್ಲಿನ ಮುಖ್ಯಮುದ್ದೆಯನ್ನೇ ನೀನು ಮರೆತಂತೆ ಕಾಣು ತ್ತದೆ. ಅದಾವುದು?

ಮಧುಕರನೇ ಅಪರಾಧಿಯೆಂದು ಕಂಡು ಹಿಡಿಯಲು ಕಾರಣವೇನು?

ಓಹೋ ಲಕ್ಷ್ಯದಲ್ಲಿ ಬಂದಿತು

ಇದೀಗ ಕೊಲೆಗಾರನ ವಿಷಯುವಾಯಿತು ಇನ್ನು ಕೊಲೆಗಾರನಿಗೆ ಸಹಾಯ ಮಾಡಿದವರ ವಿಷಯುವನ್ನು ವಿಚಾರಿಸೋಣ,

ಕಮಲಿನಿ ಮತ್ತು ಇಂದುಶೇಖರರಲ್ಲವೆ?

ಆವರ ಹೊರತು ಇನ್ನೊಬ್ಬರಿರುವರು. ಅವರಾರು?

ಅವರನ್ನೂ ಗೊತ್ತು ಹಚ್ಚುವದು ನಮ್ಮ ಕೆಲಸವೇ ಆಗಿದೆ.

ಹೇಗೆ ಗೊತ್ತು ಹಚ್ಚಬೇಕು?

ಊಹಿಸು, ನೋಡೋಣ.

ನನಗೆ ಆ ಬಗ್ಗೆ ವಿಚಾರಗಳೇ ಬರುವದಿಲ್ಲವಲ್ಲ!

ಈ ಸಂದರ್ಭದಲ್ಲಿ ನಾವು ಭಿನ್ನ ಭಿನ್ನವಾದ ಹಲವು ಸಂಗತಿಗಳನ್ನು ವಿಚಾರಿಸಬೇಕಾಗುತ್ತದೆ.

ಈ ಕೊಲೆ ಹೇಗೆ ಸಂಭವಿಸಿತೆಂದು ನಿನ್ನ ವಿಚಾರವಿದೆ?

ಯಾವನೋ ಒಬ್ಬ ಧೂರ್ತ ಕೊಲೆಗಾರನಿಂದ.

ಇಷ್ಟೇ ಆದರೆ ಮುಗಿಯುವದಿಲ್ಲ. ಇನ್ನೇನು?

ಏನೆಂದರೆ, ಅವನು ಕೊಲೆ ಹೇಗೆ ಮಾಡಿದನು? ಚೂರಿಯಿಂದ, ಎಂದು ಸಹಜವಾಗಿ ಉತ್ತರ ಕೊಡಬಹುದು, ಆದರೆ ಆ ಕಿರುಗತ್ತಿಯ ಮೇಲಿನ ಕೈ ಬೆರಳಿನ ಗುರತು ಮಧುಕರನದಿರುತ್ತದೆಯಲ್ಲವೆ? ಅದನ್ನವನು ದೊರಕಿಸಲು ಇನ್ನೊಬ್ಬದು ವ್ಯಕ್ತಿಯ ಸಹಾಯಪಡೆಯಲೇಬೇಕಲ್ಲವೆ? ಆ ವ್ಯಕ್ತಿಯಾರು? ಎಂದು ಕಂಡು ಹಿಡಿಯುವದೊಂದು ಕೆಲಸವೇ ಇರುತ್ತದೆ. ಆ ಬಗ್ಗೆ ಆ ಮೇಲೆ ವಿಚಾರಿಸುವಾ. ಈಗ ನಮಗೆ ಬೇರೊಂದು ಕೆಲಸವಿದೆ.

ಅದೇನು? ಕೊಲೆಗಾರನ ಸುಳುವು ಹಚ್ಚಬೇಕಲ್ಲವೆ?

ನಿಜ, ಆದರೆ ಸಾಧಿಸುವ ಬಗೆ ಹೇಗೆ?

ಅವನ ಹಸ್ತಕರ ಗೊತ್ತು ಹತ್ತಿದೆಯಲ್ಲವೆ? ಅಹುದು.

ಅವರ ಮೇಲೆ ದೃಷ್ಟಿಯಿರಿಸುವದರಿಂದ ನಮ್ಮ ಕೆಲಸವಾಗುವದು

ನಿಜ ಒಂದು ವೇಳೆ ಅವನು ಬೇರೊಂದು ಊರಲ್ಲಿದ್ದರೂ ಅವನು ಇಲ್ಲಿಗೆ ಹೋಗಿಬರುತ್ತಲಿದ್ದರೂ ಇರಬಹುದಲ್ಲವೆ ಸುಬ್ಬಣ್ಣವರೇ?

ಹೌದು ನಾವು ಈ ಎಲ್ಲ ಸಂಗತಿಗಳ ಮೇಲೆ ಲಕ್ಷ್ಯವಿರಿಸಬೇಕಾಗುತ್ತದೆ.

ಹೀಗೆ ಅವರೀರ್ವರೂ ನಿರ್ಧರಿಸಿ ಇಂದುಶೇಖರ-ಕಮಲಿನಿಯರ ಮೇಲೆ ಕಣ್ಣಿಡಲು ಆರಂಭಿಸಿದರು.

ಆ ದಿವಸ ಮುರಾರಿಯು ಮಧುಕರನ ಮನೆಯ ಎದುರಿಗಿನ ಮನೆಯ ಅಟ್ಟವನ್ನು ಬಾಡಿಗೆಗೆ ಹಿಡಿದು ಅವನು ಅಲ್ಲಿಯೇ ವಸತಿ ಹಾಕಿದನು ಅಲ್ಲಿಂದ ಮಾಧುಕರನ ಮನೆಗೆ ಬರಹೋಗುವ ಜನರು ಚನ್ನಾಗಿ ಕಾಣುತಲಿದ್ದರು ಒಂದು ದಿನ ಮುರಾರಿ ಮೇಲೊಂದು ಕುರ್ಚಿ ಹಾಕಿ ಕೂರುವಷ್ಟರಲ್ಲಿ ಇಂದುಶೇಖರನು ಮನೆಯಿಂದ ಹೊರಟನು. ಒಡನೆಯೇ ತಾನೂ ಒಬ್ಬ ಒಕ್ಕಲಿಗನ ವೇಷ ಧರಿಸಿ ಬೆನ್ನುಹತ್ತಿದನು. ಇಂದುಶೇಖರನು ಮನೆಯಿಂದ ಹೊರಟವನು. ಅಂಚೇ ಕಚೇರಿಗೆ ಹೋದನು. ಮುರಾರಿಯೂ ಬೆನ್ನುಹತ್ತಿದನು ಮೇಲೆ ಹೋಗಿ ಇಂದುಶೇಖರನು ಒಂದು ಕವ್ಹರ ಕೊಂಡನು. ಮುರಾರಿಯೂ ಅವನ ಸಂಗಡವೇ ಮೇಲೆ ಹೋಗಿ ತನಗೆ ಅಗತ್ಯವಿಲ್ಲದಿದ್ದರೂ ಒಂದು ಕಾರ್ಡು ಕೊಂಡನು ಇಂದುಶೇಖರನು ತನ್ನ ಜೇಬಿನಿಂದ ಪತ್ರವೊಂದನ್ನು ತೆಗೆದು ಪಾಕೀಟಿನಲ್ಲಿಟ್ಟನು. ಅದರ ಬಾಯಿ ಮುಚ್ಚಿ ಅದರ ಮೇಲೆ ವಿಳಾಸ ಬರೆಯಹತ್ತಲು, ಮುರಾರಿಗೆ ಆತನು ಬರೆದ ವಿಳಾಸವನ್ನರಿಯುವ ಇಚ್ಛೆಯಾಯಿತು ಕೂಡಲೆ ಅವನು:—ಯಪ್ಪಾ, ನಂದೊಂಟು ಪತ್ರಾ ಬರೀತೀರಾ? ಅನ್ನುತ್ತ ಇಂದುಶೇಖರನು ಬರೆಯುವಲ್ಲಿ ಇಣುಕಿದನು. ಕೆ ಆರ್. ದೇಸಾಯಿ, ಬಿ ಎಸ್.ಸಿ ಎಂಬ ಹೆಸರೂ ಮತ್ತು ಮನೆ ನಂಬರು, ಓಣಿ ಮುಂತಾದವೂ ಅವನ ತೀಕ್ಷ್ಣ ದೃಷ್ಟಿಗೆ ಕಾಣಿಸಿದವು ಇಂದುಶೇಖರನು ಒಮ್ಮೆ ಭೇದಕ ದೃಷ್ಟಿಯಿಂದ ಮುರಾರಿಯ ಮುಖವನ್ನು ನಿರೀಕ್ಷಿಸಿ:-ಹೋಗೋ ಹೋಗತ್ತ ನಿನಗಾಗಿ ನನ್ನನ್ನ ಸರಕಾರದವರು ಆಳಾಗಿರಿಸಿಲ್ಲ! ಎಂದು ಉದ್ಧಟತನದಿಂದ ನುಡಿದನು. ಒಡನೆಯೇ ಮುರಾರಿ ಇಳಿಮೋರೆ ಹಾಕಿ ಬೇರೊಂದು ಸ್ಥಳಕ್ಕೆ ಹೋದನು.

ಅಲ್ಲಿ ತನ್ನ ಟಿಪ್ಪಣಿ ಪುಸ್ತಕ ತೆಗೆದು ಅದರಲ್ಲಿ ತಾನು ಕಂಡ ವಿಳಾಸವನ್ನು ಬರೆದಿಟ್ಟನು. ಅಷ್ಟು ಅವಧಿಯಲ್ಲಿ ಇಂದುಶೇಖರನು ಮುಂದೆ ಸಾಗಿದ್ದನು. ಅವನಿಗೆ ಕಾಣದಂತೆ ಈತನೂ ಹಿಂದಿನಿಂದ ಹೊರಟನು. ಇಂದುಶೇಖರನು ನೇರವಾಗಿ ಬಂದು ಮಧುಕರನ ಮನೆಯನ್ನೇ ಹೊಕ್ಕನು.

ಮುರಾರಿಯು ತನ್ನ ಬೀಡಾರಕ್ಕೆ ಹೋಗಿ ಸುಬ್ಬಣ್ಣವರನ್ನು ಕಂಡು, ತಾನು ನೋಡಿದ ಸಂಗತಿಯನ್ನು ತಿಳಿಸಿದನು.

ಸುಬ್ಬಣ್ಣವರೇ, ನಾವು ಈಗಲೆ ಮುಂಬಯಿಗೆ ಹೋಗಿ ಈ ಮನುಷ್ಯನನ್ನು ಶೋಧಿಸುವದೊಳಿತಲ್ಲವೆ?

ಮುರಾರಿ, ತುಬ್ಬುಗಾರಿಕೆಯ ವಿಷಯದಲ್ಲಿ ದುಡುಕು ತಕ್ಕುದಲ್ಲ; ಮತ್ತು ಅದರಲ್ಲಿನ ಸತ್ಯತೆಯನ್ನರಿಯದೆ ನಾವು ಮುಂದೊರೆದುದಾದರೆ, ಒಂದೊಂದು ಸಲ ನಾವೂ ತೊಂದರೆಗೆ ಸಿಲುಕಬೇಕಾಗುವದು. ಅಂದರೆ?

ಇದರಲ್ಲಿ ಇಂದುಶೇಖರನು ನಮ್ಮನ್ನು ಮೋಸಗೊಳಿಸಲು ಯತ್ನಿಸಿದ್ದರೂ ಇರಬಹುದಲ್ಲವೆ? ಆಂ, ಅದು ಹೇಗೆ?

ಅವನು ಒಳ್ಳೇ ಚಾಣಾಕ್ಷನಿರುವನು

ಅದೇನೋ ಸರಿಯೆ, ಆದರೆ ಸಂಶಯ ಬರುವಂತೆ ನಾವು ನಮ್ಮ ವರ್ತನವನ್ನೇ ಇಟ್ಟಿರುವದಿಲ್ಲವಲ್ಲ?

ಸಂಶಯಕ್ಕೆ ಬಹಳ ಅವಕಾಶವಿದೆ ಹೇಗೆ?

ಎದುರಿನ ಮನೆಯ ಅಟ್ಟದ ಮೇಲೆ ಅಕಸ್ಮಾತ್ತಾಗಿ ವಸತಿಹಾಕಲು, ಅವನಿಗೆ ಇವನು ಏಕೆ ಬಂದಿರಬಹುದು? ಎಂಬ ಆಕಾಂಕ್ಷೆ ಬರುವದಂತೂ ಸರಿಯೆ ತನ್ನ ಆ ಸಂದೇಹದ ಸಲುವಾಗಿ ಹಾಗೆ ಮಾಡಿದ್ದರೂ ಮಾಡಿರಬಹುದು

ಆದರೆ ನನ್ನ ಗುರತು ಅವನಿಗೆ ಇಲ್ಲವಲ್ಲ.

ಛೆ! ಮುರಾರಿ, ಇಲ್ಲಿಯೇ ತಪ್ಪುತ್ತಲಿರುವೆ. ಆ ದಿನ ನಾವಿರ್ವರೂ ಕುಮುಲಿನಿಯ ಒಳಿಗೆ ಹೋದಾಗ್ಗೆ ಆಕೆ ನಮ್ಮ ನಿಜ ಉದ್ದೇಶವನ್ನರಿತಿರಬೇಕು. ನಿಜವಾದ ಕೊಲೆಗಾರರು ತಾವೇ ಇದ್ದುದರಿಂದ, ತಾವು ಶಕ್ಯವಿದ್ದ ಮಟ್ಟಿಗೆ ಜಾಗರೂಕತೆ ವಹಿಸುವದಾದರೂ ಸಹಜವೇ ಆಗಿದೆ, ಬಹುಶಃ ಈ ಮಾತಿನ ಅನುಭವವು ನಮಗೆ ಇಂದು ರಾತ್ರಿಯೇ ಬರಬಹುದು, ಎಂದು ನನಗೆ ತಿಳಿದಿದೆ. ಅದೇನು?

ನಾವು ಗೊತ್ತು ಹತ್ತಿರುವೆವೆಂಬದು?

ನಿಜವೆ?

ಈಗ ಒಂದು ಕೆಲಸ ಮಾಡು ಮನೆಯೊಡೆಯನ ಬಳಿಗೆ ಹೋಗಿ ಪೂರ್ತಿ ಬಾಡಿಗೆ ತೀರಿಸಿ, ಆಗ್ರಹದ ಆಮಂತ್ರಣದ ಮೂಲಕ ಬೆಂಗಳೂಳಿಗೆ ಹೋಗುತ್ತೇವೆಂದು ಹೇಳಿ ಬಾ ಮನೆಗೆ ಕೀಲೀ ಹಾಕಿಕೊಂಡು ಬೇರೆ ಸ್ಥಳ ದಲ್ಲಿ ವಸತಿ ಹಾಕೋಣ ಮುಂದಿನ ಯೋಚನೆ ಆ ಮೇಲೆ

ಮುರಾರಿಯು ಸುಬ್ಬಣ್ಣನ ಹೇಳಿಕೆಯಂತೆ ಅಲ್ಲಿಗೆ ಹೋಗಿ ತನ್ನ ಕಾರ್ಯ ಮಾಡಿ ಮರಳಿದನು ಒಡನೆಯೇ ಸುಬ್ಬಣ್ಣನವರು ಮುರಾರಿ ಯೊಡನೆ ರೈಲು ಸ್ಟೇಶನ್ನಿಗೆ ಹೋಗಿ ಸಮೀಪದ ಊರಿನ ಎರಡು ಟಿಕೆಟ್ಟು ತೆಗೆಯಿಸಿದರು. ಯಾರು ಕೇಳಿದರೂ ಬೆಂಗಳೂರಿಗೆ ಹೋಗುತ್ತೇವೆ, ಎಂದೇ ಹೇಳುತಲಿದ್ದರು. ಮುಂದೆ ಅಲ್ಪಾವಕಾಶದಲ್ಲಿ ಗಾಡಿ ಹತ್ತಿ ಮುಂದಿನ ನಿಲ್ಲು ಮನೆಗೆ ಇಳಿದರು. ಅಲ್ಲಿಂದ ಮರಳಿ ರಾತ್ರಿಯ ಹತ್ತು ಗಂಟೆಯ ಗಾಡಿಗೆ ವೇಷ ಬದಲಿಸಿ ಬಂದರು ೧೧॥ ಗಂಟೆಯ ಸಮಯಕ್ಕೆ ತಮ್ಮ ಮನೆಗೆ ಸಮೀಪದಲ್ಲಿಯೇ ಬೈರಾಗಿಗಳಂತೆ ಬೀಡು ಬಿಟ್ಟುಕುಳಿತರು ಒಂದು-ಒಂದೂ ವರೆಯ ಸಮಯಕ್ಕೆ ಇಂದುಶೇಖರನು ಇಬ್ಬರು ಠಕ್ಕರನ್ನು ಕೂಡಿಕೊಂಡು ಸುಬ್ಬಣ್ಣವರ ಮನೆಗೆ ಬಂದನು ಮುರಾರಿಯು ಕತ್ತಲೆಯಲ್ಲಿ ಬಹು ಮೆಲ್ಲನೆ ಹಿಂಬಾಲಿಸಿದನು ಮುಂದಿನ ಸಂಭಾಷಣೆ ಅವನಿಗೆ ಕೇಳಬಂದಿತು.

ಮೆಲ್ಲಗೆ, ಅವರು ಮಲಗಿದಂತೆ ತೋರುತ್ತದೆ. ಆದುದರಿಂದ ಬಾಗಿಲು ತಿರುಗಣಿ ತಪ್ಪಿಸಿ ಒಳಗೆ ಹೋಗಲೆತ್ನಿಸಿರಿ ಸಾಧ್ಯವಾಗದಿದ್ದರೆ ಮುಂದೆ ನೋಡವಾ.

ಹಾಗೆಯೇ ಮಾಡುವೆವು, ಒಂದು ವೇಳೆ ಎಚ್ಚರಾದರೆ?. ..

ಎಚ್ಚರಾದರೆ ನಿಮ್ಮನ್ನು ಮೀರಿ ಇರುವರೆ? ಅಂದರೆ?

ಅಂದರೇನು? ಗೊತ್ತು ಹಚ್ಚಿಬಿಟ್ಟರಾಯಿತು ಹಾಗೆಯೇ ಆಗಲಿ

ಹೀಗೆ ಯೋಚಿಸಿ ಆ ಮೂವರೂ ಮುಂಬಾಗಿಲಿನ ಹತ್ತರ ಹೋದರು ಅವರು ಹತ್ತು-ಹದಿನೈದು ನಿಮಿಷ ಬಾಗಿಲು ತೆರೆಯಲೆತ್ನಿಸಿದರು; ಆದರೆ ಅದೆಷ್ಟು ಯತ್ನಿಸಿದರೂ ಸಾಧ್ಯವಾಗುವಂತೆ ತೋರಲಿಲ್ಲ ಮೆಲ್ಲನೆ ತಮ್ಮ ಕೈಯಲ್ಲಿನ ಬ್ಯಾಟರಿಯನ್ನು ಹಚ್ಚಿ ನೋಡಲು; ಬಾಗಿಲು ಮುಚ್ಚುಗಳಿಂದ ಗಟ್ಟಿ ಮಾಡಲ್ಪಟ್ಟಿದ್ದಿತು. ಮುಂದಿನ ಬಾಗಿಲ ಪಟ್ಟಿಯಲ್ಲಿನ ಸ್ಕ್ರೂವೊಳೆ ಗಳನ್ನು ಬಿಚ್ಚ ಹತ್ತಿದರು. ಅದೇ ಸಮಯಕ್ಕೆ ಅವರಲ್ಲೊಬ್ಬನ ಕೈಗೆ ಮೇಲೆ ಹಾಕಿದ್ದ ಕೀಲಿ ತಗಲಿತು ಅವನು ಆ ಸಂಗತಿಯನ್ನು ಇಂದುಶೇಖರನಿಗೆ ತಿಳುಹಿದನು. ಒಡನೆಯೇ:-ಆಂ! ಕೀಲೀ ಹಾಕಿದೆಯೇ? ಎಂದು ಆಶ್ಚರ್ಯ ದಿಂದ ತನ್ನ ಬ್ಯಾಟರಿಯನ್ನು ಮೇಲೆ ಎತ್ತಿ ನೋಡಲು, ಕೀಲಿ ಕಾಣಿಸಿತು.

ಆಂ, ಈಗ ಇವರೆಲ್ಲಿ ಹೋಗಿರಬೇಕು?

ನಮ್ಮ ಪ್ರಯತ್ನವು ನಿಷ್ಫಲವಾಯಿತಲ್ಲ!

ಇಂದು ಕಾರ್ಯ ಕೈಗೂಡಿಸಿಯೇ ಮರಳಬೇಕೆಂದು ಬಂದಿದ್ದೆವು.

ಆದರೆ......... ನಾವು ಬರುವುದು ತಿಳಿದಿರಬಹುದೆ?

ಛೆ! ನಾವು ಬಹಳ ಗೌಪ್ಯವಾಗಿ ಕೆಲಸ ಮಾಡಿರುವೆವು.

ಹಾಗಿದ್ದರೆ ಇವರು ಎಲ್ಲಿಗೆ ಹೋಗಿರಬೇಕು?

ಉಳಿದರು; ಇಂದು ಇವರನ್ನು ಸಂಪೂರ್ಣವಾಗಿ ಗೊತ್ತುಹಚ್ಚ ಬೇಕೆಂದೇ ಬಂದಿದ್ದೆವು; ಆದರೆ ಪಾರಾದರು

ಹೋಗಲಿ, ಎಲ್ಲಿಗೆ ಹೋಗುತ್ತಾರೋ ನೋಡೋಣ

ಎಲ್ಲಿ ಹೋಗುವರು? ಇಂದಿಲ್ಲ ನಾಳೆ ಬಂದೇ ಬರುತ್ತಾರೆ.

ಈಗೇನು ಮಾಡಬೇಕು? ಮಾಡುವದೇನು? ಮರಳಬೇಕು.

ಮನೆಯೊಡೆಯನನ್ನು ಕೇಳೋಣವೆ?

ಈಗ ಅವಶ್ಯವಿಲ್ಲ. ನಾಳೆ ಕೇಳಿದರಾಗುವುದು.

ಇವರು ವಿಫಲರಾಗಿ ತಿರುಗಿ ಹೋದರು. ಸುಬ್ಬಣ್ಣನವರು ಮತ್ತು ಮುರಾರಿ ಇಬ್ಬರೂ ಕೂಡಿ ಬೇರೊಂದು ಗುಪ್ತವಾದ ಸ್ಥಳಕ್ಕೆ ಹೋಗಿ ಕುಳಿತರು.

ಸುಬ್ಬಣ್ಣನವರೇ, ಅಂತು ದುಷ್ಟರ ದವಡೆಯೊಳಗಿಂದ ಪಾರಾದೆವು!

ಮುರಾರಿ, ತುಂಬುಗಾರರೆಂದರೆ ವಿಪತ್ತಿನ ಗಾಣದೊಳಗೆ ಸಿಕ್ಕ ಕಬ್ಬಿ ನಂತಿರುತ್ತಾರೆ. ನಿಜವಾಗಿಯೂ ಇಂದಿನ ವಿಪತ್ತೇನೂ ಅಷ್ಟು ದೊಡ್ಡದಲ್ಲ.

ಪ್ರಾಣಾಂತಿಕ ಸಂಕಟವು ದೊಡ್ಡದಲ್ಲವೆ?

ಪ್ರಾಣಾಂತಿಕವಾಗಲು ಇದರಲ್ಲೇನು? ಅಂದರೆ?........

ಅಂದರೂ ಇರಲಿಲ್ಲ ಅವರ ಅಲ್ಪ ಸದ್ದಿಗೆ ಕೂಡ ಎಚ್ಚರಾಗದಿರು ತ್ತಿರಲಿಲ್ಲ ಎಚ್ಚರಾದಾಗ್ಗೆ ಇವರನ್ನು ಸುಲಭವಾಗಿ ಮೋಸಗೊಳಿಸಬಹುದಿತ್ತು

ಅದೂ ನಿಜವೆ ಈಗ ನಾವು ಏನು ಮಾಡತಕ್ಕದು?

ನಮ್ಮ ದಾರಿ ಸ್ಪಷ್ಟವೇ ಇದೆ

ನಮ್ಮ ಶತ್ರುಗಳಾದರೂ ಚಾಣಾಕ್ಷರಿರುತ್ತಾರೆ; ಮತ್ತು ಸಾವಧ ರಾಗಿರುತ್ತಾರೆ.

ಅಹುದು; ಇಂದುಶೇಖರನು ಭಯಂಕರ ಮನುಷ್ಯನಿರುವಂತೆ ತೋರುತ್ತದೆ. ನಾವೇನೋ ಈಗ ಬೆಂಗಳೂರಿನಲ್ಲಿರುವಂತೆ ತೋರಿಸಿರು ವೆವು. ಬಹುತರ ಅವನು ಇದನ್ನು ನಂಬಿರಲಿಕ್ಕಿಲ್ಲ.

ನಂಬಲು ಶಕ್ಯವೇ ಇಲ್ಲ.

ನಿಜ. ಆದುದರಿಂದ ನಾವು ಈಗ ಈ ಊರಲ್ಲಿ ಕಾಣಿಸಿಕೊಳ್ಳಲೇ ಕೂಡದು. ಊರು ಬಿಟ್ಟು ಹೋದರೆ ಮುಂದೆ?........

ಕಾಣಿಸಿಕೊಳ್ಳಕೂಡದೆಂದರೆ, ನಮ್ಮ ಗೊತ್ತು ಯಾರೂ ಹಿಡಿಯದಂತಿರತಕ್ಕದ್ದು ಹಾಗಾದರೆ ಈ ಸ್ಥಳದಲ್ಲಿ ವಾಸಿಸಕೂಡದಲ್ಲವೆ?

ಅಹುದು. ನಾವೀಗ ನನ್ನ ಮನೆಯ ಸಮೀಪಕ್ಕೆ ಸಹ ಸುಳಿಯತಕ್ಕದಲ್ಲ ಬೇರೊಂದು ಸ್ಥಳವನ್ನೇ ಬಾಡಿಗೆಗೆ ಹಿಡಿಯಬೇಕು, ಅದೂ ನಮ್ಮ ನಿಜವಾದ ಹೆಸರಿನಿಂದಲ್ಲ. ಲಕ್ಷ್ಯದಲ್ಲಿ ಬಂದಿತೆ?

ತಿಳಿಯಿತು. ಹಾಗಾದರೆ............

ಎಲ್ಲವನ್ನೂ ಆ ಮೇಲೆ ವಿಚಾರಿಸುವಾ.

ಸುಬ್ಬಣ್ಣವರ ಸ್ವಭಾವವನ್ನು ಮುರಾರಿಯರಿತಿದ್ದನು. ಅವರು ಒಮ್ಮೆ ಮುಗಿಸಿದರಾಯಿತು, ಪ್ರತ್ಯಕ್ಷ ಬ್ರಹ್ಮದೇವನೇ ಇಳಿದು ಬಂದರೂ ಬಾಯಿ ಬಿಚ್ಚುತ್ತಲಿರಲಿಲ್ಲ. ಮುಂದಿನ ಮಾರ್ಗವೇನು? ಎಂಬ ವಿಚಾರವೇ ಅವರಿಗೆ ಬಹಳವಾಯಿತು. ಇಂದುಶೇಖರನೇ ಕೊಲೆ ಮಾಡಿರುವನೇ? ಹಾಗಿದ್ದರೆ ಇಂದುಶೇಖರನಿಗೆ ಲಾಭವೇನು? ಇದುವರೆಗೆ ಜನರಲ್ಲಿಯಾಗಲಿ, ಅಧಿಕಾರಸ್ಥರಲ್ಲಿಯಾಗಲಿ ಆತನು ತನ್ನ ಯಾವ ಸಂಬಂಧವನ್ನೂ ಸ್ಪಷ್ಟಪಡಿಸಿಲ್ಲ. ಹಾಗಾದರೆ ಇಂದುಶೇಖರನುಸಾವುಕಾರರಿಗೆ ಸಂಬಂಧಿಕನಿರದಿದ್ದರೆ, ಸಂಬಂಧಿಕರಾರೋ ಬೇರೆಯೋ ಇರಬೇಕಲ್ಲವೆ? ಅವನು ಇರುವುದೆಲ್ಲಿ? ಅವನನ್ನು ಗೊತ್ತುಹಿಡಿಯುವದು ಹೇಗೆ? ಯಾವಾಗಲೂ ವೇಷ ಬದಲಿಸಿಯೆ ತಿರುಗಬೇಕೋ ಹೇಗೆ?

ಇತ್ಯಾದಿಯಾಗಿ ವಿಚಾರಿಸುತ್ತ ಕುಳಿತಿರಲು, ಸುಬ್ಬಣ್ಣವರು ಜೈ ಸೀತಾರಾವ ! ಎಂದರು. ಮುರಾರಿ ಕಣ್ಣು ತೆರೆದನು. ಪ್ರತ್ಯಕ್ಷ ಇಂದುಶೇಖರನೇ ತನ್ನ ಒಬ್ಬಿಬ್ಬ ಸಹಾಯಕರನ್ನು ಕೂಡಿಕೊಂಡು ಅಲ್ಲಿಗೆ ಬಂದನು. ಮುರಾರಿಗೆ ಇಂದುಶೇಖರನ ಧೂರ್ತತೆಯ ಬಗ್ಗೆ ಅಚ್ಚರಿಯೆನಿಸಿತು. ಸುಬ್ಬಣ್ಣವರ ಸಮಯಸೂಚಕತೆಯಲ್ಲಿ ಅವನಿಗೆ ನಂಬಿಗೆಯಿದ್ದಿತು ಈಗ ಅವರು ಇಂದುಶೇಖರನ ಕಣ್ಣಲ್ಲಿ ಹೇಗೆ ಧೂಳು ಎರಚಬಹುದೆಂಬ ಬಗ್ಗೆ ಯೋಚಿಸಿ ನೋಡಲು ಸಿದ್ಧನಾದನು.

ಇಂದುಶೇಖರನು ಅವರನ್ನು ಒಂದು ಸಲ ಚೆನ್ನಾಗಿ ನಿರೀಕ್ಷಿಸಿದನು. ಅವನಿಗೆ ಸಂಶಯ ಬಂದಂತೆ ತೋರಲಿಲ್ಲ; ಆದರೂ ಮಾತಾಡಿಸಹತ್ತಿದನು.

ಸುಬ್ಬಣ್ಣವರು ಸ್ವರ ಬದಲಿಸುವುದರಲ್ಲಿಯೂ ಪ್ರವೀಣರು. ಒಂದೊಂದು ಸಂದರ್ಭದಲ್ಲಿ ಒಂದೊಂದು ವಿಧವಾಗಿಯೇ ಮಾತನಾಡುತ್ತಲಿದ್ದರು.

ಶಬ್ದಗಳ ಮೇಲೆ ಜೋರು ಕೊಡುವದು, ಅಕ್ಷರಗಳನ್ನೆಳೆಯುವದು ಇದೇ ಅವರ ಮೂಲ ತತ್ವವಾಗಿದ್ದಿತು ಒಂದು ಸಲ ಕಗ್ಗನಂತೆ ಮೂರು-ನಾಲ್ಕು ಅಕ್ಷರಗಳನ್ನು ಕೂಡಿ ಉಚ್ಚರಿಸಿದರೆ, ಒಂದೊಂದು ಸಲ ಉಗ್ಗುವವರಂತೆ ಒಂದೊಂದೇ ಅಕ್ಷರವನ್ನು ನಾಲ್ಕು ಆರು ಸಲ ಪುನಃ ಪುನಃ ಅನ್ನುತಲಿದ್ದರು, ಹೀಗೆ ಅವರು ಪ್ರತಿಪಕ್ಷಿಗಳನ್ನು ಬಹು ಸುಲಭವಾಗಿ ಮೋಸಗೊಳಿಸುತ್ತಲಿದ್ದರು ಹಾಗೆಯೇ ಅವರಲ್ಲಿದ್ದ ಸ್ಮರಣಶಕ್ತಿಯು ಅದ್ಭುತವಾಗಿತ್ತು ಎಂದಾದರೊಂದುಸಲ ಯಾರೊಬ್ಬರ ಸಂಗಡ ಮಾತನಾಡಿದರೆ ಅದನ್ನವರು ಎಂದೂ ಮರೆಯುತ್ತಲಿರಲಿಲ್ಲ ಮರಳಿ ಅದೇ ಮನುಷ್ಯನೊಡನೆ ಮಾತನಾಡುವ ಸಮಯ ಬಂದರೆ ಮುಂಚಿನ ಆ ವಿಶಿಷ್ಟ ಪದ್ಧತಿಯನ್ನು ಬಿಟ್ಟೇ ಮಾತನಾಡುತ್ತಲಿದ್ದರು. ಅದುವರೆಗೆ ಅವರು ಇಂದುಶೇಖರನೊಡನೆ ಮಾತನಾಡಿರಲಿಲ್ಲ ಆದರೂ ಕಮಲಿನಿಯ ಸಂಗಡ ಮಾತನಾಡಿದ್ದರು. ಅದೇ ಸಂಶಯದ ಮೂಲಕ ಅವರು ಬೇರೊಂದು ವಿಧವಾಗಿಯೇ ಸ್ವರ ತೆಗೆದು ಮಾತನಾಡಿದರು ಇಂದುಶೇಖರನು ಅವರನ್ನು ಬಹಳವಾಗಿ ಪರೀಕ್ಷಿಸಿದನು, ಆದರೆ ಏನೂ ಹೊರಡಲಿಲ್ಲ. ತಾನು ಶೋಧಿಸುವ ವ್ಯಕ್ತಿ ಅವರಲ್ಲವೆಂದ ಮನಗಂಡು, ಆತನು ಹೊರಟು ಹೋದನು. ಒಡನೆಯೇ ಸುಬ್ಬಣ್ಣವರೂ ಮೇಲಕ್ಕೆದ್ದು ಹೊರಟರು; ಮುರಾರಿಯೂ ಹಿಂಬಾಲಿಸಿದ.

ಒಂದು ಏಕಾಂತ ಸ್ಥಳಕ್ಕೆ ತಲುಪುತ್ತಲೆ ಸುಬ್ಬಣ್ಣವರು ಬೈರಾಗಿಯ ವೇಷ ಕಳಚಿದರು. ಒಳಗೆ ಸಿದ್ಧವೇ ಆಗಿದ್ದ ಸಂಜಾಬೀ ವೇಷದಲ್ಲಿ ಹೊರಟರು. ಮುರಾರಿಯಾದರೂ ಅವರನ್ನನುಸರಿಸಲು ಹಿಂದೆ ಬೀಳಲಿಲ್ಲ. ಒಡನೆಯೇ ಅವರು ಒಂದು ಊಟದ ಮನೆಗೆ ಹೋಗಿ ಅಲ್ಲಿಯೊಂದು ಕೋಣೆಯನ್ನು ಬಾಡಿಗೆಗೆ ಹಿಡಿದರು.

. ಊಟದ ಮನೆಯಲ್ಲಿನ ಕೋಣೆಗಳೆಂದರೆ ಗೌಪ್ಯಕ್ಕೆ ಅತ್ಯಲ್ಪವಾದರೂ ಆಸ್ಪದವೇ ಇರವದಿಲ್ಲ. ಒಂದು ಕೋಣೆಯಲ್ಲಿ ಏನಾದರೂ ಸದ್ದಾದರೆ ಟೆಲಿಫೋನಿನಂತೆ ಎಲ್ಲ ಕೋಣೆಗಳಲ್ಲಿಯೂ ಕೇಳಬರುವದು. ಹಾಗೆಯೇ ಒಂದು ಕೋಣೆಯಲ್ಲಿ ತಿಗುಣಿಗಳಾದರಾಯಿತು, ಅವು ಎಲ್ಲ ಕೋಣೆಗಳನ್ನೂ ಆಕ್ರಮಿಸಿ ಬಿಡುವವು. ಆದುದರಿಂದ ಸುಬ್ಬಣ್ಣ ಮತ್ತು ಮುರಾರಿಯ ರಿಬ್ಬರೂ ಬಾಯಿಗೆ ಬೀಗವನ್ನೇ ಹಾಕಬೇಕಾಗುತಲಿದ್ದಿತು. ಅವರಾವಾಗಲೂ ಸಮಾಧಿಯಲ್ಲಿಯೇ ಕುಳಿತುಬಿಡುತಲಿದ್ದರು. ಮುರಾರಿಗೆ ಮಾತ್ರ ಬಹಳ ಬೇಸರು ಬರುತಲಿದ್ದಿತು. ಆದರೂ ಅನಿವಾರ್ಹಪಕ್ಷ ಒಂದೊಂದು ಸಲ ಒಬ್ಬನೇ ವೇಷ ಬದಲಿಸಿ ತಿರುಗಾಡಿ ಬರುತಲಿದ್ದನು. ಅಲ್ಲಿಗೆ ಹೋದ ಎಂಥ

ಮೂರು ದಿನ ಸುಬ್ಬಣ್ಣವರು ಹೊರಬೀಳಲೇ ಇಲ್ಲ. ಆ ಮೇಲೆ ಒಂದು ದಿನ ಇಳಿಹೊತ್ತಿನಲ್ಲಿ ಸುಬ್ಬಣ್ಣವರು ಬೈರಾಗಿಯ ವೇಷದ ಸಾಹಿತ್ಯ ತೆಗೆದುಕೊಂಡು ಮುರಾರಿಗೆ ಅರ್ಧತಾಸು ತಡೆದು ಊರಿಂದ ಒಂದು ಮೈಲಿನ ಮೇಲಿದ್ದ ತಮ್ಮ ಗುಪ್ತಸ್ಥಳಕ್ಕೆ ಬರುವಂತೆ ಹೇಳಿ ಹೊರಟರು.

ಮುರಾರಿಯು ಅರ್ಧತಾಸಿನ ನಂತರ ತನ್ನ ಸಾಹಿತ್ಯದೊಡನೆ ಹೊರಟು ನಿರ್ದಿಷ್ಟ ಸ್ಥಳಕ್ಕೆ ಹೋಗಿ ತಲುಪಿದನು ಅಲ್ಲಿ ಸುಬ್ಬಣ್ಣವರು ಮೊದಲೇ ಸಿದ್ಧರಾಗಿ ಕುಳಿತಿದ್ದರು. ಸ್ಥಾನವು ನಿರ್ಜನವಾಗಿದ್ದಿತು. ಮುರಾರಿಗೂ ಮೂರು-ನಾಲ್ಕು ದಿನ ಸುಬ್ಬಣ್ಣವರ ಸಂಗಡ ಮಾತುಗಳಿಲ್ಲದ ಮೂಲಕ ಬಹಳ ಆತುರತೆಯುಂಟಾಗಿದ್ದಿತು.

ಸುಬ್ಬಣ್ಣವರೇ, ಎರಡು ದಿನದ ಸಮಾಧಿಯಿಂದ ಕಂಡ ಸಂಗತಿಯೇನಾದರೂ ಹೇಳುವಂತಹದಿದೆಯೊ?

ಎಲ್ಲವೂ ಕಾಯುಸದ ಮೇಲೆ ತಿಳಿದು ಬರುವಂತಿದೆ ಅಂದರೆ?....

ನಾವೀಗ ಸಾಕಷ್ಟು ವಿಶ್ರಾಂತಿ ತೆಗೆದುಕೊಂಡಿರುವೆವು. ಇನ್ನು ಕಾರ್ಯಕ್ಕೆ ಆರಂಭಿಸಬೇಕಾಗಿದೆ.

ಆಗಲಿ. ಅದಕ್ಕೇನು ಆತಂಕ? ಆದರೆ ಕಾರ್ಯದ ದಿಶೆ ಯಾವದು?

ನಾವು ಹಿಂದೆ ಆರಂಭಿಸಿದುದೇ.

ಹಾಗಾದರೆ ಇಷ್ಟು ಸುದೀರ್ಘವಾದ ವಿಶ್ರಾಂತಿಯ ಅವಶ್ಯಕತೆಯೇನಿದ್ದಿತು?

ಈ ವಿಶ್ರಾಂತಿಯು ಮುಂದಿನ ಕಾರ್ಯದಿಸೆ ಗೊತ್ತುಮಾಡಲಿಕ್ಕೆಂದಲ್ಲ.

ಹಾಗಾದರೆ ಇನ್ನೇತಕ್ಕೆ?

ಶತ್ರುವು ಧೂರ್ತನಿರುವನು. ಅಹುದು.

ಅವನಿಗೆ ಕೊಂಚ ಮಂಕುಬೂದಿ ಒಳೆಯಲೆಂದು. ಅದು ಹೇಗೆ?

ನಾವು ಬೆಂಗಳೂರಿಗೆ ಹೋದಂತೆ ನಟಿಸಿದರೂ ಅವನು ಅದನ್ನು ನಂಬಲಿಲ್ಲವಷ್ಟೆ? ಅಹುದು.

ಅಂದ ಬಳಿಕ ಅವನು ನಮ್ಮ ಶೋಧದಲ್ಲಿರುವದು ಸಹಜವಷ್ಟೆ?

ನಿಜ. ಅವನ ತೀಕ್ಷ್ಣ ದೃಷ್ಟಿಗೆ ನಾವು ಬೀಳಕೂಡದೆಂದು.

ನಾವು ಇನ್ನಾಗಿಗೂ ತಿಳಿಯಕೂಡದೆಂದು ಹೇಗಿದ್ದರೂ ವೇಷ ಬದಲಿಸಿಯೇ ಇರುವೆವಲ್ಲ?

ಆದರೂ ನಮ್ಮನ್ನು ಗುರತಿಸಬಹುದಾದ ಒಂದು ಸಾಮ್ಯವಿದೆ.

ಅದೇನು?

ಅಂದು ನಾವು ಕಮಲಿನಿಯ ಭೇಟಿಗೆಂದು ಹೋದಾಗ್ಗೆ ಇಬ್ಬರೂ ಜೊತೆಯಾಗಿಯೇ ಹೋಗಿದ್ದೆವಲ್ಲವೆ? ಅಹುದು.

ಹಾಗೆಯೇ ಇನ್ನೊಂದು ಸಲ ಇಂದುಶೇಖರನನ್ನು ಕಂಡಾಗ್ಗೆಯೂ ಇಬ್ಬರೂ ಜೊತೆಯಾಗಿಯೇ ಇದ್ದೆವಲ್ಲವೆ? ಅಹುದು.

ಯಾವಾಗಲೂ ಅಗಲದಿರುವ ಈ ಜೊತೆಯೂ ಸಂದೇಹಾಸ್ಪದವೇ ಇದೆಯಲ್ಲವೆ?

ನಿಜ. ನಾವು ಅಗಲಿದರೆ ಅವನು ನಮ್ಮ ವಿಷಯವಾಗಿ ದುರ್ಲಕ್ಷ್ಯ ಮಾಡಿದರೂ ಮಾಡಬಹುದಲ್ಲವೆ?

ದುರ್ಲಕ್ಷ್ಯವೇನೂ ಇದರ ಪರಿಣಾಮವಾಗಲಿಕ್ಕಿಲ್ಲ.

ಹಾಗಾದರೆ ಇನ್ನೇನು?

ತನ್ನ ಇನ್ನೊಂದು ಕೆಲಸಕ್ಕೆ ತೊಡಗಬಹುದು. ಅದಾವುದು!

ಒಳ್ಳೇದು. ಮುರಾರಿ, ಈಗ ಇದನ್ನು ಕೂಲಂಕಷವಾಗಿಯೇ ಚರ್ಚಿಸೋಣ. ಹಾಗೆಯೇ ಆಗಲಿ

ಸಾವುಕಾರ ಶ್ರೀನಿವಾಸರಾಯರ ಕೊಲೆಯು ಅವರ ಲಕ್ಷಾಂತರ ಸಂಪತ್ತಿ ಪಡೆಯಲೋಸುಗ ಅವರ ಯಾವನೊಬ್ಬ ಆಪ್ತನಿಂದಾಗಿಯೆಂಬದಂತೂ ಸ್ಪಷ್ಟವೇ ಆಗಿದೆ. ಆ ಕೊಲೆಯು ಮಧುಕರನ ಮೇಲೆಯೇ ಹೊರಳುವಂತೆ ಮಾಡುವದಾದರೂ ಅವನ ಇಚ್ಛೆಯಿದೆಯೆಂಬುದು ವ್ಯಕ್ತವೇ ಆಗಿದೆ. ಅದಕ್ಕೆ ಕಾರಣವೇನಂದರೆ, ಸಾವುಕಾರರು ಮಧುಕರನ ಹೆಸರಿನಲ್ಲಿ ಮಾಡಿಟ್ಟ ಮೃತ್ಯುಪತ್ರಲೇಖವೇ ಎಂಬ ಸಂಗತಿಯನ್ನು ನಾವು ಬಲ್ಲೆವು. ಇನ್ನು ಈ ಕೊಲೆಗೆ ಸಹಾಯಕರು ಇಂದುಶೇಖರ-ಕಮಲಿನಿಯರೇ ಇರಬೇಕೆಂಬದನ್ನಾದರೂ ನಾವು ಅರಿತಿರುವೆವು ಇವರ ವ್ಯತಿರಿಕ್ತ ಇನ್ನೂ ಒಬ್ಬಿಬ್ಬರು ಇರಬಹುದು; ಆದರೂ ಮುಖ್ಯ ಪಾತ್ರ ವಹಿಸುವವರೆಂದರೆ ಇವರೇ ಇಬ್ಬರು. ನಾವು ಈ ಹುಬ್ಬು ಕೈಕೊಂಡ ಸಮಯದಿಂದ ಇದುವರೆಗೆ ಸಂಭವಿಸಿದ ಘಟನೆಗಳನ್ನು ಸಮಾಲೋಚಿಸಿದರೆ, ಸಾವುಕಾರರ ಆಪ್ತನಾಗಿರಬಹುದಾದ ಆ ಕೊಲೆಗಾರನು ಈ ಊರಲ್ಲಂತೂ ಇಲ್ಲವೆಂಬ ಸಂಗತಿಯು ಸ್ಪಷ್ಟವಾಗುವಂತಿದೆ. ಇಲ್ಲವಾಗಿದ್ದರೆ ಇದುವರೆಗೆ ಆತ ನಮಗೆ ಕಾಣಿಸಿಕೊಳ್ಳದಿರುತ್ತಿರಲಿಲ್ಲ ಇನ್ನು ಆತನು ಯಾವದೊಂದು ಪರಸ್ಥಳದಲ್ಲಿಯೇ ಇರಬೇಕಲ್ಲವೆ? ಅಂದಲ್ಲಿ ಇಂದುಶೇಖರನು ಅವನಿಗೆ ತಾನು ಮಾಡಲಿದ್ದ ಕಾರ್ಯಗಳನ್ನು ಆಗಾಗ್ಗೆ ತಿಳಿಸುತ್ತಲಿರಬೇಕಾಗುವದು. ಈಗ ಅವನು ಬಹುತರ ಆ ಕೆಲಸಕ್ಕೆ ತೊಡಗಿರಬಹುದು.

ಅಹುದು. ಹಾಗಾದರೆ ನಾವಿನ್ನು ಅವರ ಮೇಲೆ ಪಾಳತಿಯಿಡ ಬೇಕಲ್ಲ?

ಪಾಳತಿಯಿಡಬೇಕು; ಆದರೆ ನಾವಿಬ್ಬರೂ ಜೊತೆಯಾಗಿಯೇ ತಿರು ಗದೆ, ಕೆಲವು ವೇಳೆ ನೀನು ಮತ್ತು ಕೆಲವು ವೇಳೆ ನಾನು ಹೀಗೆ ಪಾಳತಿ ಇಟ್ಟರೆ ನಮ್ಮ ಶ್ರಮವಿಭಾಗವಾಗಬಹುದಲ್ಲದೆ, ಅವರಿಗೆ ಗುರತಿಸಲು ಸಾಧ್ಯವೂ ಆಗಲಾರದು.

ಹಾಗಾದರೆ ನಾವು ವೇಷವನ್ನಾದರೂ.......

ನಾನು ಇದೇ ಬೈರಾಗಿಯ ವೇಷದಿಂದಲೇ ಇರುತ್ತೇನೆ. ನೀನು ಒಬ್ಬ ಭಿಕ್ಷುಕನ ವೇಷ ಧರಿಸು. ಆದಷ್ಟು ಸಾಂಕೇತಿಕವಾಗಿಯೇ ಒಬ್ಬರೊಬ್ಬರ ವಿಚಾರಗಳನ್ನು ತಿಳಿಸತಕ್ಕುದು. ಗುಪ್ತಸ್ಥಳಕ್ಕೆ ಹೋಗದ ವಿನಃ ಮಾತು ಗಳನ್ನೇ ಆಡತಕ್ಕುದಲ್ಲ.

ಅದೇನೋ ಸರಿಯೇ; ಆದರೆ.....　　ಸಂಶಯವೇನು ಬಂದಿತು?

ಇನ್ನೇನೂ ಇಲ್ಲ. ಒಂದು ವೇಳೆ ನಮಗೆ ಬೇರೊಂದು ಗುಪ್ತಸ್ಥಳಕ್ಕೆ ಹೋಗಿ ವಿಚಾರಿಸುವಷ್ಟು ಅವಕಾಶ ಸಿಕ್ಕದಂತಿದ್ದರೆ?

ಅದೂ ನಿಜವೆ. ಯಾವ ಸಂದರ್ಭದಲ್ಲಿ ಹೇಗೆ ಆಚರಿಸಬೇಕಾಗುತ್ತಿದೆ ಯೆಂಬದನ್ನು ಆ ಆ ಸನ್ನಿವೇಶಗಳು ಬಂದ ಹೊರತು ತಿಳಿಯಲು ಶಕ್ಯವಿಲ್ಲ.

ಆ ಸಮಯದಲ್ಲಿ ಹೇಗೆ ಮಾಡಬೇಕು?

ಒಳ್ಳೇದು. ಹೀಗೆ ಮಾಡೋಣ. ನಾವೀರ್ವರು ಜೊತೆಗಾರರೆಂದು ತೋರಿಸಿಕೊಳ್ಳದೆ ಆದಷ್ಟು ಸಮೀಪದಲ್ಲಿಯೇ ಇರೋಣ; ಮತ್ತು ಶಕ್ಯವಾ ದರೆ ಸಂಕೇತಗಳಿಂದ ನಿರ್ಣಯಿಸೋಣ. ಅವಶ್ಯವೇ ಎನಿಸಿದಲ್ಲಿ ಭಾಷೆಯ ನ್ನಾದರೂ ಉಪಯೋಗಿಸೋಣ; ಮುಖ್ಯ ವಿಷಯವೆಂದರೆ ಒಬ್ಬರನ್ನೊಬ್ಬರು ಅಗಲಿ ದೂರ ಹೋಗದಂತಿದ್ದು, ಅವರನ್ನು ಕಾಯುತಕ್ಕದ್ದು

ಹೀಗೆ ನಿರ್ಣಯವಾಗಿ ಇಬ್ಬರೂ ತಮ್ಮ ತಮ್ಮ ಸಿದ್ಧತೆಗಳಿಂದ ರಾತ್ರಿ ಯ ಹತ್ತೂವರೆ ಗಂಟೆಯ ಸಮಯಕ್ಕೆ ಮಧುಕರನ ಮನೆಯಿಂದ ಹೊರ ಟರು. ರಾಜಮಾರ್ಗದಲ್ಲಿ ವಿದ್ಯುದ್ದೀಪಿಗೆಗಳ ಪ್ರಕಾಶವು ಚನ್ನಾಗಿಹರಡಿದ್ದಿತು ನಗರ ರಚನೆಯು ವಿಶಿಷ್ಟ ಪದ್ಧತಿಗನುಸಾರವಾಗಿ ಹತ್ತುಗಂಟೆಯ ಮೇಲೆ ಜನ ದಟ್ಟಣೆ ವಿಶೇಷವಾಗುತ್ತಿರಲಿಲ್ಲ. ಮನೆಗಳಲ್ಲಿನ ಜನರೂ ಬಹುತರ ಮುಸು ಕಿಟ್ಟು ಮಲಗಿದ್ದರು. ರಾಜಮಾರ್ಗದಲ್ಲಿ ಮಳೆಯ ಮೂಲಕವಾದ ರೊಜ್ಜು ತಕ್ಕಮಟ್ಟಿಗೆ ಇದ್ದಿತು. ಮಳೆಗಾಲದ ಚಳಿಯಾದರೂ ಚನ್ನಾಗಿಯೇ ಇದ್ದಿತು ನಮ್ಮ ತುಬ್ಬುಗಾರದ್ವಯರು ಅವುಗಳನ್ನಾವನ್ನೂ ಲಕ್ಷಿಸದೇ ಹೊರಟಿದ್ದರು.

ಅಲ್ಲಲ್ಲಿ ಪೋಲೀಸರು ಅವರನ್ನು ತಡೆಯುತಲಿದ್ದರು, ಮತ್ತು ಅವರ ಕರಗಳ ಲ್ಲಿನ ಮೌನಮುದ್ರಿಕೆಗಳನ್ನು ನೋಡಿ ಸುಮ್ಮನೆ ಹಿಂದೆ ಸರಿಯುತಲಿದ್ದರು.

ಮೊದಲೇ ಯೋಚಿಸಿದ್ದಂತೆ ಸುಬ್ಬಣ್ಣವರು ಹಿಂದೆಯೇ ಒಂದು ಸಂದಿ ಯಲ್ಲಿ ಉಳಿದರು. ಮುರಾರಿ ಮುಂದೆ ಹೋಗಿ ಮಧುಕರನ ಮನೆಯೆದುರು ನಿಂತು:-ಯಪ್ಪಾ, ಭಿಕ್ಷಾ. ಎಂದು ನಾಲ್ಕಾರು ಸಲ ಕೂಗಿದನು.

ಇಂದುಶೇಖರನು ಬಾಗಿಲು ತೆರೆದು ವಸಕ್ಕನೇ ಅವನ ಮೈಮೇಲೆ ಹೋಗಿ:-ಹೋಗೋ-ಹೋಗು, ಈಗೆಲ್ಲಿ ಭಿಕ್ಷೆ? ರಾತ್ರಿಯಿಲ್ಲ; ಹಗಲಿಲ್ಲ: ತಿರು ಪೆಗೆ ಹೊರಟುಬಿಡುವುದೆ ಏನು? ಸ ಮ್ಮನೆ ಹೋಗುವೆಯೋ ಪೋಲೀಸರ ವಶಪಡಿಸಲೋ?

ಮುರಾರಿ ಭಿಕ್ಷುಕರ ಸ್ವಭಾವದಂತೆ:—ಯಪ್ಪಾ, ಮುಂಜೇಲಿಂದ ಊಟಾನೆ ಇಲ್ರಿ. ಒಂಚೂರು ರೊಟ್ಟಿ-ಗಿಟ್ಟಿ ಏನಾರ ಕೊಡ್ರಿ; ಅಂದ್ರ ಹೊಕ್ಕೇನಿ, ಎಂದು ಅಂದನು.

ಸುಮ್ಮನೆ ಹೋಗ , ಇಲ್ಲವಾದರೆ ಬಡಿತ ಬಿದ್ದಾವು, ಹೀಗನ್ನುತ್ತ ಧಡಕ್ಕನೇ ಬಾಗಿಲು ಹಾಕಿಕೊಂಡನು

ಅಷ್ಟು ಅಲ್ಪಾವಕಾಶದಲ್ಲಿಯೇ ಆದರೂ ಮುರಾರಿ ತನಗೆ ಬೇಕಾಗು ವಷ್ಟು ಕಾರ್ಯ ಸಾಧಿಸಿಕೊಂಡಿದ್ದನು, ಇಂದುಶೇಖರ ಮತ್ತು ಕಮಲಿನಿ ಯರ ಸಂಬಂಧವನ್ನು ಅವನರಿತಿದ್ದನು. ಅವರಿಬ್ಬರನ್ನೂ ಆ ಮನೆಯಲ್ಲಿ ಕಾಣುವ ಬಗ್ಗೆ ಸಂದೇಹವೇ ಇರಲಿಲ್ಲ, ಆದರೆ ಅಲ್ಲಿ ತಮ್ಮ ತರ್ಕದಂತೆ ಇನ್ನಾ ರಾದರೂ ಬಂದಿದ್ದರೆ ನೋಡಬೇಕೆಂದು, ಇಲ್ಲವಾಗಿದ್ದರೆ ಯಾವದೊಂದು ಸಾಂಕೇತಿಕ ಸ್ಥಳಕ್ಕೆ ಅವರೇ ಹೊರಟಿದ್ದರೆ ಅರಿಯಬೇಕೆಂದೂ ಅಥವಾ ಯಾವ ಚಲನವಲನವನ್ನೂ ಕೈಕೊಳ್ಳದೆ ಸುಮ್ಮನೆ ಮಲಗಿದ್ದರೆ ಅದನ್ನಾದರೂ ತಿಳಿಯಬೇಕೆಂದು ಅವನ ಯತ್ನವಿದ್ದಿತು. ಹೀಗೆ ಮೂರರಲ್ಲೊಂದು ಅರಿಯ ಬೇಕೆಂಬ ಉದ್ದೇಶದಿಂದಲೇ ಅಷ್ಟು ಕಾರ್ಯ ಮಾಡಿದ್ದನು; ಮತ್ತು ಆದರಿಂದ ಅವನ ಉದ್ದಿಷ್ಟ ಸಾಧನೆಯೂ ಆಯಿತು.

ಆ ವೇಳೆಗೆ ಇಂದುಶೇಖರ ಮತ್ತು ಕಮಲಿನಿಯರು ಹೊರ ಹೊರಡ ಲಿದ್ದರೆಂದು ಅವನಿಗೆ ತಿಳಿಯಬಂದಿತು; ಏಕೆಂದರೆ, ಇಂದುಶೇಖರನು ಮಲ ಗುವ ವೇಷದಲ್ಲಿರದೆ, ಪೂರ್ಣ ಹೊರ ಹೊರಡುವ ವೇಷದಲ್ಲಿದ್ದನು. ಕೋಟು, ಟೋಪಿ, ಛತ್ರಿಗಳ ಸಹಿತವಾಗಿಯೇ ಬಂದು ಬಾಗಿಲ ತೆರೆದಿದ್ದನು; ಮತ್ತು ಕಮಲಿನಿಯಾದರೂ ಹೊರ ಹೊರಡುವ ವೇಷದಲ್ಲಿದ್ದಂತೆ ತಿಳಿಯಿತು. ಒಂದು ವೇಳೆ ಎಲ್ಲಾದರೂ ಹೊರಗೆ ಹೋಗಿ ಆದೇ ಬಂದಿದ್ದರೆ? ಎಂಬ

ಸಂಶಯವೂ ಬಾರದಿರಲಿಲ್ಲ. ಮುರಾರಿ ಕೂಡಲೆ ಬಂದು ಒಂದೆರಡು ಮಾತು ಗಳಲ್ಲಿ ಎಲ್ಲ ಸಂಗತಿಯನ್ನು ಸುಬ್ಬಣ್ಣವರಿಗೆ ತಿಳಿಹಿದನು. ಕೊಂಚ ಅವಧಿ ನಿಂತು ದಾರೀ ಕಾಯುವಂತೆ ನಿರ್ಣಯಿಸಿ, ಇಬ್ಬರೂ ಅಲ್ಲಿಯೇ ನಿಂತರು. ಹತ್ತು-ಹದಿನೈದು ನಿಮಿಷಗಳಲ್ಲಿ ಇಂದುಶೇಖರ-ಕಮಲಿನಿಯರು ಹೊರ ಬಿದ್ದರು. ಒಡನೆಯೇ ಮುರಾರಿ ಅವರು ಹಿಡಿಯಬಹುದಾದ ಹಾದಿಯನ್ನು ಮೊದಲೇ ಊಹಿಸಿ ಹಾಗೆಯೇ ಮುಂದೆ ಹೊರಟನು ಇಂದುಶೇಖರ-ಕಮ ಲಿನಿಯರು ಅವನನ್ನು ನೋಡದಿರಲಿಲ್ಲ; ಆದರೆ ಅದರಿಂದ ಅವರಿಗೆ ಅಷ್ಟು ಮಹತ್ವವೇನೂ ಅನಿಸಲಿಲ್ಲ ಅವರು ಮಾತುಗಳಿಲ್ಲದೆ ಹೊರಟರು. ಅವರ ಹಿಂದೆ ಬಹಳ ದೂರ ಸುಬ್ಬಣ್ಣವರು ಹೊರಟರೂ ಒಮ್ಮೊಮ್ಮೆ ಮುರಾರಿಯ ಊಹೆ ತಪ್ಪುತಲಿದ್ದಿತು. ಆಗ್ಗೆ ಅವನು ತನ್ನ ವೇಷಕ್ಕನುಸಾರವಾಗಿ ಯಾವದೊಂದು ಮನೆಯವರನ್ನು ಕೂಗಿ ಭಿಕ್ಷೆಬೇಡುವನು, ಅವರು ಬಾಗಿಲು ತೆರೆಯದಾ ಗಲು ಅವರನ್ನು ಬೈಯುತ್ತ ಮರಳಿ ಇಂದುಶೇಖರ-ಕಮಲಿನಿಯರು ಹಿಡಿದ ದಾರಿಯನ್ನೇ ಅನುಸರಿಸುವನು

ಹೀಗೆ ಆ ಮಂಡಳಿಯೆಲ್ಲವೂ ಹನ್ನೆರಡು ಗಂಟೆಗೆ ನಿಲ್ದಾಣಕ್ಕೆ ತಲು ಪಿತು. ಮುರಾರಿಯಾದರೂ ಅಲ್ಲಿಗೆ ಹೋಗಿದ್ದನು ಸುಬ್ಬಣ್ಣವರೂ ಅಲ್ಲಿ ಹೋಗಿ ಒಂದೆಡೆಯಲ್ಲಿ ಸ್ವಸ್ಥ ಕಣ್ಣು ಮುಚ್ಚಿಕೊಂಡು ಕುಳಿತುಬಿಟ್ಟರು. ಮುರಾರಿ ಮಾತ್ರ ಅತ್ತಿತ್ತ ತಿರುಗಾಡಿ ಇಂದುಶೇಖರ-ಕಮಲಿನಿಯರ ಮೇಲೆ ಕಣ್ಣಿಟ್ಟಿದ್ದನು.

ಇಂದುಶೇಖರ-ಕಮಲಿನಿಯರು ೧ನೇ ವರ್ಗದ ವೇಟಿಂಗ ರೂಮಿನಲ್ಲಿ ಏಕಾಂತಸ್ಥಳಕ್ಕೆ ಹೋದರು. ಮುರಾರಿಯೂ ಆ ವೇಟಿಂಗರೂಮಿನ ಬಾಗಿ ಲಲ್ಲಿಯೇ ಹೋಗಿ ನೆಲದ ಮೇಲೆ ತನ್ನ ಮಾಸಿದ ಚಾದರವನ್ನು ಹೊದ್ದು ಕೊಂಡು ಮಲಗಿದನು.

ಕಮಲಿನಿ-ಇಂದುಶೇಖರರು ಒಳಗೆ ಕುಳಿತರು. ಅವರು ಏನಾದರೂ ಮಾತನಾಡಿದರೆ ಕೇಳಬೇಕೆಂಬುದೇ ಮುರಾರಿಯ ಉದ್ದೇಶವಾಗಿದ್ದಿತು; ಆದರೆ ಬಹಳ ವೇಳೆಯವರೆಗೆ ಯಾರೂ ಮಾತನ್ನೇ ಆಡಲಿಲ್ಲ ಕೊನೆಗೆ ಕಮಲಿನಿಗೆ ಬಹಳ ಬೇಸರು ಬಂದಂತೆ ತೋರಿತು. ಆಕೆ ಮೇಲೆಕ್ಕೆದ್ದಳು. ಒಡ ನೆಯೇ ಮುರಾರಿ ನಿದ್ರೆಹತ್ತಿದವರಂತೆ ಗುರು ಗುರು ಮಾಡಹತ್ತಿದನು. ಕಮಲಿನಿಯು ಒಂದು ಸಲ ಹೊರಗೆ ಬಂದು ಸುತ್ತಲೂ ನೋಡಿದಳು. ಅಲ್ಲಿ ಯಾರೂ ಇರಲಿಲ್ಲ ಬಾಗಿಲಲ್ಲಿ ಭಿಕ್ಷುಕನೊಬ್ಬನು ಮಾತ್ರ ನಿದ್ದೆ ಹತ್ತಿ ಬಿದ್ದಿ ದ್ದನು. ಆ ಭಿಕ್ಷುನ ಬಗ್ಗೆ ಆಕೆಗೆ ವಿಶೇಷವೇನೂ ಅನಿಸಲಿಲ್ಲ ಒಳಗೆ

ಹೋಗುತ್ತಲೆ:-ಇಂದುಶೇಖರ, ಗಾಡಿ ಬರುವುದು ಎಷ್ಟು ಗಂಟೆಗೆ? ಎಂದು ಬೇಸರದ ಧ್ವನಿಯಲ್ಲಿ ಕೇಳಿದಳು.

ಇನ್ನೂ ಒಂದುಗಂಟೆ ಅವಕಾಶ, ಇಂದುಶೇಖರ ಉತ್ತರವಿತ್ತ.

ಹಾಗಾದರೆ ಇಷ್ಟು ಬೇಗನೆ ಏಕೆ ಕರೆದು ತಂದೆ? ಸಿಡುಕು ಧ್ವನಿಯಲ್ಲಿ ಕಮಲಿನಿ ಪ್ರಶ್ನೆ ಮಾಡಿದಳು.

ಹಾಗೆ ಮಾಡದ ಹೊರತು ಅನ್ಯಮಾರ್ಗವೇ ಇರಲಿಲ್ಲ, ಇಂದುಶೇಖರ ನೆಂದ.

ಅದೇಕೆ? ಕಮಲಿನಿ ವಿಸ್ಮಯದ ಧ್ವನಿಯಲ್ಲಿ ಕೇಳಿದಳು.

ಏಕೆಂದರೆ, ಇಷ್ಟು ನುಡಿದು, ಇಂದುಶೇಖರನು ಅತ್ತಿತ್ತ ನೋಡಿ ಆಕೆಯ ಕಿವಿಯಲ್ಲಿ ಮೆಲ್ಲನೆ ಏನನ್ನೋ ಹೇಳಿದ. ಮುರಾರಿಗೆ ಅದರಲ್ಲಿಯ ಒಂದು ಅಕ್ಷರವಾದರೂ ಕೇಳಿಸಲಿಲ್ಲ. ಕೊಂಚ ತಡೆದು:-ತಿಳಿಯಿತೆ? ಎಂದು ಇಂದುಶೇಖರ ತನ್ನ ಕಿವಿಮಾತು ಮುಗಿಸಿದ.

ಆದರೆ ಇಷ್ಟು ಬೇಗ ಬರಲು ಕಾರಣವೇನು? ಕಮಲಿನಿ ಮತ್ತೆ ಪ್ರಶ್ನೆ ಮಾಡಿದಳು.

ಸುಬ್ಬಣ್ಣವರನ್ನು ನೀನು ಬಲ್ಲೆಯಷ್ಟೆ? ಇಂದುಶೇಖರ ಕೇಳಿದ.

ಅಹುದು, ಬಲ್ಲೆ ಆ ಚಾಣಾಕ್ಷ ತುಬ್ಬುಗಾರರನ್ನು ಅರಿಯದವರಾರು? ಕಮಲಿನಿಯೆಂದಳು

ಅವರಿಗೆ ನಮ್ಮ ಚಲನವಲನವು ಕಿಂಚಿತ್ತಾದರೂ ತಿಳಿಯಕೂಡದೆಂದು ನಾವು ಅಪರಾತ್ರಿಯ ವೇಳೆಯಲ್ಲಿ ಇಷ್ಟು ಬೇಗನೆ ಬಂದು ಇಲ್ಲಿ ತಿಗಣೆ-ಚಿಕ್ಕಾಟಗಳ ಮಧ್ಯದಲ್ಲಿ ಕುಳಿತಿರಬೇಕಾಯಿತು, ಇಂದುಶೇಖರ ವಿವರಿಸಿದ.

ಆದರೆ.......

ಈಗ ಏನೂ ಬೇಡ. ಕಮಲಿನಿ, ಗೋಡೆಗಳಿಗೂ ಕಿವಿಗಳಿರುತ್ತವೆಂಬ ಹಳೆಯ ಜನರ ಹೇಳಿಕೆಯನ್ನು ಮರೆಯಬೇಡ. ಆದುದರಿಂದ ಈ ವಿಷಯ ವಾಗಿ ಈಗೇನೂ ಬೇಡ. ದೇಸಾಯಿಯವರನ್ನು ಕಾಣುವದೊಂದೇ ತಡ; ಆ ಮೇಲೆ ದೇಸಾಯರು ಮರಳಿ ಮುಂಬೈಗೆ ಮೂರರ ಗಾಡಿಯಿಂದ ಹೋಗು ತ್ತಾರೆ. ಕೂಡಲೆ ನಾವು ಮನೆಗೆ ಹೋಗೋಣ. ಅಲ್ಲಿ ಬೇಕಾದ ಹಾಗೆ ಮಾತನಾಡಲು ಬರುವದು. ಇಂದುಶೇಖರನು ಕಮಲಿನಿಯನ್ನು ಬೇರೆ ವಿಷ ಯಕ್ಕೆ ತಿರುಗಿಸಿದನು.

ಮುರಾರಿಗೆ ತಕ್ಕಷ್ಟು ಸಂಗತಿ ತಿಳಿದಂತಾಯಿತು. ಅವನು ಇಂದು ಶೇಖರ-ಕಮಲಿನಿಯರು ನಿಲ್ದಾಣಕ್ಕೆ ಬಂದ ಉದ್ದೇಶವನ್ನರಿತನು. ತಾನು

ಮುಂದಿನ ಮಾರ್ಗ ನಿರ್ಣಯಿಸಲು ಎದ್ದು ಮೆಲ್ಲನೆ ಸುಬ್ಬಣ್ಣನವರ ಬಳಿಗೆ ಹೋದನು ಇಬ್ಬರೂ ಎದ್ದು ಒಂದು ಏಕಾಂತ ಸ್ಥಳಕ್ಕೆ ಹೋದರು ಅಲ್ಲಿಗೆ ಹೋದೊಡನೆ ಮುರಾರಿ ಸ್ವಲ್ಪದರಲ್ಲಿ ಎಲ್ಲ ಸಂಗತಿಯನ್ನೂ ತಿಳಿಸಿದನು.

ಮುರಾರಿ. ಅಂದು ನೀನು ತಂದ ವಿಳಾಸವೇ ಸರಿಯಾಗಿದೆಯೆಂದು ತೋರುತ್ತದೆ. ಈಗ ರಾತ್ರಿಯ ಸಮಯವಾದುದರಿಂದ ಒಂದು ವೇಳೆ ನಮಗೆ ಆದಾರ ಮುಖಲಕ್ಷಣವೂ ಅಷ್ಟು ಚನ್ನಾಗಿ ಕಾಣಲಿಕ್ಕಿಲ್ಲ.

ಅಹುದು, ಅದಕ್ಕೆ ಹೇಗೆ ಮಾಡಬೇಕು?

ಅದಕ್ಕೆ ನೀನು ಈಗಲೆ ಸಿದ್ಧನಾಗಬೇಕು. ಸಿದ್ಧನಿರುವೆನು.

ಜಾಗ್ರತೆಯಾಗಿ ಕಾರ್ಯಸಾಧನೆ ಮಾಡತಕ್ಕದ್ದು. ಒಳ್ಳೇದು.

ಅಷ್ಟು ಮಾತನಾಡುವದು ಮುಗಿದೊಡನೆ ಮುರಾರಿ ಅತ್ತ ಒಂದೆಡೆ ಹೋಗಿ ತನ್ನ ಭಿಕ್ಷುಕನ ವೇಷ ಕಳಚಿ ಸಾಹೇಬರ ವೇಷ ಧರಿಸಿದನು. ಅವನ ಆ ಬೋಳುಗುಮುಟದಂತಹ ಹ್ಯಾಟು, ಜೊಂಡು ಮೀಸೆ, ಹಸರು ಕನ್ನಡಕಗಳು ಅವನನ್ನು ಪ್ರತಿಸಾಹೇಬನನ್ನಾಗಿ ಮಾರ್ಪಡಿಸಿದ್ದವು. ಅವನು ನಿಲ್ಲುಮನೆಯಲ್ಲಿ ಪ್ರವೇಶಿಸುತ್ತಲೆ ಪೋರ್ಟರರು ಬೊಗ್ಗಿ ಸಲಾಮು ಮಾಡಿದರು. ಸುಬ್ಬಣ್ಣನವರು ತಮ್ಮ ಬೈರಾಗಿಯ ವೇಷದಲ್ಲಿಯೇ ಕುಳಿತಿದ್ದರು ಅವರು ಮುರಾರಿಯ ವೇಷವು ಚನ್ನಾಗಿಯೇ ಸಾಧಿಸಿದೆಯೆಂದು ತಿಳಿದು ಮೇಲಕ್ಕೆದ್ದರು.

ಮುರಾರಿ ಆಢ್ಯತೆಯಿಂದ ೧ನೇ ವರ್ಗದ ವೇಟಿಂಗ ರೂಮಿನಲ್ಲಿ ಹೊಕ್ಕನು. ಕಮಲಿನಿ-ಇಂದುಶೇಖರರು ಮೇಲಕ್ಕೆದ್ದು ಸಲಾಮು ಮಾಡಿದರು ಅಲ್ಲಿ ಕೆಲವು ವೇಳೆ ಕುಳಿತಿರಲು ಮುಂಬಯಿ ಪ್ಯಾಸೆಂಜರ್ ಬಂತು. ಒಡನೆಯೆ ಕಮಲಿನಿ-ಇಂದುಶೇಖರರು ಹೊರಗೆ ಹೋದರು. ಮುರಾರಿಯೂ ಅಲ್ಲಿಂದ ಎದ್ದು ಪ್ಯಾಂಟಿನ ಜೇಬಿನಲ್ಲಿ ಕೈಹಾಕಿ ಸಿಳ್ಳುಹೊಡೆಯುತ್ತ ತಿರುಗಾಡಹತ್ತಿದನು. ಅವನು ಅದೇ ವೇಳೆಯಲ್ಲಿ ಇಂದುಶೇಖರ-ಕಮಲಿನಿಯರ ಮೇಲೂ ಲಕ್ಷ್ಯವಿಟ್ಟನು.

ಇಂದುಶೇಖರ-ಕಮಲಿನಿಯರು ಪ್ಲ್ಯಾಟಫಾರ್ಮಿನ ಒಂದು ಬದಿಯಲ್ಲಿ ನಿಂತಿದ್ದರು. ಗಾಡಿ ನಿಲ್ಲುತ್ತಲೆ, ಎರಡನೇ ವರ್ಗದ ಡಬ್ಬಿಯೊಂದರಿಂದ ಒಬ್ಬ ಫ್ಯಾಶನೇಬಲ್ ತರುಣನಿಳಿದನು ಆತನು ೨೩-೨೪ ವಯಸ್ಸಿನವನಿದ್ದನು. ಸಾಧಾರಣ ಕೆಂಬಣ್ಣದವನಿದ್ದು ಸ್ವಚ್ಛವಾದ ಅರಿವೆಗಳನ್ನು ಧರಿಸಿದ್ದನು. ಅವನು ಕೆಳಗಿಳಿಯುತ್ತಲೆ ಇಂದುಶೇಖರ-ಕಮಲಿನಿಯರು ಮುಂದೆ

ಹೋಗಿ ಅವನನ್ನು ಸ್ವಾಗತಿಸಿದರು. ಕೂಡಲೆ ಮೂವರೂ ಕೂಡಿ ಸ್ಟೇಷನಿ ಯಿಂದ ಹೊರಗೆ ಹೊರಟು ಹೋದರು.

ಬಂದ ತರುಣನು ಮರಳಿ ಹೋಗಲಿದ್ದನೆಂಬದನ್ನು ಮುರಾರಿ ಅರಿತಿದ್ದನು, ಆದುದರಿಂದ ಆವರು ಹೊರಗೆ ಹೋದಾಗ್ಗೆ ಅವರ ಮೇಲೆ ಕಣ್ಣಿಡುವ ತೊಂದರೆಗೆ ಹೋಗದೆ, ಮುಂಬೈ ಟಿಕೆಟ್ಟು ತೆಗೆಯಿಸಿದನು

ಇಂದುಶೇಖರ, ಕಮಲಿನಿ ಮತ್ತು ಬಂದ ತರುಣ ಹೀಗೆ ಆ ಮೂವರೂ ಮುಂದೆ ಅಲ್ಪಾವಕಾಶದಲ್ಲಿಯೇ ಮರಳಿ ಸ್ಟೇಷನಿಗೆ ಬಂದರು. ಇಂದುಶೇಖರನು ಟಿಕೆಟ್ಟು ತಂದಿತ್ತನು. ಅವರೆಲ್ಲರೂ ಒಂದು-ಒಂದೂವರೆ ಗಂಟೆಯ ಸಮಯ ಕಾಯ್ದಿರಲು, ಮುಂಬೈಗೆ ಹೋಗುವ ಗಾಡಿ ಬರುವ ಹೊತ್ತಾಯಿತು. ಎಲ್ಲರೂ ಸಿದ್ಧರಾಗಿ ನಿಂತುಕೊಂಡರು

ಗಾಡಿ ಬರುತ್ತಲೆ ಇಂದುಶೇಖರನು ಎರಡನೇ ವರ್ಗದ ಡಬ್ಬಿಯೊಂದರಲ್ಲಿ ಹತ್ತಿದನು ಮುರಾರಿ ಅವರನ್ನು ಲಕ್ಷಿಸದವನಂತೆ ಅಲ್ಲಿಯೇ ನಿಂತಿದ್ದನು. ಗಾಡಿಬಿಡುವ ಸಮಯಕ್ಕೆ ಮುರಾರಿಯು ಆ ಡಬ್ಬಿಗೆ ಸಮೀಪದಲ್ಲಿಯೇ ಇದ್ದ ಇನ್ನೊಂದು ಡಬ್ಬಿಯಲ್ಲಿ ಕುಳಿತನು.

ಗಾಡಿಬಿಡುವ ಸಮಯಕ್ಕೆ ಬಂದ ಹೊಸ ತರುಣನು ಇಂದುಶೇಖರನನ್ನು ಕರೆದು ಕಿವಿಯಲ್ಲಿ ಏನನ್ನೋ ಹೇಳಿದನು.

ಕೊನೆಗೆ ಗಾಡಿಬಿಡುವ ಸಮಯಕ್ಕೆ ಹೊಸಬನು:- ಜೋಕೆ! ನಾನು ಸೂಚಿಸಿದಂತೆಯೇ ಹೋಗಿ ಕಾರ್ಯಸಾಧನೆ ಮಾಡತಕ್ಕದ್ದು. ಈ ಸಂದರ್ಭದಲ್ಲಿ ಎಷ್ಟು ಹಣ ವೆಚ್ಚವಾದರೂ ಚಿಂತೆಯಿಲ್ಲ, ತಿಳಿಯಿತೆ? ಎಂದು ಹೇಳಿದನು

ಆದಷ್ಟು ಯತ್ನ ಮಾಡುವೆವು. ಪ್ರತಿಪಕ್ಷಿ ಬಹಳ ಚಾಣಾಕ್ಷನಿರುವನು, ಇಂದುಶೇಖರನಂದನು.

ಅಹುದು. ನನಗೆ ಈ ಮೊದಲೇ ತಿಳಿದಿದ್ದರೆ ಎಲ್ಲ ವ್ಯವಸ್ಥೆ ಮಾಡಿಯೇ ಬಿಡುತ್ತಲಿದ್ದೆ ಆಗಲಿ. ಈಗಾದರೂ ತಪ್ಪಿಲ್ಲ. ನಾಲ್ಕಾರು ದಿನಗಳಲ್ಲಿ ನಾನೂ ಎಲ್ಲ ಸಾಹಿತ್ಯ ತೆಗೆದುಕೊಂಡೇ ಬರುವೆನು. ಅದುವರೆಗೆ ಯಾವ ಸಂಗತಿಯೂ ಹೊರಬೀಳದಂತಿರು, ಎಂದು ಎಚ್ಚರ ಕೊಟ್ಟ. ಗಾಡಿ ಬಿಟ್ಟಿತು.

---

## ● ಮಾಟದ ಮನೆ. ●

ಸುಬ್ಬಣ್ಣನವರು ಮುರಾರಿಯನ್ನು ಮುಂಬೈಗೆ ಕಳುಹಿ ಮರಳಿ ಬಂದ ಸಂಗತಿಯು ಹಿಂದಿನ ಪ್ರಕರಣದಲ್ಲಿ ಬಂದಿದೆ. ಮುರಾರಿಯನ್ನು ಕಳುಹಿ

ಬಂದಾಗ್ಗೆ ಸುಬ್ಬಣ್ಣವರಿಗೆ ಬಹಳ ವಿಷಾದವಾಯಿತು. ಅವರು ಬಹುತರ ಅವ
ನನ್ನು ಅಗಲಿಯೇ ಇರುತ್ತಿರಲಿಲ್ಲ ಯಾವಾಗಲೂ ಅವನನ್ನು ತಮ್ಮ ಸಂಗ
ಡವೇ ಇರಿಸುತಲಿದ್ದರು. ಮುರಾರಿಯ ಮೇಲೆ ಸುಬ್ಬಣ್ಣವರದು ಪುತ್ರಪ್ರೇಮ
ವಿದ್ದಿತು ಅವರಿಗೆ ಗಂಡು ಮಕ್ಕಳಿಲ್ಲದ ಮೂಲಕ ಅವನೇ ತಮ್ಮ ಮಗ
ನೆಂದು ತಿಳಿದುಬಿಟ್ಟಿದ್ದರು. ತಮ್ಮ ಲಕ್ಷಾವಧಿ ಆಸ್ತಿಗೆ ಅವನನ್ನೇ ಒಡೆಯ
ನನ್ನಾಗಿ ಮಾಡಿದ್ದರು. ಮಗನೇ ಆಗಿಹೋದ ಅವನ ಹಿತಚಿಂತನೆಯು ಬಗ್ಗೆ
ಅವರ ಮನಸ್ಸು ವ್ಯಗ್ರವಾಗುವದು. ಸ್ವಾಭಾವಿಕ. ಅಂದು ಅವರು ಮುರಾರಿ
ಯನ್ನು ಒಬ್ಬ ಘಾತುಕ ಮನುಷ್ಯನ ಹಿಂದೆ ಕಳುಹಿದ್ದರು. ಆದುದರಿಂದ
ಅವರ ಭೀತಿ ಇನ್ನೂ ಹೆಚ್ಚೇ ಆಗಿದ್ದಿತು. ಹಾಗಾದರೆ ಮುರಾರಿಯನ್ನು
ಮುಂಬೈಗೆ ಏಕೆ ಕಳುಹಬೇಕಾಗಿದ್ದಿತು? ಎಂದು ಆಕ್ಷೇಪಿಸಬಹುದು. ನಿಜವೆ;
ಆದರೆ ತಂದೆಯು ಕರ್ತವ್ಯವು ಮಗನ ಮೇಲೆ ಮಮತೆ ಮಾಡಿದ ಮಾತ್ರಕ್ಕೆ
ಮುಗಿಯಲಾರದು. ಮಗನ ಮೇಲ್ಮೆಗಾಗಿ ಯತ್ನಿಸುವದೂ, ಅವನು ಸಮಾ
ಜಕ್ಕೆ ಹಿತವಾಗುವಂತಹ ಕಾರ್ಯಗಳನ್ನು ಮಾಡುವುದೂ, ಪರಹಿತಕ್ಕಾಗಿ
ಪ್ರಾಣವನ್ನರ್ಪಿಸುವುದೂ ಮುಂತಾದ ಉಚ್ಚಕಾರ್ಯಗಳಿಗೆ ಸಿದ್ಧನಾಗಿ
ಸ್ವಾರ್ಥವನ್ನು ಮರೆತು ನಡೆಯುವಂತೆ ಮಾಡುವುದಾದರೂ ತಂದೆಯ ಕರ್ತ
ವ್ಯವೇ ಆಗಿರುತ್ತದೆ ಮಮತೆಯ ಮಗನೆಂದು ಮುಂದಿರಿಸಿ ಮೂರ್ಖಳನ
ನ್ನಾಗಿ ಮಾಡಿದರೆ, ಅದೇ ಮಗನು ಮುಂದೆ ಏನೆನ್ನಬಹುದು? ತಂದೆಯನ್ನು
ಮನಸ್ಸೀ ನಿಂದಿಸಲಿಕ್ಕಿಲ್ಲವೆ? ಬಾಹ್ಯ ಜಗತ್ತಿನ ವ್ಯವಹಾರಜ್ಞಾನವನ್ನು
ನೀಡದ ಮೂಲಕ ತಂದೆಯನ್ನು ದೂಷಿಸಲಿಕ್ಕಿಲ್ಲವೆ? ತನ್ನ ಬಾಳು ಹಾಳು
ಮಾಡಿದುದಕ್ಕಾಗಿ ಮಮತೆಯ ಪಿತನನ್ನೇ ಹಳಿಯಲಿಕ್ಕಿಲ್ಲವೆ? ಮಮತೆ
ಮಾಡುತಲಿದ್ದ ತಂದೆಯು ಮಗನ ಮೇಲ್ಮೆಗಾಗಿ ಮುಂಜಾಗ್ರತೆ ವಹಿಸು
ವುದು ಆತನ ಕರ್ತವ್ಯವೇ ಆಗಿರುತ್ತದೆ. ಸುಬ್ಬಣ್ಣವರು ಮುರಾರಿಯನ್ನು
ಮಗನೆಂದೇ ತಿಳಿದಿದ್ದರು. ಅವನಾದರೂ ತಮ್ಮ ಹಾಗೆಯೇ ಪರಹಿತಕ್ಕಾಗಿ
ಸರ್ವಸ್ವವನ್ನೂ ತ್ಯಜಿಸಲು ಸಿದ್ಧನಾಗುವಂತೆ ಮಾಡಲು ಯತ್ನಿಸುತ್ತಿದ್ದರು.
ಅವರಂತೆಯೇ ಮುರಾರಿಯು ತಮ್ಮ ಹಾಗೆ ತುಬ್ಬುಗಾರಿಕೆಯಲ್ಲಿ ಯಶಸ್ಸು
ಹೊಂದಬೇಕೆಂದೂ ಅವರ ಹೆಬ್ಬಯಕೆಯಿದ್ದಿತು. ಅಂತೆಯೇ ಅವರು
ಮುರಾರಿಯನ್ನು ಪ್ರತಿಯೊಂದು ತುಬ್ಬುಗಾರಿಕೆಯ ಪ್ರಕರಣದಲ್ಲಿ ಮುಂ-
ದೂಡುತಲಿದ್ದರು ತಮ್ಮ ಸಂಗಡ ಎಲ್ಲ ಸಂದರ್ಭಗಳಲ್ಲಿ ಕರೆದುಕೊಂಡೇ
ಹೋಗುತಲಿದ್ದರು. ಆಗಾಗ್ಗೆ ತುಬ್ಬುಗಾರಿಕೆಯ ಸನ್ನಿವೇಶಗಳಲ್ಲಿ ಅವನ
ಮತವನ್ನು ವಿಚಾರಿಸುತಲಿದ್ದರು. ಒಂದೊಂದು ಸಲ ಅವನನ್ನೇ ಕಳುಹುತ

ಲಿದ್ದರು. ಅವನಾದರೂ ತನ್ನ ಕಾರ್ಯವನ್ನು ಯಶಸ್ವಿಯಾಗಿ ಮಾಡಿ ತೋರಿಸುತ್ತಲಿದ್ದನು. ಆಗಾಗ್ಗೆ ತಪ್ಪನ್ನಾದರೂ ಮಾಡುತ್ತಲಿದ್ದನು. ಅದೇ ಸಮಯದಲ್ಲಿ ಸುಬ್ಬಣ್ಣವರು ಅವನ ತಪ್ಪು ಅವನಿಗೆ ತೋರಿಸಿಕೊಟ್ಟು, ಸರಿಯಾದ ದಾರಿಯನ್ನು ತಿಳಿಹೇಳುತಲಿದ್ದರು. ಮುರಾರಿಯಾದರೂ ಜಾಣನು, ಕುಶಾಗ್ರಬುದ್ಧಿಯವನು. ಯಾವಾಗಲೂ ಮುಂದೆ ಹೋಗಿ ಕಾರ್ಯ ಕೈಕೊಳ್ಳುವನು. ತಾನೇನಾದರೂ ತಪ್ಪಿನಲ್ಲಿ ತಪ್ಪು ಮಾಡಲು ಕಾರಣವೇನಾಯಿತೆಂಬದನ್ನು ತಾನೇ ತಿಳಿದು ನೋಡುವನು. ತನಗೆ ತಿಳಿಯದಿದ್ದಲ್ಲಿ ನಾಚಿಗೊಳ್ಳದೆ ಸುಬ್ಬಣ್ಣವರಿಗೆ ಕೇಳುವನು. ತಾನು ಮುಂದೆ ಬೀಳಬೇಕು, ತನ ಕೈಯಿಂದ ಒಳ್ಳೇ ಕೆಲಸಗಳಾಗಬೇಕು ಎಂಬ ಹವ್ಯಾಸವು ಅವನಲ್ಲಿ ಬಹಳವಾಗಿದ್ದಿತು. ಸುಬ್ಬಣ್ಣವರಲ್ಲಿ ಅವನಿಗೆ ಪಿತೃಭಕ್ತಿಯಿದ್ದಿತು. ಅದರ ಹೊರತು ಸುಬ್ಬಣ್ಣವರೆಂದರೆ, ಆದರ್ಶ ಪುರುಷರೆಂದು ತಿಳಿದಿದ್ದನು ಅವರಂತೆ ತಾನಾದರೂ ತುಬ್ಬುಗಾರಿಕೆಯ ಅನೇಕ ಸಂಗತಿಗಳನ್ನೂ ಆಶ್ಚರ್ಯಕಾರಕವಾದ ಶೋಧಗಳನ್ನೂ ಮಾಡಬೇಕು, ಶಿಕ್ಷೆಗೆ ಗುರಿಯಾಗುತ್ತಲಿದ್ದ ಅನೇಕ ನಿರಪರಾಧಿಗಳನ್ನು ಸುಬ್ಬಣ್ಣವರಂತೆ ತಾನೂ ಬಿಡಿಸಬೇಕು, ಎಂಬ ಹಂಬಲವು ಅವನಲ್ಲಿ ಬಹಳವಾಗಿದ್ದಿತು. ಅದಕ್ಕಾಗಿ ಅವನು ಬಹಳವಾಗಿ ಯತ್ನಿಸುತಲಿದ್ದನು. ಸುಬ್ಬಣ್ಣವರ ಪ್ರತಿಯೊಂದು ಚಲನವಲನವನ್ನೂ ಕಣ್ಣಲ್ಲಿ ಕಣ್ಣಿಟ್ಟು ನಿರೀಕ್ಷಿಸುವನು. ಅವರು ಹೇಳುವ ಪ್ರತಿಯೊಂದು ಸಂಗತಿಯನ್ನೂ ಲಕ್ಷ್ಯವಿಟ್ಟು ಕೇಳುವನು. ಸುಬ್ಬಣ್ಣವರೇ ತನ್ನ ಗುರುವೆಂದು ಸಂಪೂರ್ಣವಾಗಿ ನಂಬಿ, ಅವರ ಆಜ್ಞೆಯಂತೆಯೇ ವರ್ತಿಸುತಲಿದ್ದರು.

ಕುಶಲ ಶಿಕ್ಷಕ, ಕುಶಾಗ್ರ ಬುದ್ಧಿಯ ವಿದ್ಯಾರ್ಥಿ ಕೂಡಿದಾಗಲ್ಲವೇ ವಿದ್ಯೆಯ ತಿರುಳು ಹೊರಹೊರಡುವದು. ಸುಬ್ಬಣ್ಣವರ ಶಿಕ್ಷಣದಲ್ಲಿ ಮುರಾರಿ ದಿನದಿನಕ್ಕೆ ಉತ್ಕೃಷ್ಟ ತುಬ್ಬುಗಾರನಾಗಹತ್ತಿದನು. ಅವನಿಗೆ ಆತ್ಮವಿಶ್ವಾಸವು ದೊರೆತಿದ್ದಿತು. ಅನೇಕ ಪ್ರಸಂಗಗಳಲ್ಲಿ ತಾನೇ ಮುಂದುವರಿದು ಹೋಗುತಲಿದ್ದನು.

ಹಾಗೆಯೇ ಮುಂಬೈಗೆ ಆ ಖೂನೀ ಮನುಷ್ಯನ ಬೆನ್ನು ಹತ್ತಿ ಹೋಗಬೇಕೆಂಬ ಇಚ್ಛೆಯಿದ್ದಿತು; ಮತ್ತು ಯಾವ ವಿಪತ್ತಿಗೂ ಸಿಕ್ಕದೆ ಪಾರಾಗಿ ಬರುವ ಆತ್ಮವಿಶ್ವಾಸವೂ ಅವನಲ್ಲಿದ್ದಿತು. ಸುಬ್ಬಣ್ಣವರು ಅವನ ಮನೋಭಾವವರಿತರು. ಆ ಸಮಯ ಅವನನ್ನು ಕಳುಹುವುದೇ ಯೋಗ್ಯವೆಂದು ವಿಚಾರಿಸಿ ಅವನನ್ನು ಕಳುಹಿದರು.

ಮುರಾರಿ ಮುಂಬಯಿಯಿಂದ ಯಾವ ವಿಪತ್ತಿಗೂ ಸಿಲುಕದೆ ಬರುವ

ನೆಂಬ ಬಗ್ಗೆ ಸುಬ್ಬಣ್ಣವರಿಗೆ ವಿಶ್ವಾಸವಿದ್ದಿತು. ಆ ಬಗ್ಗೆ ಅವರು ಯೋಚನೆಯನ್ನೇ ಮಾಡುತಲಿರಲಿಲ್ಲ; ಆದರೆ ಯಾವಾಗಲೂ ತಮ್ಮ ಊರುಗೋಲಿನಂತಿದ್ದ ಅವನನ್ನು ಅಗಲಿದುದಕ್ಕಾಗಿ ಅವರಿಗೆ ವಿಷಾದವಾಗಿದ್ದಿತು. ಅವರು ಮರಳಿ ಬಂದೊಡನೆ ತಮ್ಮ ಹೊಸ ಬಿಡಾರಕ್ಕೆ ಹೋಗಿ ಮಲಗಿದರು.

ಮರುದಿನ ನಿತ್ಯದಂತೆ ಆರಕ್ಕೆ ಹೊರ ಹೊರಟರು. ಅತ್ತಿತ್ತ ತಿರುಗಾಡಿ ಮರಳಿ ಬರುತ್ತಲಿರುವಾಗ ಸಾವುಕಾರರ ಮನೆಯ ಹೆಣ್ಣಾಳು ಮಧುಕರನ ಮನೆಗೆ ಹೋಗುವುದನ್ನು ನೋಡಿದರು. ಒಡನೆಯೇ ಅವರು ತಮ್ಮ ಒಂದು ತರ್ಕವು ನಿಜವಾಯಿತೆಂದು ತಿಳಿದು, ಆಕೆಯನ್ನು ಕಾಣಲು ನಿರ್ಧರಿಸಿದರು. ಆಕೆ ಮರಳಿ ಬರುವವರೆಗೆ ಅಲ್ಲಿಯೇ ಒಂದು ಸ್ಥಳದಲ್ಲಿ ನಿಂತರು.

ಸುಮಾರು ಅರ್ಧ ತಾಸು ಕಳೆದ ಮೇಲೆ ಸೇವಿಕೆ ಗಂಗವ್ವ ಮರಳಿ ಬಂದಳು. ಸುಬ್ಬಣ್ಣವರೂ ಆಕೆಯನ್ನನುಸರಿಸಿ ನಡೆದರು ಸುಮಾರು ಒಂದು ಮೈಲಿನವರೆಗೆ ಮುಂದೆ ಮುಂದೆ ಸೇವಿಕೆ, ಹಿಂದೆ ಹಿಂದೆ ಸುಬ್ಬಣ್ಣ ಹೀಗೆ ಹೊರಟರು. ಹೀಗೆ ಹೋಗಿರಲು ನಿರ್ಜನವಾದ ಸ್ಥಳಕ್ಕೆ ತಲುಪಿದರು ಅಲ್ಲಿಗೆ ಹೋಗುತ್ತಲೆ ಸುಬ್ಬಣ್ಣವರು:—ಗಂಗವ್ವಾ, ಎಂದು ಕೂಗಿದರು.

ಸೇವಿಕೆಗೆ ಆಶ್ಚರ್ಯವಾಯಿತು. ತನ್ನ ಹೆಸರುಗೊಂಡು ಕೂಗಿದವರಾರು? ಎಂಬದನ್ನರಿಯಲು ಹಿಂದೆ ಹೊರಳಿ ನೋಡಿದಳು. ಒಬ್ಬ ಗೃಹಸ್ಥ. ಆಕೆಗೆ ಅವನ ಪರಿಚಯ ಅಲ್ಪವಾದರೂ ಇರಲಿಲ್ಲ. ಅವನಿಗೆ ತನ್ನ ಹೆಸರು ಹೇಗೆ ಗೊತ್ತಾಯಿತೆಂಬದನ್ನು ತಿಳಿಯದೆ ಮೂಢಳೇ ಆದಳು; ಮತ್ತು ಹಾಗೆಯೇ ಆಕೆ ಸ್ವಲ್ಪ ಗೊಂದಲದಲ್ಲಿಯೂ ಬಿದ್ದಳು. ತನ್ನ ಮನಃಸ್ಥಿತಿಯನ್ನು ತೋರಗೊಡದೆ:-ನೀವಾರು? ಎಂದು ಕೇಳಿದಳು.

ಸುಬ್ಬಣ್ಣ ಆಕೆಯ ಮನಃಸ್ಥಿತಿಯನ್ನರಿತರು. ಆಕೆ ಇಂದುಶೇಖರನಿಂದ ಯಾರಿಗೋ ಒಂದು ಗುಪ್ತ ಪತ್ರ ಒಯ್ಯುತ್ತಲಿರಬಹುದೆಂದು ತರ್ಕಿಸಿದರು. ನಿಜ ಸಂಗತಿಯನ್ನರಿಯಲು ಯತ್ನಿಸಬೇಕೆಂಬ ಉದ್ದೇಶದಿಂದ;-ಗಂಗವ್ವಾ, ನೀನು ಈಗ ಎತ್ತ ಹೊರಟೆ? ಎಂದು ಕೇಳಿದರು

ಕಳ್ಳನ ಜೀವ ಹುಳ್ಳುಳ್ಳಗೆ, ಎಂಬ ನಾಣ್ಣುಡಿಯಂತೆ ಆಕೆ ಬೆದರಿದಳು; ಆದರೂ ಅಷ್ಟು ಚಿಕ್ಕ-ಪುಟ್ಟ ಸಂಗತಿಗಳಿಗೆ ಭಯಪಡುವವಳು ಅವಳಾಗಿರಲಿಲ್ಲ. ತನ್ನ ಭೀತಿಯನ್ನು ಮುಚ್ಚಲೆತ್ನಿಸುತ್ತ:-ಏಕೆ, ಎಂದು ಕೇಳಿದಳು.

ನೀನು ಸಾವುಕಾರರ ಮನೆಯಲ್ಲಿ ನೌಕರಿಗಿರಲಿಲ್ಲವೆ? ಎಂದು ಸುಬ್ಬಣ್ಣವರು ಆಕೆಗೆ ಪ್ರಶ್ನೆಮಾಡಿದರು.

ಸೇವಿಕೆಗೆ ಆಶ್ಚರ್ಯವಾಯಿತು. ತನ್ನನ್ನು ಇಷ್ಟು ತಿಳಿದವರಾರು? ಭಯವು ಹೆಚ್ಚಾಯಿತು. ಆದರೂ ಉಪಾಯಗಾಣದೆ:-ಅಹುದು, ಎಂದು ಉತ್ತರವಿತ್ತಳು.

ಸುಬ್ಬಣ್ಣವರು ಆಕೆಯ ಮನವನ್ನರಿಯುವ ಉದ್ದೇಶದಿಂದ ಆಕೆಯ ಮುಖವನ್ನೇ ದೃಷ್ಟಿಸಿ ನೋಡಹತ್ತಿದರು.

ಗಂಗವ್ವನಿಗೆ ಭೀತಿ ಹೆಚ್ಚಾಯಿತು. ಅವನು ತನ್ನ ಹೃದಯದಲ್ಲಿಯೇ ಪ್ರವೇಶಮಾಡುತಲಿದ್ದಾನೆಂದು ಭಾವನೆಯಾಯಿತು ಸುಬ್ಬಣ್ಣ ಸುಮ್ಮನೆ ನಿಂತರೂ ಆಕೆಯಿಂದ ಸುಮ್ಮನೆ ನಿಲ್ಲಲಿಕ್ಕಾಗಲಿಲ್ಲ. ಆಕೆ:-ನೀವಾರು? ಎಂದು ಪುನಃ ಕೇಳಿದಳು.

ಸುಬ್ಬಣ್ಣವರು ಆಕೆಯ ಸ್ಥಿತಿಯನ್ನರಿತರು. ಹೃದಯದಲ್ಲಿ ಕಪಟವು ತುಂಬಿದ್ದಿತೆಂದು ಅವರು ತಿಳಿದುಬಿಟ್ಟರು. ಶ್ರೀನಿವಾಸರಾಯರ ಕೊಲೆಯಲ್ಲಿ ಈಕೆಯದೂ ಅಂಗವಿದ್ದಿತೆಂದು ಅವರು ಮೊದಲೇ ಊಹಿಸಿದ್ದರು; ಆದರೆ ಆ ವೇಳೆಯಲ್ಲಿ ಅವರಿಗೆ ಬೇಕಾದ ಸಂಗತಿ ಬೇರೆಯಾಗಿದ್ದಿತು. ಈ ವೇಳೆಯಲ್ಲಿ ಗಂಗವ್ವನು ಎಲ್ಲಿ ಹೊರಟಿದ್ದಳೆಂಬದನ್ನರಿಯಬೇಕಾಗಿದ್ದಿತು. ಅದಕ್ಕೆ ಏನಾದರೊಂದು ಯುಕ್ತಿಸಾಧಿಸಿದರೆ ನೋಡಬೇಕೆಂದು ಯತ್ನಿಸಲು:- ಈಗ ಎತ್ತ ಹೋಟಿರುವೆ? ಎಂದು ಮರಳಿ ಪ್ರಶ್ನೆಮಾಡಿದರು.

ತನ್ನ ಪ್ರಶ್ನೆಗೆ ಏನೂ ಉತ್ತರ ಕೊಡದೆ ಮರಳಿ ತನಗೇ ಪ್ರಶ್ನೆ ಮಾಡಿದದರಿಂದ ಆಕೆಗೆ ಏನೂ ತಿಳಿಯದಾಯಿತು. ಈ ಗೃಹಸ್ಥನಾರಾಗಿರಬಹುದೆಂದು ಊಹಿಸುವುದರಲ್ಲಿಯೇ ಆಕೆಯ ಪುಣ್ಯವೆಲ್ಲವೂ ವೆಚ್ಚವಾಗಿ ಹೋಯಿತು. ಆದರೂ ಆಕೆ ಸುಬ್ಬಣ್ಣವರ ಪ್ರಶ್ನೆಗೆ ಉತ್ತರ ಕೊಡದೆ:- ನೀವಾರು? ಎಂಬ ತನ್ನ ಮೊದಲಿನ ಪ್ರಶ್ನೆಯನ್ನೇ ಮರಳಿ ಪಠಿಸಿದಳು.

ಇಷ್ಟು ಅವಕಾಶದಲ್ಲಿಯೇ ಸುಬ್ಬಣ್ಣವರು ಗಂಗವ್ವನ ಸ್ವಭಾವವನ್ನು ತಿಳಿದರು. ಆಕೆ ಸುಲಭವಾಗಿ ತಮ್ಮ ಮಾತಿನಂತೆ ವರ್ತಿಸುವ ಹಾಗೆ ಕಾಣಲಿಲ್ಲವಾದುದರಿಂದ ಅವರು ತಮ್ಮ ರಾಮಬಾಣ ಉಪಾಯವನ್ನೇ ಮುಂದೆ ಮಾಡಿದರು.

ಗಂಗವ್ವಾ, ನಾನು ಯಾರೆಂದು ತಿಳಿದಿರುವೆ? ಸುಬ್ಬಣ್ಣ ಕೇಳಿದರು.

ಅವರು ಕೇಳುವ ರೀತಿಯನ್ನೂ ಸ್ವರದ ಕಾಠಿಣ್ಯವನ್ನೂ ಕೇಳಿ ಆಕೆಗೆ ಗುಪ್ತಪೋಲೀಸನಿರಬಹುದೆ? ಎಂಬ ಸಂಶಯ ಬಂದಿತು. ಕೂಡಲೆ ಆಕೆ ಗಾಬರಿಯಾದಳು. ಇನ್ನಾವ ಸಮಯದಲ್ಲಿಯೇ ಆಗಿದ್ದರೆ, ಆಕೆ ಬೆದರುತ್ತಿರಲಿಲ್ಲ; ಆದರೆ ಆಗ್ಗೆ ಆಕೆಯ ಹತ್ತರ ಗುಪ್ತಪತ್ರವಿದ್ದುದರಿಂದ ಆಕೆ ಬೆದರಿ

ದಳು; ಆಕೆ ಮೃದುಸ್ವರದಲ್ಲಿ:-ನನಗೆ ಹೇಗೆ ತಿಳಿಯಬೇಕು?ಎಂದು ಕೇಳಿದಳು

ನಾನು ಗುಪ್ತ ಪೋಲೀಸನಿರುತ್ತೇನೆ, ಸುಬ್ಬಣ್ಣವರೆಂದರು.

ತನ್ನ ಕಲ್ಪನೆಯಂತೆ ಅವನು ಗುಪ್ತ ಪೋಲೀಸನೇ ಆದುದಕ್ಕೆ ಆಕೆಗೆ ಭೀತಿಯೆನಿಸಿತು. ಆಕೆ ಅತೀವ ನಮ್ರಳಾಗಿ:-ನನ್ನ ಹತ್ತಿರ ಏನು ಕೆಲಸ? ಎಂದು ಕೇಳಿದಳು.

ಪೋಲೀಸ ಕಮೀಶನರ ಶ್ರೀನಿವಾಸರಾಯರು ಕರೆಯುತ್ತಾರೆ, ಎಂದು ಹೇಳಿದರು.

ನನ್ನನ್ನೇ? ಗಂಗವ್ವ ವಿಸ್ಮಯ ಸೂಚಕ ಸ್ವರದಲ್ಲಿ ಪ್ರಶ್ನೆಮಾಡಿದಳು.

ಅಹುದು; ನಿನ್ನನ್ನೇ, ಸುಬ್ಬಣ್ಣವರು ಉತ್ತರವಿತ್ತರು.

ಏತಕ್ಕೆ? ಗಂಗವ್ವ ಪ್ರಶ್ನೆ ಮಾಡಿದಳು.

ನನಗೆ ತಿಳಿಯದು, ಸುಬ್ಬಣ್ಣ ಉತ್ತರವಿತ್ತರು.

ಒಂದು ತಾಸು ತಡೆದು ಬರುವೆನು. ಗಂಗವ್ವ ತನಗೆ ಅವಧಿ ಸಿಕ್ಕರೆ ನೋಡಬೇಕೆಂದು ಎತ್ತುಗಡೆ ಮಾಡಿದಳು.

ಸುಬ್ಬಣ್ಣವರೇನು ಆಕೆಯನ್ನರಿಯದಷ್ಟು ಬುದ್ಧಿಹೀನರೆ? ಆಗದು; ಈಗಲೇ ಬರಬೇಕೆಂದು ಅವರ ಅಪ್ಪಣೆಯಿದೆ, ಸುಬ್ಬಣ್ಣವರಂದರು.

ಅನಿವಾರ್ಯವಾಗಿ ಬಂದಿತು. ಉಪಾಯಗಾಣದ.-ಹಾಗಾದರೆ ನಡೆಯಿರಿ, ಎಂದು ನುಡಿದು ಮರಳಿದಳು

ಸುಬ್ಬಣ್ಣವರು ಆಕೆಯನ್ನು ಕೂಡಿಕೊಂಡು ಹೊರಟರು. ಮುಂದೆ ಮುಂದೆ ಹೋಗುತಲಿದ್ದರೂ ಸುಬ್ಬಣ್ಣವರ ಲಕ್ಷ್ಯವೆಲ್ಲವೂ ಗಂಗವ್ವನ ಮೇಲೆಯೇ ಇದ್ದಿತು ಆಕೆ ತಪ್ಪಿಸಿ ಓಡಿ ಹೋಗಬಹುದೆಂದಲ್ಲ; ಆದರೆ ತಾನು ಒಯ್ಯುತ್ತಿದ್ದ ಪತ್ರವನ್ನು ಮರೆ ಮಾಡಬಹುದು ಇಲ್ಲವೆ ಬಾವಿಯಲ್ಲಿ ಬಿಸುಟಬಹುದು, ಎಂಬ ಭೀತಿಯಿಂದ

ನಿಜವಾಗಿಯೂ ಗಂಗವ್ವನ ಸ್ಥಿತಿಯು ಹಾಗೆಯೇ ಇದ್ದಿತು ಆಕೆ ಪೋಲೀಸ ಚಾವಡಿಗೆ ಹೊರಟಿದ್ದಳು. ಹತ್ತರ ಇಂದುಶೇಖರ ಸೂಚಿಸಿದ್ದಂತೆ ಭಯಂಕರವಾದ ಪತ್ರವಿದ್ದಿತು. ಬಹಳ ಜನರ ಜೀವಿತಗಳನ್ನೇ ನಾಶಮಾಡುವಷ್ಟು ಸಾಧಾರಣವಾದ ಸಾಕ್ಷಿ ಆಕೆಯಲ್ಲಿದ್ದಿತು. ಆಕೆ ಸ್ವಾಮಿಭಕ್ತಿಯಿಂದಾಗಲಿ ಇಲ್ಲವೆ ಅನ್ಯರಿಗೆ ಅಪಾಯಕರವಾಗಬಹುದೆಂಬ ಭೀತಿಯಿಂದಾಗಲಿ ಹಾಗೆ ಮಾಡಿದಳೆಂದು ಕಲ್ಪಿಸಕೂಡದು

ಕೊಲೆಯಂತಹ ದುಷ್ಟ ಕಾರ್ಯಕ್ಕೆ ಸಹಾಯ ಮಾಡಿದ ಆಕೆಯಲ್ಲಿ ಅಷ್ಟು ಒಳ್ಳೆಯ ಸ್ವಭಾವವು ಹೇಗೆ ಇದ್ದೀತು? ಆಕೆಯು ತನ್ನ ದುಷ್ಟ

ಸ್ವಭಾವಕ್ಕನುಸಾರವಾಗಿ ತನ್ನ ಜೀವವುಳಿಸಲು ಯತ್ನಿಸುತಲಿದ್ದಳು. ತಾನು ಅಪರಾಧಿನಿಯೆಂದು ಹಿಡಿದುಕೊಂಡಿದ್ದ ಪತ್ರವನ್ನೇ ನಾಶಮಾಡಿದರೆ, ತನಗೆ ಭೀತಿಯೇ ಇಲ್ಲವೆಂದು ತಿಳಿದು, ಹಾಗೆ ಮಾಡಬೇಕೆಂದು ಒಂದೆರಡು ಸಲ ಯತ್ನಿಸಿದಳು; ಆದರೆ ಸುಬ್ಬಣ್ಣವರ ತೀಕ್ಷ್ಣ ದೃಷ್ಟಿಯೆದುರು ಕೊಂಚವಾದರೂ ಅಲ್ಲಾಡಲು ಬರುವಂತಿರಲಿಲ್ಲ. ಇದೊಂದು ಕುತ್ತಿನೊಳಗಿಂದ ಪಾರಾದರೆ ಸಾಕು; ಇನ್ನೆಂದೂ ಇಂಥ ದುಷ್ಟ ಕಾರ್ಯಕ್ಕೆ ಪ್ರವೃತ್ತಳಾಗುವುದಿಲ್ಲವೆಂದು ಆಣೆಯಿಟ್ಟುಕೊಂಡಳು ದೇವರಿಗೆ ಬೇಡಿಕೊಂಡಳು. ಹೀಗೆ ಆಕೆ ಭಯಕಂಪಿತಳಾಗಿ ವಿಚಾರಮಗ್ನಳಾಗಿರುವಾಗಲೇ ಸುಬ್ಬಣ್ಣವರು ಅವಳನ್ನು ಪೋಲೀಸು ಚಾವಡಿಗೆ ತಲುಪಿಸಿದರು.

ಸುಬ್ಬಣ್ಣವರು ಸನ್ನೆ ಮಾಡುತ್ತಲೆ ಪೋಲೀಸನೊಬ್ಬನು ಬಂದು ಗಂಗವ್ವನನ್ನು ಕರೆದೊಯ್ದು ಒಂದು ಕೋಣೆಯಲ್ಲಿ ಕುಳ್ಳಿರಿಸಿ, ತಾನೂ ಅಲ್ಲಿಯೇ ಕುಳಿತನು. ಸುಬ್ಬಣ್ಣವರೂ ಅಲ್ಲಿಗೆ ಹೋಗಿ ಕುಳಿತು ಪೋಲೀಸನಿಗೆ ಪೋ. ಕಮಿಶನರ ಶ್ರೀನಿವಾಸರಾಯರನ್ನು ಕರೆಯುವಂತೆ ಹೇಳಿದರು. ಒಡನೆಯೇ ಪೋಲೀಸನು ಹೋಗಿ ಸುಬ್ಬಣ್ಣವರು ಕರೆಯುತಲಿದ್ದ ಸಂಗತಿಯನ್ನು ತಿಳುಹಿದನು.

ಹತ್ತು ನಿಮಿಷಗಳಲ್ಲಿ ಶ್ರೀನಿವಾಸರಾಯರು ಅಲ್ಲಿಗೆ ಬಂದರು ಗಂಗವ್ವ ನಮಸ್ಕಾರ ಮಾಡಿ:- ಸಾಹೇಬರೇ, ನನ್ನನ್ನು ಕರೆಕಳುಹಿದ್ದಿರಾ? ಎಂದು ಕೇಳಿದಳು.

ಶ್ರೀನಿವಾಸರಾಯರು ನಿಜವಾಗಿಯೂ ಆಕೆಯನ್ನು ಕರೆಕಳುಹಿದ್ದಿಲ್ಲ. ಆದರೂ ಆಕೆಗೆ ಏನೆಂದು ಉತ್ತರವೀಯಬೇಕೆಂಬದನ್ನರಿತಿದ್ದರು. ಇಂತಹ ಸಂದರ್ಭಗಳು ಅವರಿಗೆ ಅನೇಕ ಸಲ ಬಂದಿದ್ದವು. ಸುಬ್ಬಣ್ಣವರು ಕರೆತಂದ ಮೂಲಕ ಏನಾದರೂ ಕಾರಣವಿರಲೇಬೇಕೆಂದು ಊಹಿಸಿ: ಅಹುದು, ಎಂದರು

ಆ ಮೇಲೆ ಸುಬ್ಬಣ್ಣವರು ಗಂಗವ್ವನ ಸಂಗತಿಯನ್ನು ಸ್ವಲ್ಪದರಲ್ಲಿಯೆ ಇಂಗ್ಲಿಷಿನಲ್ಲಿ ತಿಳುಹಿಸಿ, ಆಕೆಯಲ್ಲಿದ್ದ ಗುಪ್ತ ಪತ್ರವನ್ನು ದೊರಕಿಸತಕ್ಕದ್ದೆಂದು ಹೇಳಿದರು

ಶ್ರೀನಿವಾಸರಾಯರು ಗಂಗವ್ವನನ್ನು ಬೇರೊಂದುಸ್ಥಳದಲ್ಲಿಕರೆದೊಯ್ದು ಭೀತಿಯನ್ನು ತೋರಿಸಿ ಪತ್ರ ಕೊಡ ಹೇಳಿದರು. ಸುಲಭವಾಗಿ ಕೊಡುವಂತೆ ತೋರಲಿಲ್ಲವಾದುದರಿಂದ ನಿನ್ನನ್ನು ಚನ್ನಾಗಿ ಶೋಧಿಸುವೆವು, ಪ್ರಸಂಗ ಬಂದಲ್ಲಿ ಹೊಡೆತಗಳನ್ನಾದರೂ ಕೊಡುವೆವು, ಎಂದು ಭಯಪಡಿಸಲು, ಆಕೆ

ಆ ಪತ್ರವನ್ನಿತ್ತಳು. ಒಡನೆಯೇ ಅವರು ಆ ಪತ್ರ ತೆಗೆದುಕೊಂಡು ಸುಬ್ಬಣ್ಣನವರ ಬಳಿಗೆ ಬಂದರು.

ಶ್ರೀನಿವಾಸರಾಯರು ಮತ್ತು ಸುಬ್ಬಣ್ಣ ಇವರಿಬ್ಬರೂ ಕೂಡಿ ಆ ಪತ್ರ ಬಿಚ್ಚಿದರು. ಮುಂದಿನಂತೆ ಸಂಗತಿಯು ಅದರಲ್ಲಿದ್ದಿತು.

ಶ್ರೀ ರಾ. ರಾ ಕಲ್ಲಪ್ಪನವರಿಗೆ—

ನಾನು ನಿಮ್ಮ ಶಕ್ತಿ ಸಾಮರ್ಥ್ಯಗಳನ್ನು ಅರಿತಿರುವೆನು. ನನಗೆ ಸದ್ಯ ತಮ್ಮ ಸಹಾಯ ಬಹಳವಾಗಿ ಬೇಕಾಗಿದೆ. ಇಂದು ರಾತ್ರಿ ೧೨ ಹೊಡೆದ ನಂತರ ನಾನು ಗುಪ್ತಸ್ಥಳಕ್ಕೆ ಬರುವೆನು ದಯವಿಟ್ಟು ಭೆಟ್ಟಿಯಾಗಬೇಕು. ಲಾಭಾಂಶವೂ ವಿಶೇಷವಾದೀತು. ಈಗ ಪತ್ರ ತಂದ ಸೇವಿಕೆಯು ವಿಶ್ವಾಸದವಳಿರುತ್ತಾಳೆ. ಗೌಪ್ಯಸ್ಫೋಟನಕ್ಕೆ ಅವಕಾಶವಿಲ್ಲ. ಬಾಕಿ ಸಂಗತಿ ಸಮಕ್ಷ

ತಮ್ಮ, ಇಂದ ಶೇ

ಏನು. ಶ್ರೀನಿವಾಸರಾಯರೇ, ಈ ಕಲ್ಲಪ್ಪನಾರು?

ಅವನೊಬ್ಬ ಬದ್ಮಾಷ ಜನರ ಮುಖಂಡ. ಈ ಊರಲ್ಲಿ ಗುಪ್ತವಾಗಿ ಜೂಜಾಟ, ಅಲ್ಲಲ್ಲಿ ಚಿಕ್ಕ-ಪುಟ್ಟ ಕಳವುಗಳು ಇವನಿಂದಲೇ ನಡೆಯುತ್ತವೆ ಈತ ಕೊಲೆಗಳನ್ನಾದರೂ ಮಾಡಿರುವನು; ಆದರೆ ಅವು ಈ ಊರಲ್ಲಲ್ಲ, ನಮ್ಮ ಸಂಸ್ಥಾನದ ಎಲ್ಲೆ ದಾಟಿ ಬ್ರಿಟಿಶ್ ಸೀಮೆಯಲ್ಲಿ ಹೋಗಿ ಕೊಲೆಗಳನ್ನು ಮಾಡುತ್ತಾನೆ.

ಹಾಗಾದರೆ ನೀವು ಇದೂವರೆಗೂ ಅವನನ್ನೇಕೆ ಹಿಡಿಯಲಿಲ್ಲ?

ಏನು ಮಾಡಬೇಕು? ಉಪಾಯವಿಲ್ಲದಾಗಿದೆ. ಅದೇಕೆ?

ನಮ್ಮಲ್ಲಿ ಜೂಜಾಡುವದು ಪ್ರತಿಬಂಧಕವಿದ್ದರೂ ಅವರು ಜೂಜಾಡುತ್ತಾರೆ; ಆದರೆ ಹಿಡಿಯಹೋದರೆ ಸಿಕ್ಕುವದೇ ಇಲ್ಲ. ಒಳ್ಳೇ ವಿಚಿತ್ರ!

ವಿಚಿತ್ರವೇ ಅದಾಗಿರುತ್ತದೆ. ಈ ಊರಲ್ಲಿ ಮಾಟದ ಮನೆಯೆಂಬದೊಂದು ವಿಚಿತ್ರ ಮನೆಯಿರುತ್ತದೆ. ಆಂ, ಮಾಟದ ಮನೆಯೇ!

ಆಹುದು. ಒಳ್ಳೇ ವಿಚಿತ್ರವಾದ ಮನೆ. ಅದೇನೋ ಧರ್ಮರಾಜನ ಸಭೆಯಲ್ಲಿ ಮಯನಿರ್ಮಿತವಾದ ಸೋಜಿಗದ ನೋಟವನ್ನು ಕೇಳಿಲ್ಲವೆ? ನೆಲವಿದ್ದಲ್ಲಿ ನೀರಿನಂತೆ, ನೀರಿದ್ದಲ್ಲಿ ನೆಲದಂತೆ ಕಾಣುತ್ತಿದ್ದಿತಂತೆ. ಹಾಗೆಯೇ ಆ ಮಾಟದ ಮನೆಯ ಸ್ಥಿತಿಯಿರುತ್ತದೆ. ನಿಜವೆ?

ಹೌದು. ಆ ಮನೆಯಲ್ಲಿಯೇ ಜೂಜಾಟ ನಡೆಯುತ್ತದೆ. ನಾವು ದಿನಾಲು ಯತ್ನಿಸುತ್ತೇವೆ; ಆದರೆ ಅವರನ್ನು ಹಿಡಿಯುವದೇ ಶಕ್ಯವಾಗಿಲ್ಲ. ಏಕೆ?

ಈಗ ಹತ್ತು-ಹದಿನೈದು ದಿನಗಳ ಮೊದಲು ನಾವು ಅವರನ್ನು ಹಿಡಿದೇ ತೀರಬೇಕೆಂದು ಐವತ್ತು ಜನ ಪೋಲೀಸರನ್ನೊಡಗೊಂಡು ಹೋಗಿ ಆ ಮನೆಗೆ ಮುತ್ತಿಗೆಯನ್ನೇ ಹಾಕಿಬಿಟ್ಟೆವು, ಆದರೆ ನಾವು ಎಷ್ಟು ಶೋಧ ಮಾಡಿದರೂ ನಮಗೆ ಅವರ ಸುಳಿವೇ ಸಿಕ್ಕಲಿಲ್ಲ. ಅಲ್ಲಿ ಒಂದು ಮಾನವ ವ್ಯಕ್ತಿ ಕೂಡಾ ಕಾಣಲಿಲ್ಲ; ಉಪಾಯವಿಲ್ಲದೆ ಮರಳಬೇಕಾಯಿತು

ಒಂದು ವೇಳೆ ಅಲ್ಲಿ ಯಾರೂ ಇದ್ದಿರಲಿಕ್ಕಿಲ್ಲ.

ಹಾಗೆ ತೋರುವುದೇನೋ ಸರಿಯೇ; ಆದರೆ ವಸ್ತುಸ್ಥಿತಿ ಭಿನ್ನವಾಗಿದೆ

ಅದು ಹೇಗೆ?

ಒಂದು ಸಲ ನಾನು ಮತ್ತು ನಮ್ಮ ಪತ್ತೆದಾರರಾದ ನರಸಿಂಗರಾಯರು ಬಹಳ ಪ್ರಯತ್ನಪೂರ್ವಕವಾಗಿ ಆ ಮಾಟದ ಮನೆಯಲ್ಲಿ ಪ್ರವೇಶ ಮಾಡಿದ್ದೆವು. ಅಲ್ಲಿಯ ವಿಸ್ಮಯಕಾರಕ ಸಂಗತಿಗಳನ್ನು ನೋಡಿ ನಮಗೆ ಬಹಳ ಆಶ್ಚರ್ಯವಾಯಿತು.

ಏಕೆ?

ಅಲ್ಲಿ ನಮಗೆ ನಾಲ್ಕಾರು ಬಾಗಿಲುಗಳು ಕಾಣಿಸಿದುವು ಚಿಲಕ ಕೊಂಡಿಯೆಲ್ಲವೂ ಸಿದ್ಧವಿದ್ದಿತು; ಆದರೆ ತೆಗೆಯಹೋದರೆ ಒಂದೂ ಬರುವಂತಿರಲಿಲ್ಲ ಎಷ್ಟು ಪ್ರಯತ್ನಪಟ್ಟರೂ ನಮ್ಮಿಂದ ಅವುಗಳನ್ನು ತೆರೆಯಲಾಗಲಿಲ್ಲ. ಆಗ್ಗೆ ನಿರಾಶರಾಗಿ ಹಿಂದಿರುಗಬೇಕಾಯಿತು

ಗಟ್ಟಿಯಾಗಿ ಹಾಕಲ್ಪಟ್ಟದ್ದುವೆ?

ನಮ್ಮ ಕಲ್ಪನೆಯೇನೋ ಹಾಗೆಯೇ ಇದ್ದಿತು; ಆದರೆ ಅವುಗಳು ನಿಜವಾದ ಬಾಗಿಲುಗಳಿರದೆ ತೋರಿಕೆಯವಿದ್ದು, ನಿಜವಾದ ಬಾಗಿಲುಗಳು ಬೇರೆಯೇ ಇರಬೇಕೆಂದು ನಮ್ಮ ನರಸಿಂಗರಾಯರ ತರ್ಕವಿದೆ.

ಆಂ, ಹೀಗೋ?

ಅಹುದು

ಹಾಗಾದರೆ ಇಂದಿನ ಈ ಮೀಟಿಂಗು ಆ ಮಾಟದ ಮನೆಯಲ್ಲಿಯೇ ನಡೆಯಬಹುದಲ್ಲವೆ?

ಅಹುದು; ಅದರಲ್ಲಿ ಸಂದೇಹವೇ ಇಲ್ಲ. ಆದುದರಿಂದ ಈ ಸಮಯದಲ್ಲಿ ನೀವು ಪ್ರಯತ್ನಪೂರ್ವಕ ಈ ಸಂಗತಿ ದೊರೆಕಿಸಿದುದು ಬಹಳ ಒಳಿತಾಯಿತು; ಆದರೆ ಮುಂದೆ ಹೇಗೆ ಮಾಡಬೇಕು?

ನಿಜ. ನಿಮ್ಮ ಶಂಕೆಯು ನಿಜವಿದೆ, ಆದರೆ ಹೇಗೆ ಮಾಡಬೇಕೆನ್ನುತ್ತೀರಿ?

ಇಂದುಶೇಖರನಾದರೂ ಇದರಲ್ಲಿ ಕೂಡಿರುವನೆಂದಂತಾಯಿತು ಆದುದರಿಂದ ಈ ಪತ್ರವು ಕಲ್ಲಪ್ಪನಿಗೆ ಮುಟ್ಟುವಂತಾದರೆ ಇಂದುಶೇಖರನು ಅಲ್ಲಿಗೆ

ಹೋಗುವ ಸಮಯ ಸಾಧಿಸಿ, ನಾವು ಅವನ ಬೆನ್ನು ಹತ್ತಿದರೆ, ನಮ್ಮ ಎಲ್ಲ ಕೆಲಸಗಳೂ ಸಾಧಿಸಬಹುದು.

ಛೆ! ಶ್ರೀನಿವಾಸರಾಯರೇ, ಇಂದುಶೇಖರನು ನಾವು ಊಹಿಸಿದಷ್ಟು ಮೂರ್ಖನಲ್ಲ, ಅವನು ಬಹಳ ಧೂರ್ತನಿರುವನು. ಈಗಾದ ಸಂಗತಿಯಿಂದ ಅವನು ಕಲ್ಲಪ್ಪನ ಭೆಟ್ಟಿಗೇ ಹೋಗಲಿಕ್ಕಿಲ್ಲ. ಅದು ಹೇಗೆ?

ಅವನ ಗಂಗವ್ವನನ್ನು ಮರಳಿ ಕಾಣದಿರಲು, ತನ್ನ ಪತ್ರವು ಪೋಲೀಸರ ಕೈಸೇರಿತೆಂದು ತಿಳಿದು ಅವನು ಕಲ್ಲಪ್ಪನನ್ನು ಕಾಣಲು ಹೊರಡಲಿಕ್ಕಿಲ್ಲ.

ಹಾಗಾದರೆ ಹೇಗೆ ಮಾಡಬೇಕು?

ಈಗ ಒಂದು ಯುಕ್ತಿ ಮಾಡಬೇಕು. ಅದೇನು?

ನಾವು ಒಂದು ಸಲ ಆ ಮಾಟದ ಮನೆಗೆ ಹೋಗಿ ಬರತಕ್ಕದ್ದು.

ಹಾಗೆಯೇ ಆಗಲಿ. ನರಸಿಂಗರಾಯರೆಲ್ಲಿರುವರು?

ಏಕೆ, ಅವರನ್ನು ಕರೆಕಳುಹಲೇನು? ಊರಲ್ಲಿಲ್ಲವೆ?

ಇಲ್ಲ ಒಂದು ಪತ್ತೆದಾರಿಯ ಕೆಲಸದ ಸಲುವಾಗಿ ಬೆಳಗಾವಿಗೆ ಹೋಗಿರುವರು ತಾರು ಮಾಡಿದರೆ ಕೂಡಲೆ ಬರುವರು.

ಹಾಗಾದರೆ ಹಾಗೆಯೇ ಮಾಡಿರಿ. ಅವರೂ ಬಂದರೆ ಮೂವರೂ ಕೂಡಿ ಹೋಗಲು ಬರುವದು.

ಒಳ್ಳೇದು. ಯಾವಾಗ ಹೋಗುವುದು?

ನರಸಿಂಗರಾಯರು ಬಂದೊಡನೆಯೇ ಅದನ್ನು ನಿರ್ಧರಿಸೋಣ. ಈಗ ಇನ್ನೊಂದು ಕೆಲಸವೆಂದರೆ, ನಾವು ಗಂಗವ್ವನನ್ನು ಕೈದು ಮಾಡಿದ ಬಗ್ಗೆ ಕೊಂಚವಾದರೂ ತಿಳಿಯದಂತೆ ಗುಪ್ತವಾಗಿಡಿರಿ. ಒಳ್ಳೇದು.

ನಾನು ಒಂದೆರಡು ಗಂಟೆ ತಡೆದು ಪುನಃ ಬರುವೆನು. ಆ ಮೇಲೆ ಮುಂದಿನ ಯೋಚನೆ ಮಾಡೋಣ.

ಇಷ್ಟು ವ್ಯವಸ್ಥೆಮಾಡಿ ಸುಬ್ಬಣ್ಣವರು ಅಲ್ಲಿಂದ ಹೊರಬಿದ್ದರು.

ಸುಬ್ಬಣ್ಣವರ ಸ್ವಭಾವವು ಬಲು ವಿಚಿತ್ರವಾದುದು. ಒಮ್ಮೆ ಯಾವದೊಂದು ಗೂಢವನ್ನರಿತರಾಯಿತು. ಅದನ್ನು ಬಿಡಿಸುವವರೆಗೆ ಅವರಿಗೆ ಅನ್ಯ ವಿಷಯಗಳ ಪರಿವೆಯೇ ಆಗುವುದಿಲ್ಲ. ಒಂದು ಸಲ ಅದನ್ನು ಹೊರದೆಗೆದೇ ಮುಂದಿನ ಕಾರ್ಯಕ್ಕೆ ಕೈಹಾಕುವರು. ಮಾಟದ ಮನೆಯ ಆ ವಿಚಿತ್ರ ಸಂಗತಿ ಕೇಳಿದಾಗಿನಿಂದ ಅದರಲ್ಲಿಯೇ ಅವರ ಮನಸ್ಸು ತೊಡಗಿ ಹೋಯಿತು. ಅದನ್ನು ಬಯಲಿಗೆಳೆಯದ ಹೊರತು ಅವರ ಮನಸ್ಸಿಗೆ ಶಾಂತತೆ ದೊರಕುವಂತೆ ತೋರಲಿಲ್ಲ. ಶ್ರೀನಿವಾಸರಾಯರಲ್ಲಿ ಆ ಮನೆಯಿದ್ದ

ಸ್ಥಳವನ್ನಾದರೂ ಕೇಳಲಿಲ್ಲ. ಅದನ್ನಷ್ಟು ಅರಿತರೆ ಸಾಕ ; ಮುಂದಿನ ಎಲ್ಲ ಗುಪ್ತವನ್ನೂ ಕಂಡು ಹಿಡಿಯಲು ಅವರು ಸಮರ್ಥರೇ ಆಗಿದ್ದರು ಹೀಗೆ ಅವರು ಮಾಟದ ಮನೆಯ ಸಂಗತಿಯನ್ನರಿಯಲು ಉತ್ಸುಕರಾಗಿರುವಾಗಲಿ ಅವರಿಗೆ ಮಧುಕರನ ಸ್ಮರಣೆಯಾಯಿತು. ಕೂಡಲೆ ಅವರು ಜೇಲುಮನೆ ಯತ್ತವೇ ಹೊರಟರು.

ಸುಬ್ಬಣ್ಣವರು ಜೇಲುಮನೆ ಮುಟ್ಟಿದಾಗ್ಗೆ ಮಧುಕರನು ಖಿನ್ನ ವದನ ದಿಂದ ಕುಳಿತಿದ್ದನು. ಸುಬ್ಬಣ್ಣವರನ್ನು ನೋಡುತ್ತಲೆ ಆನಂದದಿಂದ ಅವ ರನ್ನು ಸ್ವಾಗತಿಸಿದನು.

ಸುಬ್ಬಣ್ಣವರೇ, ಬಹಳ ದಿನಗಳಿಂದ ನಿಮ್ಮ ದರುಶನವೇ ಇಲ್ಲವಲ್ಲ!

ಏನು ಮಾಡಬೇಕು? ಉದ್ಯೋಗದಲ್ಲಿ ಬಿಡುವೇ ಸಿಕ್ಕಲಿಲ್ಲವೆನ್ನ ಬಹುದು. ಇರಲಿ ಮಧುಕರ, ನೀನು ಮಾಟದ ಮನೆಯ ಹೆಸರು ಕೇಳಿರು ವೆಯಾ?

ಮಾಟದ ಮನೆಯ ಹೆಸರನ್ನು ಕುಸುಮಪುರದಲ್ಲಿ ಎಲ್ಲರೂ ಕೇಳಿರು ವರು; ಆದರೆ ಒಳಹೊಕ್ಕು ನೋಡಿದವರು ಮಾತ್ರ ತೀರಾ ಸ್ವಲ್ಪ ಜನರಿರುವರು

ಅದೇಕೆ?

ಅದೊಂದು ವಿಚಿತ್ರ ಮನೆಯಿರುತ್ತದೆ. ಅದು ಉಕ್ಕಿನ ತಗಡು, ಸ್ಪ್ರಿಂಗುಗಳಿಂದಲೇ ಸಿದ್ಧಮಾಡಲ್ಪಟ್ಟಿದೆ. ಅದರಲ್ಲಿ ಉಪಯೋಗಿಸಲ್ಪಟ್ಟಿ ಸ್ಪ್ರಿಂಗುಗಳೆಂದರೆ, ಅದನ್ನು ಹೇಳಬರುವಂತಿಯೇ ಇಲ್ಲ. ಯಂತ್ರಶಾಸ್ತ್ರ ಜ್ಞರನ್ನೂ ಕೂಡ ಮಂಕರನ್ನಾಗಿ ಮಾಡುವಂತಿದೆ.

ನೀನಾವಾಗಲಾದರೂ ಅಲ್ಲಿಗೆ ಹೋಗಿದ್ದಿಯಾ?

ನಾನು ಚಿಕ್ಕವನಿರುವಾಗ್ಗೆ ಒಮ್ಮೆ ಹೋಗುವ ಸಂದರ್ಭವೊದಗಿದ್ದಿತು. ನಮ್ಮ ಚಿಕ್ಕಪ್ಪನಿದ್ದನು. ಅವನೂ ಜೂಜಾಟದವರಲ್ಲಿ ಒಬ್ಬನು. ಒಂದು ಸಲ ಅವನು ನನ್ನನ್ನು ಅಲ್ಲಿಗೆ ಕರೆದೊಯ್ದಿದ್ದನು. ಆಗ್ಗೆ ನಾನಿನ್ನೂ ಆರೇಳು ವರುಷದವನಿರಬಹುದು. ಆದರೂ ಆ ಅದ್ಭುತ ಮರೆತಿಲ್ಲ. ಸುಬ್ಬಣ್ಣವರೇ, ಅಲ್ಲಿಯ ಅಂದವು ಅವರ್ಣನೀಯವಿದೆ. ಅಲ್ಲಿ ಬರೆಯಲ್ಪಟ್ಟಿರುವ ದೇವರ ಮೂರ್ತಿಗಳನ್ನೂ ವೇದವಾಕ್ಯಗಳನ್ನೂ ನೋಡಿದರೆ, ಅದೊಂದು ಋಷ್ಯಾ ಶ್ರಮವೋ, ಧಾರ್ಮಿಕನ ಮನೆಯೋ ಇರುವಂತೆ ತೋರುತ್ತದೆ; ಆದರೆ ಸುಬ್ಬಣ್ಣವರೇ, ಅವೆಲ್ಲವುಗಳಲ್ಲಿಯೂ ಒಂದು ಗೌಪ್ಯವಿದೆ. ಅದೇನು?

ಪ್ರತಿಯೊಂದು ಮೂರ್ತಿಯೂ ಒಂದೊಂದು ಕಳ್ಳಬಾಗಿಲು ಇಲ್ಲವೆ ಕಳ್ಳ ಕಪಾಟು ಆಗಿರುತ್ತದೆ.

ಇದೆಲ್ಲವೂ ನಿನಗೆ ಹೇಗೆ ಗೊತ್ತಾಯಿತು?

ನನ್ನ ಕಕ್ಕನು ನನ್ನನ್ನು ಬಹಳವಾಗಿ ಪ್ರೀತಿಸುತ್ತಿದ್ದನು ಆ ಸಮಯದಲ್ಲಿ ಆತನು ಅಲ್ಲಿಯ ಒಂದೆರಡು ಕಪಾಟುಗಳನ್ನು ತೆರೆದು ತೋರಿಸಿದ್ದನು.

ಈಗ ಆ ಗೌಪ್ಯವು ಸ್ಮರಣೆಯಲ್ಲಿದೆಯೋ?

ಛೇ! ಅದೇನೂ ಇಲ್ಲ.

ಒಳ್ಳೇದು. ಆ ಮನೆಗೆ ಗುಪ್ತದ್ವಾರಗಳಿವೆಯೋನು?

ಅಹುದು; ಸುಮಾರು ಎಂಟು-ಹತ್ತು ದ್ವಾರಗಳಾದರೂ ಇವೆ. ಅಂತೆಯೇ ಅಲ್ಲಿ ಜೂಜಾಟವು ನಿರ್ವಿಘ್ನವಾಗಿ ಸಾಗುತ್ತಿದೆ. ಅದೇಕೆ?

ಸುಬ್ಬಣ್ಣವರೇ, ಮೊದಲು ಹೊರಗಿನವರು ಆ ಮನೆಯನ್ನು ಶೋಧಿಸಿ ತೆಗೆಯುವದೇ ಶಕ್ಯವಿಲ್ಲ. ಮೇಲೆ ಬೇಕಾದಷ್ಟು ಶೋಧಿಸಬಹುದು; ಆದರೆ ಜೂಜಾಡುವವರು ಕುಳಿತ ಸ್ಥಳವೇ ಸಿಕ್ಕುವದಿಲ್ಲ. ಒಂದುವೇಳೆ ಆ ಜನರು ಮನೆ ಬಿಟ್ಟೇ ಹೋಗಕೂಡದೆಂದು ಮುತ್ತಿಗೆ ಹಾಕಿ ಕುಳಿತುಕೊಂಡರೂ ನಿಷ್ಫಲವೇ. ಏಕೆ?

ಏಕೆಂದರೆ, ಆ ಮನೆಗೆ ಸೋಪಾನ ಮಾರ್ಗಗಳಿರುತ್ತವೆ. ಇವೆಲ್ಲ ಬೇರೆ ಬೇರೆ ದಿಕ್ಕಿಗಿದ್ದು, ನಗರದ ಬೇರೆ-ಬೇರೆ ಭಾಗಕ್ಕೊಯ್ಯುತ್ತವೆ. ಒಂದುವೇಳೆ ಆ ಮನೆಗೆ ಹೋದ ಯಾವನೊಬ್ಬ ಜೂಜಾಟದವನನ್ನು ಹೋಗುವಾಗ್ಗೆ ನೋಡಿ ಮನೆಯ ಸಮೀಪದಲ್ಲಿಯೇ ದಾರೀ ಕಾಯುತ್ತ ಕುಳಿತರೂ ಅವನು ನಗರದ ಇನ್ನೊಂದು ಭಾಗದಲ್ಲಿ ನಿರಾತಂಕವಾಗಿ ದಾಟಿ ಹೋಗುತ್ತಾನೆ.

ಆಂ, ಹೀಗೇನು?

ಅದೊಂದು ಇಂದ್ರಜಾಲ ವಿದ್ಯೆಯಂತಿದೆ. ಆದರೂ ನಿತ್ಯವೂ ಬಹುತರ ಅಲ್ಲಿ ಕೂಡುವ ಜನರು ಬಿನ್ನ ಭಿನ್ನ ಮಾರ್ಗಗಳಿಂದಲೇ ಒಳಹೊಕ್ಕು ಕಲೆಯುತ್ತಾರೆ.

ಆ ಮಾರ್ಗಗಳು ಬಹುತರ ಎಲ್ಲಿರುತ್ತವೆಂಬದು ನಿನಗೆ ಗೊತ್ತಿದೆಯೇನು?

ಆ ದಿನ ನಮ್ಮ ಚಿಕ್ಕಪ್ಪನೊಡನೆ ನಾನು ಹೋದಾಗ್ಗೆ ಮೇಲೆ ಪೋಲೀಸರು ಬಂದ ಸಂಗತಿ ತಿಳಿಯಿತು. ಆಗ್ಗೆ ಚಿಕ್ಕಪ್ಪನು ಅದಾವದೋ ಒಂದು ಬಾಗಿಲು ತೆರೆದನು. ಅಲ್ಲಿ ಕತ್ತಲೆಯು ತುಂಬಿದ್ದಿತು. ಅಲ್ಪಾವಕಾಶದಲ್ಲಿಯೇ ಈ ಊರಲ್ಲಿನ ದೇವೀಗುಡಿಯ ಹಿಂದಿನ ಭಾಗಕ್ಕೆನಾವು ಬಂದು ತಲುಪಿದೆವು ಆಗ ನಾನಿನ್ನೂ ಚಿಕ್ಕವನಿದ್ದುದರಿಂದ ಆ ಬಾಗಿಲು ದೇವಿಗುಡಿಯ ಹಿಂದೆ

ಎಲ್ಲಿದೆಯೆನ್ನುವ ಬಗ್ಗೆ ನನಗೇನೂ ತಿಳಿಯದು; ಆದರೆ ಅಲ್ಲಿ ಬಾಗಿಲಿರುವದು ಮಾತ್ರ ನಿಜ.

ಈ ಊರಲ್ಲಿ ಜೂಜಾಡುವ ಜನರಲ್ಲಿ ಒಬ್ಬಿಬ್ಬರನ್ನಾದರೂ ನೀನು ಬಲ್ಲೆಯಾ?

ಛೆ! ನನಗೆ ಯಾರದೂ ಗೊತ್ತಿಲ್ಲ. ನಮ್ಮ ಚಿಕ್ಕಪ್ಪನು ಮುಂದೆ ಬೇಗನೆ ತೀರಿಹೋಗಲು, ನನಗೆ ಮರಳಿ ಅಲ್ಲಿಗೆ ಹೋಗುವ ಸಂಧಿಯೇ ಸಿಕ್ಕಲಿಲ್ಲ. ಆದುದರಿಂದ ಅದೊಂದು ಸಮಯದ ಹೊರತು ನನಗೆ ಬೇರೆ ಸಮಯ ಅದನ್ನು ನೋಡಬೇಕೆಂದರೂ ಸಿಕ್ಕಿರುವದಿಲ್ಲ ಎಷ್ಟೋಸಲ ನಾನು ಅದನ್ನು ನೋಡಬೇಕೆಂದು ಇಚ್ಛಿಸಿದೆನು, ಆದರೆ ಸಾಧ್ಯವಾಗುವದು ಹೇಗೆ?

ಮಧುಕರ, ನಿಮ್ಮ ಇಂದುಶೇಖರನು ಅಲ್ಲಿ ಆವಾಗಲಾದರೂ ಹೋದದ್ದುಂಟೆ? ಯಾರು? ನನ್ನ ಬೀಗ ...

ಅಹುದು; ಆತನೇ.

ಛೆ! ಅವನು ಅಲ್ಲಿಗೇತಕ್ಕೆ ಹೋಗಬೇಕು? ಅವನೇನೂ ಜೂಜಾಟಕ್ಕೆ ಬಿದ್ದಿಲ್ಲ; ಮತ್ತು ಅವನು ಅಂತಹ ದುಷ್ಟರ ಸಹವಾಸಕ್ಕೆ ಹೋಗುವವನೂ ಅಲ್ಲ.

ಭಾಪು! ಭಾಪು!! ನೀನು ಅವರ ಬಲೆಯಲ್ಲಿ ಚನ್ನಾಗಿ ಬಿದ್ದಿರುವೆ.

ಅಂ, ಬಲೆಯೇ!

ಅಹುದು. ಬಲೆಯೆಂದರೆ ಅಂತಿಂತಹದಲ್ಲ; ಬಹು ಆಳವಾಗಿ ರಚಿಸಲ್ಪಟ್ಟದ್ದು. ಅಂ, ಇದೇನನ್ನು ಹೇಳುವಿರಿ ಸುಬ್ಬಣ್ಣವರೆ?

ಕಟ್ಟುಕತೆಯಲ್ಲ; ನಡೆದ ಸಂಗತಿ.

ವಿವರವಾಗಿ ಹೇಳಬಾರದೆ?

ಈಗ ಹೆಚ್ಚಾಗಿ ಹೇಳಲಾರೆ, ಆದರೂ ತ್ರೋಟಕವಾಗಿ ಹೇಳುತ್ತೇನೆ.

ಅದೇನು?

ಸಾವುಕಾರ ಶ್ರೀನಿವಾಸರಾಯರ ಆಪ್ತನೊಬ್ಬನು ಮುಂಬೈಯಲ್ಲಿರುತ್ತಾನೆ. • ನಿಮಗೆ ಯಾರು ಹೇಳಿದರು?

ತುಬ್ಬುಗಾರರಿಗೆ ಅನ್ಯರು ಹೇಳುತ್ತಾರೆಯೆ? ಹುಂ, ಮುಂದೆ?

ಆವನು ಸಾವುಕಾರರ ಲಕ್ಷಾಂತರ ಆಸ್ತಿಯನ್ನು ಸಂಪಾದಿಸಲು ಬಯಸುತ್ತಾನೆ.

ಸಾವುಕಾರರು ಮೃತಪಟ್ಟು ಹೋದುದರಿಂದ ಈಗ ಅವನೇ ಒಡೆಯನಾಗಿರುವದಿಲ್ಲವೆ?

ಹಾಗಿದ್ದರೆ ಅವರಿಗೆ ಅಷ್ಟು ಕಷ್ಟವೇ ಆಗುತ್ತಲಿರಲಿಲ್ಲ.

ಆತಂಕವೇನಿದೆ?

ಸಾವುಕಾರರು ಮೃತ್ಯುಲೇಖ ಮಾಡಿಟ್ಟಿರುವರು

ಆಂ, ಮೃತ್ಯುಪತ್ರವನ್ನೇ? ಅಹುದು.

ಏನೆಂದು?

ತಮ್ಮ ಆಸ್ತಿಯೆಲ್ಲವೂ ತಮ್ಮ ಒಬ್ಬವಿಶ್ವಾಸುಕನಿಗೆ ಹೋಗಬೇಕೆಂದು.

ಆತನಾರು? ಆರೆಂದು ಊಹಿಸುವೆ?

ಸಾವುಕಾರರ ಪ್ರೀತಿಗಾಗಲಿ, ವಿಶ್ವಾಸಕ್ಕಾಗಲಿ.......ಪಾತ್ರನಾದವನೆಂದರೆ....ಊಂ ಹುಂ ಅನ್ಯರಿರಲು ಶಕ್ಯವೇ ಇಲ್ಲ.

ಹಾಗಾದರೆ ಯಾರಿರಬೇಕು?

ಸುಬ್ಬಣ್ಣವರೇ, ನೀವು ನನಗೆ ಮೂರ್ಖನೆಂದರೂ ಪರಿವೆಯಿಲ್ಲ ಅಂತಹ ಮನುಷ್ಯನೆಂದರೆ ನಾನೊಬ್ಬನೇ. ನನ್ನಲ್ಲಿ ಸಾವುಕಾರರದು ಪುತ್ರವತ್ ಪ್ರೀತಿಯಿದ್ದಿತು. ಅವರು ಜೀವಿಸಿದ್ದರೆ ಅವರಿಂದ ಅದೆಷ್ಟೋ ಲಾಭ ಹೊಂದುವ ಆಶೆಯಿದ್ದಿತು; ಆದರೆ... ..

ಮಧುಕರ, ನಿನ್ನ ವಿಶ್ವಾಸವು ಸತ್ಯವಿದೆ. ಅವರು ನಿನ್ನ ಹೆಸರಿನಲ್ಲೇ ಮೃತ್ಯುಪತ್ರಮಾಡಿರುವರು.

ಆಂ, ನನ್ನ ಹೆಸರಿನಲ್ಲೇ?

ಅಹುದು, ನಿನ್ನಹೆಸರಿನಲ್ಲೇ ಮೃತ್ಯುಪತ್ರ ಮಾಡಿಟ್ಟಿರುವರು. ತಮ್ಮ ಲಕ್ಷಾವಧಿ ಸಂಪತ್ತಿಗೆ ಉತ್ತರಾಧಿಕಾರಿಯೆಂದು ನಿನ್ನನ್ನೇ ನಿಯಮಿಸಿರುವರು

ಆಂ, ಹಾಗಿದ್ದರೆ ನನಗೆ ಕಿಂಚಿತ್ತಾದರೂ ಸುಳುವಿಲ್ಲವಲ್ಲ!

ನಿನಗೆ ಸುಳುವಿಲ್ಲದಿದ್ದರೂ ಮುಂಬಯಿಯಲ್ಲಿದ್ದ ಆ ದುಷ್ಟನು ಅದನ್ನು ತಿಳಿದಿರುವನು. ಈಗ ಆ ಮೃತ್ಯುಪತ್ರವೆಲ್ಲಿದೆ?

ಅದು ಪೋಲೀಸ ಅಧಿಕಾರಿಗಳ ವಶದಲ್ಲಿದೆ. ಆ ದುಷ್ಟನು ಶಕ್ಯವಿದ್ದ ರೀತಿಯಿಂದ ಆ ಮೃತ್ಯುಪತ್ರವನ್ನು ವಶಪಡಿಸಿಕೊಳ್ಳಲು ಯತ್ನಿಸಿರಬೇಕು; ಆದರೆ ಅದು ಶಕ್ಯವಾಗದ್ದರಿಂದ ಅನಿರ್ವಾಹವಾಗಿ ಕೊಲೆ ಮಾಡಿ, ಅದು ನಿನ್ನ ಮೇಲೆ ಹೊರಳುವಂತೆ ಮಾಡಿರುವನು. ಆತ ಒಂದೇ ಕಲ್ಲಿನಲ್ಲಿ ಎರಡು ಪಕ್ಷಿಗಳನ್ನು ಕೆಡಹಲು ಯತ್ನಿಸಿರುವನು.

ಸುಬ್ಬಣ್ಣವರೇ, ನೀವೇನು ಮಾಯಾವಿಗಳೇ? ಇಂದ್ರಜಾಲ ವಿದ್ಯೆಯನ್ನೇನಾದರೂ ಅರಿತಿರುವಿರಾ?

ಛೇ! ಅದಾವುದೂ ಇಲ್ಲ ಕೊಂಚ ಶೋಧಕ ಬುದ್ಧಿಯಿಂದ ಚಿಕಿತ್ಸೆ ಮಾಡಿದರೆ, ಇದೆಲ್ಲವೂ ಸ್ಪಷ್ಟವಾಗಿ ತಿಳಿಯುವಂತಿದೆ.

ಇದನ್ನೆಲ್ಲ ಹೇಗೆ ತಿಳಿಯಲು ಶಕ್ತರಾದಿರಿ?

ನಾನರಿತುದು ಇನ್ನೂ ಬಹಳವಿದೆ. ಅದೇನು?

ಕೇಳಿದರೆ ನಿನಗೆ ವಿಷಾದವಾಗಬಹುದು.

ಅದೇನು ಹೇಳಿಯಾದರೂ ಹೇಳಿ ನೋಡುವಾ?

ನೀನು ನಿನ್ನವರೇ ಎಂದು ನಂಬಿದ ಕಮಲಿನಿ-ಇಂದುಶೇಖರರೇ ಇದರಲ್ಲಿನ ಪ್ರಮುಖ ಪಾತ್ರಗಳು

ಆಂ, ಏನನ್ನು ಹೇಳುತ್ತಲಿರುವಿರಿ? ನಿಜವನ್ನೇ.

ಛೆ! ದಿಟವಿರಲಾರದು. ಒಂದು ವೇಳೆ ಪುರುಷನಾದ ಇಂದುಶೇಖರನ ಬಗ್ಗೆ ಏನೆಂದರೂ ಸಲ್ಲಬಹುದು; ಆದರೆ ಸುಕೋಮಲೆ ಕಮಲಿನಿಯಲ್ಲಿ ಇಂತಹ ಆಕ್ಷೇಪಣೆಗೆ ಅತ್ಯಲ್ಪವಾದರೂ ಅವಕಾಶವಿಲ್ಲ.

ಸುಕೋಮಲ ಕಾಯಳಾದ ಕಮಲಿನಿಯು ಕಪಟದ ಮೂರ್ತಿಯೇ ಆಗಿರುವಳು. ಆಕೆಯ ಕಾಪಟ್ಯದ ಕಲ್ಪನೆಯೇ ನಿನಗಾಗಲು ಶಕ್ಯವಿಲ್ಲ.

ಆಂ, ಛೆ! ನಾನೆಂದೂ ನಂಬಲಾರೆ.

ನೀನು ನಂಬಲಿಕ್ಕಿಲ್ಲ; ಪ್ರತ್ಯಕ್ಷ ನೋಡಿದ ನಾನು ನಂಬಬೇಡವೆ?

ಏನನ್ನು ನೋಡಿದಿರಿ ನೀವು?

ಮಧುಕರ, ಕಮಲಿನಿ-ಇಂದುಶೇಖರರ ಸಂಬಂಧವನ್ನು ನೀನು ಬಲ್ಲೆಯಾ? ಅವರು ಅಣ್ಣ-ತಂಗಿಯರಾಗಬೇಕು.

ಅದು ತೋರಿಕೆಯ ಸಂಬಂಧ; ನಿಜವಾದ ಸಂಬಂಧ ಬೇರೆಯೇ ಇರುತ್ತದೆ. ಆಂ, ಅದು ನಿಜವೆ?

ಮಧುಕರ, ಕಮಲಿನಿಯು ಮುಂಬೈ ನಗರದ ಒಬ್ಬ ಬಾಜಾರ ಬಸವಿ; ಇಂದುಶೇಖರ ಅಲ್ಲಿಯ ಠಕ್ಕರಲ್ಲೊಬ್ಬ.

ಆಂ, ನನಗೆ ಏನೂ ತಿಳಿಯದಾಗಿದೆಯಲ್ಲ!

ಅಹುದು. ಮಧುಕರ, ಹಾಗಾಗುವದು ಸ್ವಾಭಾವಿಕ. ಕಮಲಿನಿ ನಿನ್ನ ಅತ್ಯಂತ ನಂಬುಗೆಯ ಪ್ರಾಣಾಪ್ತಳು ಎಂದು ನಂಬಿದ್ದೆ ಆಕೆಯನ್ನು ನೀನು ಕಾಣಲು ಚಡಪಡಿಸುತ್ತಲಿದ್ದೆ. ನೀನಿಲ್ಲದೆ ಆಕೆಯೆಷ್ಟು ಬಳಲುತಲಿರಬಹುದೆಂಬ ಕಲ್ಪನೆಯಿಂದಲೇ ನೀನು ಹಣ್ಣಾಗಿದ್ದೆ. ಆಕೆಯನುಭವಿಸುತಲಿದ್ದ ವಿರಹ ವ್ಯಥೆಯನ್ನು ನೆನೆನೆನೆದು ನೀನು ಬಹಳ ವಿಷಾದಪಡುತಲಿದ್ದೆ. ಆಕೆಯಂತಹ ಪ್ರೀತಿಯ ಸಖಿಯನ್ನು ಕಾಣಲವಕಾಶವಿಲ್ಲದುದಕ್ಕೆ ನೀನು ಬಹಳ ಖಿನ್ನನಾಗಿದ್ದೆಯಲ್ಲವೆ?

ಅಹುದು ಸುಬ್ಬಣ್ಣನವರೆ, ನಿಮ್ಮ ವಿಚಾರವು ಅತ್ಯಂತ ಯೋಗ್ಯವಾದುದಿದೆ. ನನಗೆ ನಿಜವಾಗಿ ಈ ಕಾರಾಗೃಹದಲ್ಲಿ ಯಾವ ಕೊರತೆಯೂ ಇಲ್ಲ. ಒಳ್ಳೇ ಭೋಜನ ಕೊಡುತ್ತಾರೆ. ಇರಲು ಸ್ವಚ್ಛವಾದ ಹವೆ, ಬೆಳಕು ಬಹಳವಾಗಿರುವಂತಹ ಕೋಣೆಯನ್ನು ಕೊಟ್ಟಿರುತ್ತಾರೆ. ಓದಲು ಬೇಕಾದಷ್ಟು ಪುಸ್ತಕಗಳಿವೆ. ದಿನಾಲು ವೃತ್ತಪತ್ರವನ್ನು ಕಳುಹುತ್ತಾರೆ. ಇಲ್ಲಿಯೇ ಜೇಲಿನ ಸಮೀಪದ ತೋಟದಲ್ಲಿ ವಿಹರಿಸಲು ಅವಕಾಶವಿದೆ. ಔದ್ಯೋಗಿಕ ಶಾಲೆಯಲ್ಲಿ ಹೋಗಿ ಕೆಲಸ ಮಾಡಲು ಬರುವಂತಿದೆ. ಇವೆಲ್ಲ ಸಾಧನಗಳಿದ್ದರೂ ಸೆರೆಮನೆ, ಎಂಬ ಶಬ್ದವೇ ದುಃಖಕೊಡಬಹುದು, ಎಂದು ನೀವು ಕೇಳಬಹುದು. ಆಬಗ್ಗೆ ನನಗೆ ಅಲ್ಪವಾದರೂ ದುಃಖವಿಲ್ಲ; ಏಕೆಂದರೆ, ನಾನು ಕೊಲೆಮಾಡಿದ್ದರಲ್ಲವೆ ಅದು ನನ್ನನ್ನು ಬಾಧಿಸುವದು? ನಾನು ಕೊಲೆಯನ್ನೇ ಮಾಡಿಲ್ಲವೆಂದಲ್ಲಿ ನನಗೆ ದುಃಖವಾದರೂ ಏಕಾಗಬೇಕು? ಸೆರೆಮನೆಯ ಹೊರಗಿದ್ದರೂ ನಾನೇನಾದರೂ ಕೆಲಸ ಮಾಡಿಯೇ ಹೊಟ್ಟೆ ತುಂಬಿಕೊಳ್ಳಬೇಕಲ್ಲವೆ? ಅದನ್ನೇ ಸೆರೆಮನೆಯಲ್ಲಿ ಮಾಡಿದರೆ ತಪ್ಪೇನು?" ಇನ್ನು ಜನತೆಯ ದೃಷ್ಟಿಯಿಂದ ನಾನು ಅಪರಾಧಿಯಾಗಿರಬಹುದು. ಅದಕ್ಕೆ ನಾನು ಯೋಚನೆಯನ್ನೇ ಮಾಡುವದಿಲ್ಲ. ನನ್ನನ್ನು ಬಾಧಿಸುತ್ತಲಿದ್ದುದು ಒಂದೇ ಒಂದು ವಿಚಾರ. ಏನೆಂದರೆ, ನನ್ನವರನ್ನು-ನನ್ನ ಪ್ರೀತಿಯವರನ್ನು, ನನ್ನ ದ್ವಿತೀಯ ಪ್ರಾಣವೇ ಆದ ನನ್ನ ಪ್ರೀತಿಯ ಮಡದಿಯನ್ನು ಕಾಣಲೂ ಅವಕಾಶವಿಲ್ಲದೇ ಹೋಯಿತಲ್ಲ! ಎಂಬ ವಿಚಾರವೊಂದರಿಂದಲೇ ನಾನು ತೀರ ದುಃಖಿತನಾಗಿದ್ದೆನು; ಸೆರೆಯಿಂದ ಪಾರಾಗಲು ಯತ್ನಿಸುತ್ತಲಿದ್ದೆನು.

ಮಧುಕರ, ಈಗ ನೀನು ಅದೆಲ್ಲವನ್ನೂ ಮರೆತು ಬಿಡಬೇಕಾಗಿಬಂದಿದೆ.

ನೀವು ಹೇಳುತ್ತಲಿರುವಿರೆಂದೇ ನಾನು ನಂಬಬೇಕಾಗಿದೆ.

ಮಧುಕರ, ನಿಜ ಸಂಗತಿಯನ್ನೇ ನಾನು ಹೇಳಿರುವೆನು; ಮತ್ತು ಅದು ಬೇಗನೆ ಬಯಲಿಗೆ ಬಂದೇ ಬರುವದು.

ಮಧುಕರನು ಬಹಳ ಖಿನ್ನನಾದನು. ತಾನು ತನ್ನ ಜೀವನ ಸರ್ವಸ್ವವೇ ಎಂದು ನಂಬಿದ್ದ, ಆದರ್ಶ ಆರ್ಯ ಲಲನೆಯೆಂದು ಬಹಳ ಆದರದಿಂದ ಕಾಣುತಲಿದ್ದ, ತನ್ನ ಭಾವೀ ಸೌಖ್ಯವೆಂದು ಗಟ್ಟಿಯಾಗಿ ತಿಳಿದುಕೊಂಡಿದ್ದ ಕಮಲಿನಿಯು ವಿಶ್ವಾಸ ಘಾತಮಾಡಲು ಅವನಿಗೆ ಬಹಳ ಖೇದವಾಯಿತು.

ಕಮಲಿನಿಯ ಕಮನೀಯ ಮುಖವು ಅವನ ಕಣ್ಣೆದುರು ಕಟ್ಟಿತು.

ಅಂದು ಮುಂಬಯಿಗೆ ಹೋದಾಗ್ಗೆ, ಅಕಸ್ಮಾತ್ತಾಗಿ ಇಂದುಶೇಖರನ ಗೆಳೆತನ ಕೂಡಿತು. ಹಣವಂತರ ಮಗನಿದ್ದರೂ ಅವನ ಸರಳಸ್ವಭಾವ,

ಗರ್ವವಿಲ್ಲದ ನಡತೆಗಳನ್ನು ನೋಡಿ ಅವನಿಗೆ ವಿಸ್ಮಯವೇ ಎನಿಸಿದ್ದಿತು ಅವನು ಅನೇಕ ಸಲ ತನ್ನ ಮನೆಗೆ ಬರಲು ಮಧುಕರನಿಗೆ ಆಗ್ರಹ ಮಾಡಿದ್ದರೂ ಕೇವಲ ದಾಕ್ಷಿಣ್ಯದ ಮೂಲಕ ಹೋಗಿರಲಿಲ್ಲ. ಆ ಸಮಯದಲ್ಲಿ ಒಂದೇ ಸಲ ಅವನು ಕಮಲಿನಿಯನ್ನು ನೋಡಿದ್ದನು. ಆಗ್ಗೆ ಕಮಲಿನಿ ಹೈಸ್ಕೂಲಿನ ವಿದ್ಯಾರ್ಥಿನಿಯಿದ್ದಳು. ಆಕೆಯ ಆ ಅಂದವಾದ ವೇಷ, ಸುಂದರವಾದ ಗೌರ ಕಾಯ, ತುಂಬು ಯೌವನ, ಹಸನ್ಮುಖ ಇವುಗಳು ಅವನನ್ನು ಬಹಳವಾಗಿ ಆಕರ್ಷಿಸಿದ್ದವು ಆಕೆಯೊಡನೆ ಮಾತುಗಳನ್ನಾದರೂ ಆಡಿದ್ದನು. ಅಷ್ಟರಿಂದಲೇ ಆಕೆಯ ಕುಶಾಗ್ರ ಬುದ್ಧಿಯನ್ನೂ ಜನರ ಮನವೊಲಿಸುವ ಮೃದು ನುಡಿಗಳನ್ನೂ ಚನ್ನಾಗಿ ಮನಗಂಡಿದ್ದನು ಆಂಗ್ಲ ಶಿಕ್ಷಣ ಹೊಂದುತ್ತಲಿದ್ದರೂ ಪುರುಷರನ್ನು ತುಚ್ಛೀಕರಿಸುವ ಆಧುನಿಕ ತರುಣಿಯರ ಗುಣವು ಆಕೆಯಲ್ಲಿ ಅಲ್ಪವಾದರೂ ತೋರಿ ಬರಲಿಲ್ಲ. ತಾನು ಸ್ವತಃ ಶ್ರೀಮಂತಳಿದ್ದರೂ ಬಡವನೇ ಆದ ಮಧುಕರನನ್ನು ಬಹಳವಾಗಿ ಆದರಿಸಿದ್ದಳು. ಮಧುಕರನ ಮನಸ್ಸು ಆ ಸಮಯದಲ್ಲಿಯೇ ಆಕೆಯಲ್ಲಿ ಸಂಪೂರ್ಣವಾಗಿ ನೆಟ್ಟದ್ದಿತು, ಆದರೆ ಅಲಭ್ಯ ವಸ್ತುವೆಂದು ಔದಾಸೀನ್ಯ ತಳೆದು, ಅತ್ತ ಮನಸ್ಸನ್ನು ಬಹಳವಾಗಿ ಹರಿ ಹಾಯಗೊಡಲಿಲ್ಲ.

ಸುಬ್ಬಣ್ಣನವರು ಕಮಲಿನಿಯ ಕಪಟ ಸಂಗತಿ ತಿಳುಹಲು ಅವನ ಕಣ್ಣೆದುರು ಕಮಲಿನಿಯು ಕೂಡುವ ವರೆಗಿನ ಜೀವನವು ಬಂದು ನಿಂತಿತು. ಚಲಚ್ಚಿತ್ರಪಟದಂತೆ ಹಿಂದಿನ ನೋಟಗಳು ಮರೆಯಾಗಲು, ಮಧುಕರನು ಮತ್ತೊಂದು ಸಲ ಮುಂಬಯಿಗೆ ಹೋದಾಗಿನ ಚಿತ್ರ ಬಂದು ನಿಂತಿತು

ಮಧುಕರನು ಆ ಸಲ ಮುಂಬೈಗೆ ಹೋದಾಗ್ಗೆ ಕಮಲಿನಿಯ ಮಧುರ ಸ್ಮರಣೆ ಅವನ ಮನದಲ್ಲಿಯೇ ಇದ್ದಿತು. ಕಮಲಿನಿಯ ಕಮಲ ಕುಸುಮದಂತಹ ಕಮನೀಯ ಮುಖವನ್ನೇ ಸ್ಮರಿಸುತ್ತ ಪೇಟೆಯೊಳಗೆ ಹೊರಟಾಗ ಅಕಸ್ಮಾತ್ತಾಗಿ ಇಂದುಶೇಖರ ಕೂಡಿದನು; ಆದರೆ ಅದೆಷ್ಟು ಮಾರ್ಪಾಟು! ಉಲ್ಲಸಿತ ವೃತ್ತಿಯ, ಹಸನ್ಮುಖದ ತರುಣ ಇಂದುಶೇಖರ ದೈನ್ಯದ ಮೂರುತಿಯೇ ಆಗಿದ್ದ! ಔದಾಸೀನ್ಯವು ಅವನಲ್ಲಿ ಪೂರ್ಣ ಆಶ್ರಯವನ್ನೇ ಪಡೆದಿದ್ದಿತು. ದುಃಖವು ಮುಖದಲ್ಲಿ ಮನೆ ಮಾಡಿದ್ದಿತು, ಅವನ ಮುಖಮುದ್ರೆಯು ಮುದುಕನಂತಾಗಿದ್ದಿತು, ಕಣ್ಣು ಒಳಸೇರಿದ್ದವು. ಗಲ್ಲಗಳು ಪಚ್ಚೆಯಾಗಿದ್ದುವು. ಮೈ ಮೇಲೆ ಯಾವಾಗಲೂ ಇಸ್ತ್ರೀ ಅರಿವೆಗಳನ್ನೇ ಧರಿಸುತ್ತಿದ್ದ ಅವನು ಅಂದು ಮಾಸಿದ ಉಡುಪು ಧರಿಸಿದ್ದನು. ಯಾವದೋ

ಒಂದು ಭಯಂಕರ ವಿಪತ್ತಿಗೆ ಗುರಿಯಾಗಿದ್ದನೆಂದು ಯಾರು ಹೇಳದಿದ್ದರೂ ತಾನಾಗಿಯೇ ತಿಳಿಯುವಂತಿದ್ದಿತು.

ಮಧುಕರನಿಗೆ ಅವನಲ್ಲಾದ ಮಾರ್ಪಾಟು ನೋಡಿ ಬಹಳ ವಿಷಾದ ವಾಯಿತು. ಅವನನ್ನು ಅಂತಹ ಪರಿಸ್ಥಿತಿಯಲ್ಲಿ ನೋಡಿ ತೀರ ಖಿನ್ನ ನಾದನು. ಅವನ ಹೃದಯವು ಕರಗಿ ನೀರಾಯಿತು. ಆಗ್ಗೆ ಮಧುಕರನು ಸಂತೈಸುವ ಸ್ವರದಲ್ಲಿ:-ಇಂದುಶೇಖರ, ನೀನು ಅದಾವದೋ ಒಂದು ಭಯಂ ಕರ ವಿಪತ್ತಿಗೆ ಗುರಿಯಾದಂತೆ ತೋರುತ್ತದೆ? ಎಂದು ಕೇಳಿದನು.

ಮಧುಕರನು ಇಷ್ಟು ಮಾತನಾಡಿಸುತ್ತಲೇ ಇಂದುಶೇಖರನ ಕಣ್ಣೊಳ ಗಿಂದ ಅಶ್ರುಗಳು ದಳ ದಳನೆ ಸುರಿಯಹತ್ತಿದುವು. ಕಂಠವು ಬಿಗಿದು ಹೋಯಿತು. ಅವನ ಮುಖದಿಂದ ಮಾತುಗಳೇ ಹೊರಡದಾದವು.

ಮಧುಕರನು ಅವನನ್ನು ಪ್ರೇಮದಿಂದ ಕೈಹಿಡಿದು ಅಲ್ಲಿಯೇ ಒಂದೆಡೆ ಯಲ್ಲಿ ಕುಳ್ಳಿರಿಸಿದನು. ಬಹಳ ವೇಳೆಯವರೆಗೆ ಇಂದುಶೇಖರನ ಮುಖದಿಂದ ಮಾತುಗಳೇ ಹೊರಡಲಿಲ್ಲ. ಅವನು ಖಿನ್ನ ಮುದ್ರೆಯಿಂದ ಮಧುಕರನ ಮುಖವನ್ನೇ ನೋಡುತ್ತ ಕುಳಿತುಬಿಟ್ಟನು.

ಇಂದುಶೇಖರನ ಅವಸ್ಥೆಯನ್ನು ನೋಡಿ ಮಧುಕರನಿಗೆ ಬಹಳ ಕಳ ವಳವಾಯಿತು. ತನ್ನ ಸರ್ವಸ್ವವನ್ನಿತ್ತಾದರೂ ಅವನನ್ನು ಸಂತೈಸಬೇಕೆಂದು ನಿರ್ಧರಿಸಿ:-ಇಂದುಶೇಖರ, ಬಂದದ್ದಕ್ಕೆ ಒಲ್ಲೆನೆಂದರೆ ಬಿಡದು. ಅದರಲ್ಲಿಯೆ ಒಂದು ದಾರಿಯನ್ನು ಅರಿಸಬೇಕಲ್ಲದೆ ಸುಮ್ಮನೆ ದುಃಖಿಸಿದರೆ ಅದರಿಂದ ಏನೂ ಲಾಭವಿಲ್ಲ, ಎಂದು ಹೇಳಿದನು.

ಮಧುಕರ, ದುರ್ಧರವಾದ ಸಂಕಟಕ್ಕೆಸಿಲುಕಿರುವೆವು. ನಾಳಿನ ಅನ್ನಕ್ಕೆ ಕೂಡ ನಮ್ಮಲ್ಲಿ ಏನೂ ಇಲ್ಲ, ಎಂದು ನುಡಿದು ತನ್ನ ದುಃಖಕಥೆಯನ್ನು ಪೂರ್ಣವಾಗಿ ವಿವರಿಸಿದನು. ಅದನ್ನು ಕೇಳಿ ಮಧುಕರನಿಗೆ ಬಹಳ ದುಃಖ ವಾಯಿತು ಅವನಿಗೆ ಇಂದುಶೇಖರನ ದುಃಖಕ್ಕಿಂತಲೂ ಕಮಲಿನಿಯ ಅವ ಸ್ಥೆಗೆ ಬಹಳ ಕ್ಲೇಶವೆನಿಸಿತು. ಜಿಂಕೆಯ ಮರಿಯಂತೆ ಯಾವಚಿಂತೆ ಪಾಪಗಳ ಯೋಚನೆಯಲ್ಲಿಯೂ ಇಲ್ಲದೆ ಸದೈವ ಹಾಸ್ಯ ಮುದ್ರೆಯಿಂದ ವಿವರಿಸುತ್ತಲಿದ್ದ ಆ ಸುಂದರಿ, ಸುಕೋಮಲೆ, ಸುಕುಮಾರಿಯ ಅವಸ್ಥೆಯ ಬಗ್ಗೆ ಅವನು ಯೋಚಿಸಹತ್ತಿದನು. ಆ ಸುಕುಮಾರಿಯು ಬಳಲಿ ಬೆಂಡಾಗಿರಬಹುದಲ್ಲವೆ? ಯಾವಾಗಲೂ ಹಾಸ್ಯವು ನಾಟ್ಯವಾಡುತಲಿದ್ದ ಮುಖದಲ್ಲಿ ಚಿಂತೆ ಮನೆಮಾ ಡಿರಬಹುದಲ್ಲವೆ? ಆಕೆಯ ಮನೋಹರ ಗೌರವರ್ಣವು ದುಃಖದಿಂದ ಬಿಳು ಪಾಗಿರಬಹುದಲ್ಲವೆ? ತಾರುಣ್ಯದಿಂದ ಪುಷ್ಪವಾಗಿದ್ದ ಆಕೆಯ ಮಧುರ ರೂಪವು

ದಾರುಣ ದುಃಖದಿಂದ ಕೃಶವಾಗಿ ಹೋಗಿರಬಹುದಲ್ಲವೆ? ಕಣ್ಣೊಳಗಿನ ಆ ತೀರ ಮಧುರ-ಮನೋಹರ ಆಕರ್ಷಕ ತೇಜವು ಮರೆಯಾಗಿ ಹೋಗಿರಬಹುದಲ್ಲವೆ?....ಇತ್ಯಾದಿ ವಿಚಾರಗಳಿಂದ ಮಧುಕರನಿಗೆ ಬಹಳ ತಳಮಳವಾಯಿತು. ಭಯಂಕರ ವಿಪತ್ತಿನ ದಾಹದಿಂದ ದಗ್ಧಳಾದ ಆ ತರುಣಿಯನ್ನು ಸಂತೈಸುವದು ಶಕ್ಯವಾದರೆ, ಶಕ್ಯವಿದ್ದ ಉಪಾಯಗಳಿಂದ ಆಕೆಯನ್ನು ಸುಖಿಯಾಗ ಮಾಡಲೆತ್ನಿಸುವದು ತನ್ನ ಕರ್ತವ್ಯವೇ ಎಂದು ಇಂದುಶೇಖರನಿಗೆ:-ಇಂದುಶೇಖರ, ಸಂಪತ್ತು-ವಿಪತ್ತುಗಳು ದೈವಾಧೀನವಾದುವು. ಅವುಗಳು ಪ್ರತಿಯೊಬ್ಬನಿಗೂ ಬರುವದುಂಟು. ಅವುಗಳಿಗೆ ಎದೆಗುಂದದೆ ಮುಂದೊರೆಯುವದು ನಮ್ಮಗಳ ಕರ್ತವ್ಯ. ಆಗಲಿ. ನಿನಗಿಂತಲೂ ನಿನ್ನ ಭಗಿನಿ ಬಹಳ ದುಃಖಿತಳಾಗಿರಬಹುದು. ನಡೆ; ಸ್ತ್ರೀ. ಅದರಲ್ಲಿ ಜಗತ್ತಿನ ದುಃಖಗಳ ಅನುಭವವಿಲ್ಲದ ಸುಕುಮಾರಿ ಆಕೆಯನ್ನು ನಾವೀರ್ವರೂ ಕೂಡಿ ಸಂತೈಸುವದು ನಮ್ಮ ಕರ್ತವ್ಯ. ಆದುದರಿಂದ ನಡೆ, ಮನೆಗೆ ಹೋಗೋಣ. ಎಂದನು.

ಮಧುಕರನು ಮನೆಗೆ ಹೋಗುವ ಬಗ್ಗೆ ಮಾತು ತೆಗೆಯಲು ಇಂದುಶೇಖರನಿಗೆ ಬಹಳ ವಿಷಾದವಾಯಿತು. ಅವನು ಗದ್ಗದಸ್ವರದಿಂದ:-ಮಿತ್ರಾ, ಮಧುಕರಾ, ನಿನಗೆ ಮನೆಗೆ ಬಾ, ಎಂದು ಯಾವ ಮುಖದಿಂದ ಹೇಳಲಿ? ನಿನ್ನನ್ನು ನಾನು ಯಾವ ರೀತಿಯಿಂದ ಆದರಿಸಬಲ್ಲೆ? ತಿನ್ನಲಿಕ್ಕೆ ಅಶನವೇ ಇಲ್ಲದ ನನ್ನ ಮನೆಯಲ್ಲಿ ನಿನಗೆ ಏನು ಉಪಚಾರ ಸಿಕ್ಕಬಹುದು....?

ಮಧುಕರನಿಗೆ ತಡೆಯದಾಯಿತು. ಅವನು ತನ್ನ ಹಸ್ತವನ್ನು ಅವನ ತಲೆಯಮೇಲಿಟ್ಟು:-ಇಂದುಶೇಖರ, ನನ್ನ ಬಗ್ಗೆ ನೀನು ತೀರಾ ತಪ್ಪು ಕಲ್ಪನೆ ಮಾಡಿಕೊಂಡಿರುವೆ. ನೀನು ಪುರುಷನು; ಈ ಭಯಂಕರ ವಿಪತ್ತನ್ನು ಹೇಗಾದರೂ ಸಹನ ಮಾಡಿಕೊಳ್ಳಬಲ್ಲೆ; ಆದರೆ ಕೇವಲ ಬಾಲಿಕೆ-ಕಮಲಿನಿಯ ಅವಸ್ಥೆ ತೀರಾ ಶೋಚನೀಯವಾಗಿರಬಹುದು. ಆಕೆಯನ್ನು ಸಂತೈಸುವದು ನಮ್ಮ ಮೊದಲಿನ ಕೆಲಸ, ಅನ್ಯ ಯೋಚನೆಗೆ ಅವಕಾಶವೇ ಇಲ್ಲ. ಬೇಗನೆ ಏಳು. ನನ್ನ ಮನಸ್ಸು ಕಮಲಿನಿಯ ಸಂತೈಕೆಗೆ ಬಹಳ ಆತುರವಾಗಿದೆ, ಎಂದು ಕೈ ಹಿಡಿದು ಇಂದುಶೇಖರನನ್ನೆಬ್ಬಿಸಿದನು.

ಇಂದುಶೇಖರನು ತೀರಾ ಮನಸ್ಸಿಲ್ಲದೆ ಬಹಳ ದುಃಖದಿಂದ ಹತಾಶನಾಗಿ ಎದ್ದು ಹೊರಟನು. ಮಧುಕರನು ಕಮಲಿನಿಯ ಶೋಕಸಂತಪ್ತ ಸ್ಥಿತಿಯನ್ನು ಕಲ್ಪಿಸುತ್ತ ಹೊರಟನು. ಮನೆ ಮುಟ್ಟುತ್ತಲೇ ಕಮಲಿನಿಯ ಅವಸ್ಥೆ ನೋಡಿ ಮಧುಕರನ ಕೈಕಾಲೇ ಕಳಚಿದಂತಾದುವು.

ಮಾನೀ ಸ್ವಭಾವದ ಆ ತರುಣಿ ಮೈ ಮೇಲಿನ ವಸ್ತ್ರದ ಪರಿವೆಯಿಲ್ಲದೆ ಬಿದ್ದು ಬಿಟ್ಟಿದ್ದಳು. ಅಂದವಾಗಿ ಉಕ್ಕಿ ಹರಿಯುತ್ತಲಿದ್ದ ಆಕೆಯ ಕೂದಲು ಅಸ್ತವ್ಯಸ್ತವಾಗಿ ಬಿದ್ದು ಬಿಟ್ಟಿದ್ದವು ಮುಖವು ಮ್ಲಾನವಾಗಿದ್ದಿತು. ಸ್ವಲ್ಪೇ ದಿನಗಳಲ್ಲಿ ಆದರೂ ದುಃಖವು ತನ್ನ ಪ್ರಭಾವವನ್ನು ಸಂಪೂರ್ಣವಾಗಿ ತೋರಿಸಿದ್ದಿತು. ಕ್ಷಣಕ್ಕೊಮ್ಮೆ ನಿಟ್ಟುಸಿರು ಬಿಡುತಲಿದ್ದಳು ಮಧುಕರನನ್ನು ನೋಡುತ್ತಲೇ ಬಿಕ್ಕಿ ಬಿಕ್ಕಿ ಅಳಹತ್ತಿದಳು.

ಮಧುಕರನಿಗೆ ಆಕೆಯನ್ನು ಸಂತೈಸಲು ಬಾಯಿಯೇ ಬಾರದಾಯಿತು ಆಕೆಯ ಆ ಕ್ಲೇಶದಿಂದ ಕೃಶವಾದ ಅವಸ್ಥೆಯನ್ನು ನೋಡಿ ಅವನು ಮೂಕನೇ ಆಗಿ ಹೋದನು ತನ್ನ ಅಶ್ರುಗಳನ್ನು ಒರೆಸುತ್ತ:ಕಮಲಿನಿ, ಕಾತರಳಾಗಬೇಡ ನಿಮಗೆ ಬಂದ ವಿಪತ್ತು ದಾರುಣವಾದುದು. ಅದು ದೈವಲಭ್ಯವಾದುದು, ಆದರೂ ಮುಂದೆ ಸಾಗಲೇಬೇಕು .......

ಕಮಲಿನಿ ದುಃಖಕಂಪಿತ ಸ್ವರದಿಂದ:-ಮಧುಕರರಾಯರೇ, ಇನ್ನು ಈ ಜಗತ್ತಿನಲ್ಲಿನಮ್ಮದೆನ್ನುವದು ಏನಿದೆ? ನಾವೀರ್ವರೂ ಅಣ್ಣ-ತಂಗಿಯರು ಅನಾಥರಾಗಿರುತ್ತೇವೆ, ದಿಕ್ಕಿಲ್ಲದೆ ನಿಂತಿರುತ್ತೇವೆ ದೇವರು ನಮ್ಮನ್ನು ನಡು ಸಮುದ್ರದಲ್ಲಿ ಬಿಸುಟಿಬಿಟ್ಟಿರುವನು. ಇನ್ನು ಪಾರುಗಾಣುವದೇ ಶಕ್ಯವಿಲ್ಲ ಅನ್ನನ್ನಗತಿಕರಾಗಿ ಒಂದು ದಿನ ಸತ್ತು ಹೋಗುವದರ ಹೊರತು ನಮಗೆ ಬೇರೆ ದಾರಿಯೇ ಉಳಿಯಲಿಲ್ಲ, ಎಂದು ನುಡಿದಳು

ಮಧುಕರನಿಗೆ ಅವರಾ ಅಸಹಾಯ ಸ್ಥಿತಿಯನ್ನು ನೋಡಿ ಬಹಳ ಖೇದವೆನಿಸಿತು. ಅವನು –ಕಮಲಿನಿ, ವಿಪತ್ತಿನ ಭಯಂಕರವಾದ ಕಗ್ಗತ್ತಲೆ ಕವಿದುದರಿಂದ ಮುಂಗಾಣದವರಾಗುವದು ಸಹಜ, ಆದರೂ ನಾವು ತಡವರಿಸುತ್ತ ಮುಂದೊರೆಯಲೇ ಬೇಕು, ಎಂದು ಸಂತೈಸುವ ಸ್ವರದಲ್ಲಿ ನುಡಿದ

ಕೈ ಹಾಕಿದತ್ತ ಸೀರೇ ನೀರಾಗಿ ನಿಲ್ಲಲು ನೆಲವೇ ಇಲ್ಲವಾಗಿರಲು ಎಲ್ಲಿ ಹೋಗಬಲ್ಲೆವು? ಆಶ್ರಯವು ಇಲ್ಲವೇ ಇಲ್ಲ ಇನ್ನು ಈ ಭೂಮಂಡಲದಲ್ಲಿ ನಮ್ಮನ್ನು ಕೇಳುವವರಾರು? ನಾವು ಜನರಿಗೆ ಮೋರೆಯನ್ನಾದರೂ ಹೇಗೆ ತೋರಿಸಬೇಕು? ಎಂದು ದುಃಖದಿಂದ ಮಾತನಾಡಿದಳು

ಕಮಲಿನಿ, ಈ ದಾರುಣ ದುಃಖದಿಂದ ನೀವಿಬ್ಬರೂ ಕಂಗೆಟ್ಟು ಹೋಗಿರುವಿರಿ ಕೆಲವು ದಿನಗಳ ಮಟ್ಟಿಗೆ ನನ್ನೊಡನೆ ಬನ್ನಿರಿ, ಮತ್ತು ...

ಛೆ, ಛೆ! ದುರ್ದೈವಿಗಳಾದ ನಾವು ನಿಮಗೆ ತೊಂದರೆ ಕೊಡುವದು ಒಳಿತಾಗಲಾರದು, ಇಂದ-ಶೇಖರನು ನಡುವೇ ಮಾತನಾಡಿವನು.

ಬೇಡ; ಮಧುಕರರಾಯರೆ, ನಮ್ಮನ್ನು ಗಂಟುಹಾಕಿಕೊಂಡರೆ ನಿಮಗೆ

ಸ್ವಲ್ಪಾದರೂ ಸುಖವಾಗಲಾರದು ಎಂದು ಕಮಲಿನಿ ದುಃಖದಿಂದಂದಳು.

ಇಂದುಶೇಖರ ನನ್ನನ್ನು ಪರಕೀಯನೆಂದು ಗ್ರಹಿಸಬೇಡ. ನಿಮ್ಮ ಸಮೀಪದ ಒಬ್ಬ ಆಪ್ತನೇ ಎಂದು ತಿಳಿದುಕೊಂಡು ಬನ್ನಿರಿ. ಕಮಲಿನಿ, ಅನ್ಯಥಾ ಭಾವಿಸಬೇಡ. ನಾನೇನ ನಿಮ್ಮನ್ನು ನಿಮ್ಮ ಪೂರ್ವಸ್ಥಿತಿಯಂತೆ ಉತ್ತಮ ತರಗತಿಯಲ್ಲಿರಿಸಲು ಶಕ್ತನಾಗಲಾರೆ; ಆದರೂ ಅನ್ನವಸ್ತ್ರಕ್ಕೆಕೊರತೆ ಯಾಗಲಿಕ್ಕಿಲ್ಲ ನಿಮ್ಮ ಪುಣ್ಯದಿಂದ ನನಗೆ ಅಷ್ಟು ದೊರೆಯುತ್ತಲಿದೆ....

ಮಧುಕರರಾಯರೇ, ನಿಜವಾಗಿಯೂ ನೀವು ದೇವಪುರುಷರು ಈ ಪಾಪೀಲೋಕದಲ್ಲಿ ನಿಮ್ಮಂತಹ ಉದಾರರು ಎಲ್ಲಿಯೂ ಸಿಕ್ಕಲಾರರು. ನಮ್ಮ ತಂದೆಯಿರುವಾಗ್ಗೆ ಅವನಿಂದ ಅಗಣಿತ ಲಾಭ ಪಡೆದ ಒಬ್ಬರಾದರೂ ಈಗ ಇತ್ತ ಸುಳಿಯುವದಿಲ್ಲ ಕೂಡ. ನಮಗೆ ಏನೂ ಸಂಬಂಧವಿಲ್ಲದ, ನಮ್ಮಿಂದ ಕಿಂಚಿತ್ತಾದರೂ ಲಾಭ ಹೊಂದದ ನೀವು ನಮಗೆ ಹೊರಲಾರದಷ್ಟು...

ಛೆ! ಕಮಲಿನಿ, ನೀನು ಸುಮ್ಮನೆ ಏನಾದರೂ ಅನ್ನುತ್ತಲಿರುವೆ. ನಾನು ಮಾಡುವದು ತೀರಾ ತುಸು ಮಧುಕರನು ಕಮಲಿನಿಯ ಕೃತಜ್ಞತೆಯಿಂದ ತುಂಬಿ ಸೂಸುತ್ತಲಿದ್ದ ಕಮನೀಯ ಕಣ್ಣುಗಳನ್ನು ನೋಡುತ್ತ ನುಡಿದನು.

ಆತ್ಮಶ್ಲಾಘನೆಯು ದೊಡ್ಡವರಿಗೆ ಸೇರುವದಿಲ್ಲ. ಮಧುಕರರಾಯರೇ, ನಡುನೀರಲ್ಲಿ ನಿಂತ ನಮ್ಮನ್ನುಕೈಗೊಟ್ಟು ಕರೆದಿರುವಿರಿ. ಅನ್ನನ್ನಗತಿಕರಾದ ನಮ್ಮನ್ನು ಅನ್ನಕ್ಕೆ ಹಚ್ಚಲಿರುವಿರಿ. ಅಸಹಾಯರಾಗಿ ದುಃಖದಾಹದಿಂದ ಕಂಗೆಟ್ಟು ಹೋದ ನಮಗೆ ಸಹಾಯಾಮೃತ ನೀಡಿದಿರಿ....

ನಾನೇನು ಮಾಡಲು ಸಮರ್ಥನು? ಎಲ್ಲವನ್ನೂ ಪರಮಾತ್ಮನೇ ಮಾಡುವನು.

ಹೀಗೆ ಆದೆಷ್ಟೋ ಬಗೆಯಿಂದ ಸಂತೈಸಿ ಮಧುಕರನು ಅವರನ್ನು ಕುಸುಮಪುರಕ್ಕೆ ಕರತಂದಿದ್ದನು ಅಲ್ಪಾವಕಾಶದಲ್ಲಿಯೇ ಕಮಲಿನಿಯ ಸರಳವೃತ್ತಿ, ಗೃಹಕಾರ್ಯ ದಕ್ಷತೆಗಳನ್ನು ನೋಡಿ ವಿಸ್ಮಯಚಕಿತನಾದನು. ಕಮಲಿನಿಯನ್ನು ನೋಡುತ್ತ ಹೋದಂತೆ ಆಕೆ ಸದ್ಗುಣಗಳ ಖಣಿಯೇ ಇರುವಳೆಂದು ಅವನಿಗೆ ದೃಢವಾಗಹತ್ತಿತು. ತನಗ್ಯೆಆಕೆ ತಕ್ಕವಳೇ ಇರುವಳೆಂದು ಅವನಿಗೆ ನಂಬಿಗೆಯಾಗಿ ಹೋಯಿತು ಹೀಗೆ ಅವನ ಮನಸ್ಸು ಕಮಲಿನಿ ಯಲ್ಲಿ ತೊಡಗಹತ್ತಿತು ಕಮಲಿನಿಯನ್ನು ತನ್ನ ಪತ್ನಿಯಾಗಿ ಮಾಡಿಕೊಂ ಡರೆ ಅದರಿಂದ ತನಗೂ, ತನ್ನಿಂದ ಆಕೆಗೂ ಸುಖವಾಗುವದೆಂದು ಯೋಚಿಸಿ ದನು ಆಪರಂತೆ ಕಮಲಿನಿಯ ಮನವನ್ನರಿಯಬೇಕೆಂದು ಮಾತುತೆಗೆ ಯಲು ಒಂದುಸಲ ಕಮಲಿನಿಯ ಬಳಿಗೆ ಹೋದನು.

ಆಗಲೇ ಕಮಲಿನಿ ಇಂದುಶೇಖರರಲ್ಲಿ ಬಹಳ ಸಲಿಗೆಯಿದ್ದಿತು. ಕಮಲಿನಿಯಾದರೂ ಮಧುಕರನನ್ನು ಮದುವೆಯಾಗಲು ಸಿದ್ಧಳಿದ್ದಂತೆ ತನ್ನ ಆಚರಣೆಯಿಂದ ತೋರಿಸಿದ್ದಳು. ಅಂತೆಯೇ ಮಧುಕರನು ಆಕೆಯೊಡನೆ ಮಾತು ತೆಗೆಯಲು ಸಿದ್ಧನಾದನು.

ಕಮಲಿನೀ, ದೈವಯೋಗವು ವಿಚಿತ್ರವಾದುದು ನೋಡು?

ಅದರ ಅನುಭವವೇ ದೊರೆಕಿಲ್ಲವೇ?

ಅಹುದು. ಒಂದು ವೇಳೆಯಲ್ಲಿ ಒಳ್ಳೆಯ ಶ್ರೀಮಂತಳಿದ್ದ ನಿನ್ನ ತಂದೆ ಮರಣ ಹೊಂದಬೇಕು, ಆಗ್ಗೆ ನಿಮ್ಮ ಸಂಪತ್ತಿಯೆಲ್ಲವೂ ಹೂರಟು ಹೋಗಿ ಬಡವರಾಗಬೇಕು, ಮತ್ತು ಅದೇ ಸಮಯಕ್ಕೆ ನಾನು ಅಲ್ಲಿ ಬಂದು ನನಗೂ ನಿನಗೂ ಕೂಡಬೇಕು,ಎಂದರೆ ಒಳ್ಳೆಯ ವಿಚಿತ್ರವಲ್ಲವೆ?

ನಿಜವಾಗಿಯೂ ಮಧುಕರರಾಯರೇ, ನಮ್ಮನ್ನು ಅಂತಹ ವಿಪತ್ತಿಗೆ ಗುರಿಮಾಡಿದ ದೈವವು ನಿಮ್ಮನ್ನಾದರೂ ಕೂಡಿಸಿಕೊಟ್ಟಿತು.

ನಾನಿಲ್ಲದಿದ್ದರೆ ಇನ್ನಾದರೂ ಮಹಾರಾಜರು ಬಂದು ಸಹಾಯ ಮಾಡಿಯೇ ಮಾಡುತ್ತಲಿದ್ದರು. ಜಗತ್ತಿನಲ್ಲಿ ಅನೇಕ ಅನಾಥರು ಸಹಾಯ ಹೊಂದಿಯೇ ಹೊಂದುತ್ತಲಿರುವರು. ಇದರಲ್ಲಿ ನನ್ನದೇನು ಹೆಚ್ಚಳ?

ಮಧುಕರರಾಯರೇ, ಒಂದು ವೇಳೆ ಅನ್ಯರ ಸಹಾಯ ಸಿಕ್ಕರೂ ಸಿಗಬಹುದು; ಆದರೆ ಅನ್ಯರು ನಿಮ್ಮಂತೆ ನಮ್ಮವರಾಗಬಲ್ಲರೆ?

ಕೆಲವು ಕಾಲ ಕಳೆದಂತೆ ಎಲ್ಲವೂ ಸರಿಹೋಗುತ್ತಲಿದ್ದಿತು.

ಏನೇ ಆದರೂ ಈಗ ಆದ ಹಾಗೆ ಆಗಲು ಶಕ್ಯವಿಲ್ಲ        ಅದೇಕೆ?

ನಿಮ್ಮ ಸಹವಾಸದಲ್ಲಿ ನಮಗೆ ಸುಖವಾಗುತ್ತಲಿದೆ. ನಿಮ್ಮೊಡನೆ ಇರುವುದೆಂದರೆ ನನಗಂತೂ ಬಹಳ ಆನಂದವೆನಿಸುತ್ತದೆ ಒಂದು ರೀತಿಯಿಂದ ನೋಡಿದರೆ ನಮಗೊದಗಿದ ವಿಪತ್ತೇ ನಮಗೆ ಒಳಿತು ಮಾಡಿತೆನ್ನಬಹುದು.

ವಿಪತ್ತು ಒಳಿತು ಮಾಡಿದುದುಂಟೆ?        ನಮಗೆ ಮಾಡಿದೆ.

ಏನು ಹಿತ ಮಾಡಿತು ನಿಮಗೆ?

ನಾವು ನಮ್ಮ ಮುನ್ನಿನ ಸ್ಥಿತಿಯಲ್ಲಿಯೇ ಇದ್ದುದಾಗಿದ್ದರೆ ನಮಗೆ ನಿಮ್ಮ ಸಹವಾಸವೇ ದೊರಕುತ್ತಿರಲಿಲ್ಲ. ನಿಮ್ಮಂತಹ ಸಜ್ಜನರ ಸಹವಾಸ ದೊರೆಯಬೇಕಾದರೂ ಪೂರ್ವಪುಣ್ಯಬೇಕು.

ನಾನು ಏನೋ ಕಿಂಚಿತ್ತು ಸಹಾಯ ಮಾಡಿರಲು ನೀನು ಅದನ್ನೇ ಗುಡ್ಡದಷ್ಟು ಮಾಡುತ್ತಲಿರುವೆ.

ಮಧುಕರರಾಯರೇ, ನಿಜವಾಗಿಯೂ ನಿಮ್ಮ ಉಪಕಾರವು ಅಗಣಿತ

ವಾದುದಿದೆ. ಪ್ರತ್ಯುಪಕಾರ ಮಾಡುವದೇ ಏಕೆ, ನಿಮ್ಮ ಉಪಕಾರದಲ್ಲಿ ಅಲ್ಪವನ್ನಾದರೂ ತೀರಿಸಬೇಕೆಂದರೂ ಶಕ್ಯವಿಲ್ಲ.

ಏಕೆ ಶಕ್ಯವಿಲ್ಲ? ಮನಸ್ಸು ಮಾಡಿದರೆ ಅಸಾಧ್ಯವೇನೂ ಇಲ್ಲವೇ ಇಲ್ಲ.

ಅಂ, ಶಕ್ಯವಿದ್ದರೆ ಹೇಳಿರಿ ನಾನು ನನ್ನ ಸರ್ವಸ್ವವನ್ನರ್ಪಿಸಿ ನಿಮ್ಮ ಉಪಕಾರದಲ್ಲಿ ಸ್ವಲ್ಪವನ್ನಾದರೂ ತೀರಿಸಲು ಯತ್ನಿಸುತ್ತೇನೆ.

ಮಧುಕರನಿಗೆ ಕಮಲಿನಿಯ ಮನಸ್ಸು ತಿಳಿದು ಅತಿಶಯ ಆನಂದ ನಾಯಿತು ತನ್ನ ಇಷ್ಟವು ಸುಲಭವಾಗಿ ಕೈಗೂಡಿತೆಂದು ತಿಳಿದನು. ಅವನು ನಗುತ್ತ:-ಕಮಲಿನಿ, ಕೊಡಲು ಸಿದ್ಧಳಿರುವೆಯಾ? ಎಂದು ಕೇಳಿದನು.

ಮಧುಕರರಾಯರೇ ನಾನೀಗ ತೀರ ಅಸಹಾಯಸ್ಥಿತಿಯಲ್ಲಿರುತ್ತೇನೆ. ನನ್ನ ಬಳಿಯಲ್ಲಿ ಏನಿದೆ?

ಇದ್ದುದನ್ನೇ ಕೇಳುವೆನು, ಕೊಡುವೆಯಾ?

ಹೇಳಿರಿ, ಮಧುಕರರಾಯರೇ, ಹೇಳಿರಿ ನಿಮಗೆ ಏನು ಬೇಕೆಂಬು ದನ್ನು ಹೇಳಿರಿ ನನ್ನ ಕರದಲ್ಲಿದ್ದುದಾಗಿದ್ದರೆ .......

ಮಧುಕರನು ಬಹಳ ಹರ್ಷದಿಂದ ಕಮಲಿನಿಯ ಕೈ ಹಿಡಿದು:—ಕಮಲಿನೀ, ನನಗೆ ಬೇಕಾದುದು ನಿನ್ನ ಕರದಲ್ಲಿದ್ದುದಲ್ಲ; ಆದರೆ ಈ ಅಮೃತ ಮಯ, ಮೃದು ಮಧುರ ಕರವೇ, ಇದನ್ನೊಂದು ನನಗಿತ್ತರೆ ಸಾಕು; ನಾನು ಇನ್ನೇನೂ ಬೇಡುವದಿಲ್ಲ.

ಕಮಲಿನಿಗೆ ಮಧುಕರನ ಕರಸ್ಪರ್ಶದಿಂದ ಹರ್ಷೋನ್ಮಾದವಾಯಿತು. ಲಜ್ಜೆಯಿಂದ ಶರೀರ ಕಂಪಿಸಹತ್ತಿತು. ಕೆಳಮೊಗಳಾಗಿ ನೆಲವನ್ನೇ ನೋಡುತ್ತ ನಿಂತುಬಿಟ್ಟಳು.

ಮಧುಕರನು ಆಕೆಯ ಮನವನ್ನರಿತನು; ಆದರೂ ಬಾಯಿಯಿಂದಲೇ ಕೇಳಬೇಕೆಂದು ಯೋಚಿಸಿ:-ಕಮಲಿನಿ, ಹೇಳು ನೀನು ನನ್ನ ಅರ್ಧಾಂಗಿನಿ ಯಾಗುವೆಯಾ? ನನ್ನ ಮಡದಿಯಾಗಿ ನನ್ನ ಜೀವನವನ್ನು ಪಾವನಗೊಳಿ ಸುವೆಯಾ? ನನಗೆ ಇಹದಲ್ಲಿಯೇ ಸ್ವರ್ಗಸುಖವನ್ನು ಸೂರೆಗೊಳಿಸಲು ಸಹಾಯ ಮಾಡುವೆಯಾ?

ನಾಥಾ! ನಾನಿಂದು ಕೃತಾರ್ಥಳಾದೆನು ನಿಜವಾಗಿಯೂ ನಾನು ಪುಣ್ಯ ವತಿಯು, ಇಲ್ಲವಾದರೆ ಈ ಪಾದಗಳಲ್ಲಿ ನನಗೆ ಸ್ಥಳ ಸಿಕ್ಕಲು ಶಕ್ಯವೇ ಇಲ್ಲ.

ಕಮಲಿನಿ, ನನ್ನ ಮನದಿನಿಯಳಾಗಲು ಸಮ್ಮತಿಸುವೆಯಾ?

ಹೇಗೆ ಹೇಳಲಿ?

ಹೇಗಾದರೂ ಹೇಳು.

ಇದೊಂದು ಭಾಗ್ಯವೆಂದೇ ತಿಳಿಯುವೆನು. ನಿಜವಾಗಿಯೂ ನಮ್ಮ ತಂದೆಯಿರುವಾಗ್ಗೆ ನಿಮ್ಮನ್ನು ನೋಡಿದಾಗ್ಗೆನೇ ನನ್ನ ಮನಸ್ಸು ಈ ಪಾದ ಗಳಲ್ಲಿಯೇ ಕುಳಿತಿದೆ ಮುಂದೆ ಮತ್ತೊಂದು ಸಲ ಬಂದಾಗ್ಗೆ ಈ ಪಾದ ಪ್ರಾಪ್ತಿಯು ಸಲುವಾಗಿ ಯತ್ನಿಸಬೇಕೆಂದಿರುವಾಗ್ಗೆ ನಾನು ವಿಪತ್ತಿಗೆ ಸಿಲುಕಿ ದೆನು ಆದರಿಂದ ಈ ಪಾದವು ದೂರಾಯಿತೆಂದು ಹತಾಶಳಾಗಿದ್ದೆನು, ಆದರೆ ಪರಮಾತ್ಮನ ಅಂತಃಕರಣದಿಂದ ಪುನಃ ನನ್ನ ಇಚ್ಛಿತಪ್ರಾಪ್ತಿಯಾಯಿತು.

ಮಧುಕರನು ತಂದ್ರಿಯಲ್ಲಿಯೇ ಕುಳಿತಿದ್ದನು ಈ ಎಲ್ಲ ಸಂಗತಿ ಗಳೂ ಅವನ ಕಣ್ಣೆದುರು ಯಾವದೊಂದು ನಾಟಕದಂತೆ ನಡೆದಿದ್ದವು. ತನ್ನ ಮಧುಮಯ ಪೂರ್ವಸ್ಮೃತಿಯಲ್ಲಿಯೇ ಮಗ್ನನಾಗಿ ಕುಳಿತಿದ್ದನು ಇದರಂತೆ ಇನ್ನೂ ಎಷ್ಟೋ ಸಂಗತಿಗಳು ಅವನ ಕಣ್ಣೆದುರು ಬಂದು ನಿಂತವು. ಕಮ ಲಿನಿಯೊಡನೆ ತಾನು ವಿಹರಿಸಿದ ವಿಹಾರ, ಆಡಿದ ಮಾತುಗಳೆಲ್ಲವೂ ಮತ್ತೆ ಮತ್ತೆ ಸ್ಮರಣೆಯಾಗ ಹತ್ತಿದವು ತನ್ನ ಜೀವನದ್ದೇ ಆದ ಆ ವಿಷಾದಾಂತ್ಯ ನಾಟಕವು ಸುಬ್ಬಣ್ಣವರು ಕಮಲಿನಿಯ ಕಪಟವನ್ನು ಹೊರ ಹಾಕಿದ ವರೆಗೆ ಒರಲು ಅವನಿಗೆ ದುಃಖವಾಯಿತು ಕಮಲದ ಎಸಳಿಗಿಂತಲೂ ಮೃದು ವಾದ ಹೃದಯವು ಕಪಟಕ್ಕೆ ಆಶ್ರಯವನ್ನೀಯುವಷ್ಟು ಕಠಿಣವಾಗಿರಬಹುದೆ? ಸಂಸ್ಕೃತಿಯ ಉತ್ಕೃಷ್ಟ ಭಟ್ಟಿಯಲ್ಲಿ ಸಿದ್ಧಳಾದ ಆಕೆ ಅಷ್ಟು ದುಷ್ಟಳಿರ ಬಹುದೆ? ಅಚಲ ಪ್ರೇಮಮೂರ್ತಿಯೇ ಆಗಿದ್ದ ಆಕೆ ಹಾಗೆ ವಿಶ್ವಾಸಘಾತ ಮಾಡಿರಬಹುದೆ?

ಮಧುಕರನಿಗೆ ಏನೂ ತಿಳಿಯದಾಯಿತು. ಅವನು ತಲೆಹಿಡಿದು ಕೊಂಡು ಸುಮ್ಮನೆ ಕುಳಿತನು.

ಸುಬ್ಬಣ್ಣವರು ಅವನ ಮನವನ್ನರಿತರು. ಆಗ್ಗೆ ಅವನನ್ನು ಎಚ್ಚರಿಸಿ: ಮಧುಕರ, ಈ ಸಂಗತಿಯಿಂದ ನಿನಗೆ ದುಃಖವಾಯ್ತೆ? ಎಂದು ಕೇಳಿದರು

ಅಂ, ದುಃಖವೇ? ಏನೂ ತಿಳಿಯದಾಗಿದೆ.

ದುಷ್ಟರ ದೌಷ್ಟ್ಯವು ಹೊರಬಿದ್ದರೆ ದುಃಖವಾಗುವದೆ?

ಸುಬ್ಬಣ್ಣವರೇ, ನೀವು ಹೇಳಿದ ಸಂಗತಿ ದಿಟವೇ?

ಮಧುಕರ, ನಿನಗೆ ನನ್ನಲ್ಲಿ ನಂಬಿಗೆಯಿದೆಯೇ?

ನಿಮ್ಮಲ್ಲಿ ಅವಿಶ್ವಾಸ ಮಾಡಿದರೆ ನಂಬುವದಾರನ್ನು?

ಹಾಗಿದ್ದರೆ ನಾನು ಹೇಳಿದುದನ್ನು ಚೆನ್ನಾಗಿ ನಂಬು. ಈ ಕೊಲೆ ಯನ್ನು ಮಾಡಬೇಕೆಂದು ಆಳವಾಗಿ ಯೋಚಿಸಿ ರಚಿಸಿದ ಬಲೆಯಲ್ಲಿ ನೀನು

ಹಿಡಿಯಲ್ಪಟ್ಟಿರುವೆ ಇಷ್ಟೆ; ಆದರೆ ಈಗ ಅವರ ಕಪಟ ಹೊರಬೀಳುವ ಕಾಲ ಬಂದಿದೆ. ಅಂದಮೇಲೆ ಅದರಿಂದ ನಿನಗೆ ದುಃಖವೇಕೆ?

ಅದು ಕಪಟವೇ ಇದ್ದಲ್ಲಿ ನನಗೆ ದುಃಖಕ್ಕೆ ಕಾರಣವೇ ಇಲ್ಲ ದುಷ್ಟರ ದವಡೆಯೊಳಗಿಂದ ಪಾರಾದುದಕ್ಕೆ ಆನಂದವೇ ಆಗತಕ್ಕುದು.

ಅದು ಮಾತ್ರ ನಿಜ. ಆದರೆ ನನ್ನ ಮನಸ್ಸುವ್ಯಗ್ರವೇಕಾಗಿದೆ?

ಒಮ್ಮೆಲೆ ಅನಪೇಕ್ಷಿತ ಸಂಗತಿ ಕೇಳಿದ್ದರಿಂದ ಹಾಗಾಗಿರಬಹುದು ಆದರೆ ಕೊಂಚ ಅವಕಾಶ ಕಳೆದರೆ ತಾನೇ ದಾರಿಗೆ ಬರುವದು

ಹಾಗಾದರೆ ಸುಬ್ಬಣ್ಣವರೇ, ಕೊಲೆಗಾರನ ಗೊತ್ತು ಹತ್ತಿರುವದೆ?

ಗೊತ್ತುಹತ್ತಿದೆ.

ಹಾಗಾದರೆ ಅನ್ನೂ ಅವನನ್ನು ಏಕೆ ಬಂಧಿಸಿಲ್ಲ?

ಸಾಕಷ್ಟು ಆಧಾರಗಳನ್ನು ಶೋಧಿಸುತ್ತಲಿರುವೆವು

ಹಾಗಾದರೆ....

ನೀನೇನೂ ಯೋಚಿಸಬೇಡ ಬೇಗನೆ ಬೈಲಿಗೆ ಎಳೆಯುವೆವು.

ಅವಕಾಶ ದೊರೆತಂತೆ ಮಾಡಬಹುದು. ಆತುರಕ್ಕೆ ಕಾರಣವಿಲ್ಲ.

ಏಕೆ, ಸೆರೆಯಿಂದ ಹೊರಗೆ ಬರುವ ಬಯಕೆಯಿಲ್ಲವೆ?

ಇದ್ದಿತು. ಬಲವಾದ ಬಯಕೆಯಿದ್ದಿತು, ಆದರೆ ಈಗ ಅದಿಲ್ಲ. ಈಗ ಹೊರಗಿದ್ದರೂ ಅಷ್ಟೇ-ಒಳಗಿದ್ದರೂ ಅಷ್ಟೇ. ಎಲ್ಲಿದ್ದರೂ ನಾನೊಬ್ಬನೇ ಅಲ್ಲವೆ? ನನ್ನ ಪ್ರೇಮದ ಒಡೆಯನನ್ನು ಕೊಲೆ ಮಾಡಿದವನು ಶಿಕ್ಷೆಗೆ ಗುರಿಯಾಗಬೇಕೆಂಬ ಬಯಕೆಯೊಂದೇ ಉಳಿದಿದೆ.

ಸಾವುಕಾರರ ಅಗಣಿತ ಸಂಪತ್ತಿ....

ಅದನ್ನು ಯಾವದೊಂದು ಸತ್ಕಾರ್ಯಕ್ಕೆ ಉಪಯೋಗಿಸಿ ಬಿಡಿರಿ. ನನಗದರ ಅವಶ್ಯಕತೆಯಿಲ್ಲ. ಮುಕ್ತನಾದರೆ ಹಿಮಾಲಯಕ್ಕೆ ಹೋಗಿಬಿಡುವೆ; ಇಲ್ಲವಾದರೆ ಇಲ್ಲೇ ಸಾಯುವೆ.

ಆಗಲಿ. ನೋಡೋಣ. ಏನನ್ನು?

ನಿನ್ನ ಮಾತಿನ ಸತ್ಯತೆಯನ್ನು. ಉಳಿದುದಾದರೂ ಏನು?

ಅಳಿದುದಾದರೂ ಏನು? ಎಲ್ಲವೂ ಅಳಿದು ಹೋಯಿತು.

ಒಂದು ಅಳಿದರೆ ಉಳಿದ ಇನ್ನೊಂದು ಬರುತ್ತದೆ ಇರಲಿ. ಈಗ ನನಗೆ ಬಹಳ ಕಾರ್ಯಗಳಿವೆ. ಇನ್ನೊಂದು ಸಲ ಬರುವೆನು.

---

● ಬಂಧನ. ●

ಮಧುಕರನನ್ನು ಸಂತೈಸಿದ ಸುಬ್ಬಣ್ಣವರು ಪೋಲೀಸು ಕಚೇರಿಗೆ ಬಂದರು. ಆ ಸಮಯಕ್ಕೆ ನರಸಿಂಗರಾಯರೂ ಆಗಮಿಸಿದ್ದರು. ಇಬ್ಬರಿಗೂ ಕುಶಲ ಪ್ರಶ್ನೆಗಳಾದ ಬಳಿಕ ಮುಖ್ಯ ಕೆಲಸದ ಬಗ್ಗೆ ಮಾತುಗಳು ನಡೆದವು.

ನರಸಿಂಗರಾಯ:-ಸುಬ್ಬಣ್ಣವರೇ, ಮಾಟದ ಮನೆಯೆಂದರೆಅದೊಂದು ಬಹು ಸೋಜಿಗದ ಮನೆಯಾಗಿದೆ.

ಸ.ಬ್ಬಣ್ಣ:—ಅಂತೆಯೇ ನಾನು ನೋಡ ಬಯಸುತ್ತೇನೆ.

ನ.—ಅದೇನೋ ಸರಿಯೇ, ಆದರೆ ...

ಸು·—ಆದರೆ ಏನು?

ನ:—ಇನ್ನೇನೂ ಇಲ್ಲ. ಆ ಮನೆಯ ಪೂರ್ಣ ಸಂಗತಿಯನ್ನು ನಾನಾದರೂ ತಿಳಿದಿರುವದಿಲ್ಲ. ನಮ್ಮ ಕಮಿಶನರ ಸಾಹೇಬರಾದರೂ ಅಷ್ಟು ಚನ್ನಾಗಿ ನೋಡಿರುವದಿಲ್ಲ ಏಕೆ ಶ್ರೀನಿವಾಸರಾಯರೇ?

ಶ್ರೀ:—ಛೇ! ನಿಮಗಿಂತಲೂ ಹೆಚ್ಚಾಗಿ ನಾನೇನೂ ತಿಳಿದಿಲ್ಲ.

ನ·—ಅಲ್ಪಜ್ಞಾನವು ಅಪಾಯಕರವೆಂಬಂತೆ ಸುಮ್ಮನೆ ಏನಾದರೂ ತೊಂದರೆಗೆ ಸಿಲುಕಿದರೆ ಹೇಗೆ ಅಂತ.

ಸು:—ತುಬ್ಬಗಾರಿಕೆಯ ಈ ವಿಷಯದಲ್ಲಿ ಅನುಮಾನಕ್ಕೆ ಅವಕಾಶ ವಿಲ್ಲ.

ನ:—ಹಾಗಾದರೆ ಹೋಗಲೇಬೇಕೆನ್ನುವಿರಾ?

ಸು:—ಅಹುದು. ಹಾಗೆ ಸಾಹಸಕ್ಕೆ ಕೈ ಹಾಕದ ಹೊರತು ಯಾವ ಕಾರ್ಯವೂ ಕೈಗೂಡಲಾರದು.

ಶ್ರೀ:—ನರಸಿಂಗರಾಯರೇ; ಸುಬ್ಬಣ್ಣವರಂತಹ ಚಾಣಾಕ್ಷರು ನಮ್ಮೊಡನಿರಲು, ನಮಗೆ ದಾರಿ ಸುಲಭವಾಗಿ ಸಿಕ್ಕುವದು.

ನ:—ಆಗಲಿ. ಯಾವಾಗ್ಗೆ ಹೊಗೋಣ?

ಸು:—ಬಹುತರ ಅಲ್ಲಿ ಜೂಜುಗಾರರು ನೆರೆಯುವ ಸಮಯವಾವದು?

ನ:—ರಾತ್ರಿ ಹತ್ತು ಗಂಟೆಯಿಂದ ಬೆಳಗಿನ ವರೆಗೆ ಕಲೆಯುತ್ತಾರೆ. ಒಂದೊಂದು ದಿನ ಯಾರೂ ಕೂಡುವುದೇ ಇಲ್ಲ.

ಶ್ರೀ:—ಎಂಟಕ್ಕೆ ಸಿದ್ಧವಾಗಿ ಬನ್ನಿರಿ.

ಹೀಗೆ ನಿರ್ಧರವಾಗಲು ಸುಬ್ಬಣ್ಣವರು ಅಲ್ಲಿಂದ ಎದ್ದರು ಅವರು ಹಾಗೆಯೇ ಮಧುಕರನು ಸೂಚಿಸಿದ್ದಂತೆ ದೇವಿಗುಡಿಯ ಹಿಂದಿನ ಭಾಗಕ್ಕೆ ಹೋದರು.

ಕುಸುಮಪುರದಲ್ಲಿ ದೇವೀಗುಡಿಯು ಪ್ರಸಿದ್ಧವಾದುದು, ಮತ್ತೆ ಬಹಳ ಪುರಾತನವಾದುದು ಜಾಗ್ರತಸ್ಥಾನವೆಂದು ಹೆಸರು ಪಡೆದಿದ್ದಿತು ಆ ದೇವಿಯು ಕುಸುಮಪುರ ಸಂಸ್ಥಾನದರಸಿನ ಕುಲದೇವತೆಯು ಆದುದರಿಂದ ಗುಡಿಯ ವ್ಯವಸ್ಥೆ ಚನ್ನಾಗಿದ್ದಿತು ಸುಬ್ಬಣ್ಣವರು ಮಂದಿರದ ಶೋಭೆಯನ್ನು ನಿರೀಕ್ಷಿಸುತ್ತ ಹಿಂದಿನ ಭಾಗಕ್ಕೆಹೋದಾಗ್ಗೆ ಅಲ್ಲಿ ಯಾರೂ ಇರಲಿಲ್ಲ. ದೇವೀಗುಡಿಯ ಹಿಂದಿನ ಗೋಡೆ ಭದ್ರವಾದುದು ಗಚ್ಚು-ಕಲ್ಲುಗಳಿಂದ ಕಟ್ಟಲ್ಪಟ್ಟದ್ದಿತು ಸುಬ್ಬಣ್ಣವರು ಆ ಗೋಡೆಯನ್ನು ಬಹಳ ಸೂಕ್ಷ್ಮವಾಗಿ ನಿರೀಕ್ಷಿಸಹತ್ತಿದರು, ಆದರೆ ಅಲ್ಲಿ ಅವರಿಗೆ ಏನೂ ಸಂದೇಹ ತೋರಲಿಲ್ಲ. ಹಾಗೆಯೇ ಅವರು ಬಹಳ ಸೂಕ್ಷ್ಮದೃಷ್ಟಿಯಿಂದ ನಿರೀಕ್ಷಿಸುತ್ತಲಿರಲು,ಅವರು ಮೆಲ್ಲಗೆ ಅತ್ತಿತ್ತ ತಿರುಗುವಾಗ್ಗೆ ಅವರು ನಡೆಯುತ್ತಲಿದ್ದ ಹಾಸುಗಲ್ಲಿನಲ್ಲಿ ಒಂದೆಡೆ ಏನೋ ಸಂಶಯ ಬಂದಿತು. ಅವರು ಮೆಲ್ಲಗೆ ಆ ಕಲ್ಲಿನ ಮೇಲೆ ಚಿಟುಕೆ ಹೊಡೆದರು. ಉಳಿದ ಕಲ್ಲುಗಳಿಗಿಂತ ಅಲ್ಲಿಯ ಸಪ್ಪಳವು ಭಿನ್ನವಾಗಿದ್ದಿತು. ಆ ಕಲ್ಲಿನ ಬುಡದಲ್ಲಿ ಪೊಳ್ಳು ಇರಬೇಕೆಂದು ಅವರಿಗೆ ಅನಿಸಹತ್ತಿತು ಕೂಡಲೆ ಅಲ್ಲಿ ಏನಾದರೊಂದು ಸ್ಪ್ರಿಂಗಿನ ಯೋಜನೆ ಇರಬಹುದೆಂದು ಅವರು ಅತ್ತಿತ್ತ ನಿರೀಕ್ಷಿಸಹತ್ತಿದರು. ಅಲ್ಲಿ ಅವರಿಗೆ ಏನೂ ಸುಳುವೇ ಸಿಕ್ಕದಾಯಿತು; ಆದರೆ ಸುಬ್ಬಣ್ಣವರು ಅಷ್ಟಕ್ಕೇ ಬಿಡುವವರೇ? ಆ ಗಚ್ಚಿನ ಗೋಡೆಯಲ್ಲಿ ನೆಟ್ಟಿದ್ದ ಕಬ್ಬಿಣದ ಮೊಳೆಗಳನ್ನು ನಿರೀಕ್ಷಿಸಹತ್ತಿದರು. ಅವೆಲ್ಲವೂ ಸಾದಾ ಮೊಳೆಗಳಂತೆಯೇ ಇದ್ದವು ಅವುಗಳಲ್ಲ ಏನೂ ಹೆಚ್ಚುಕಡಿಮೆ ಕಾಣುತ್ತಿರಲಿಲ್ಲ. ಆದರೂ ಸುಬ್ಬಣ್ಣವರು ಏನಾದರೂ ಮೋಸವಿದ್ದರೆ ಅದು ಇಲ್ಲಿಯೇ ಇರಬೇಕೆಂದು ನಿರ್ಧರಿಸಿ, ಬಹಳ ಸೂಕ್ಷ್ಮವಾಗಿ ನಿರೀಕ್ಷಿಸಹತ್ತಿದರು. ಸುಬ್ಬಣ್ಣವರ ತೀಕ್ಷ್ಣ ದೃಷ್ಟಿಗೆ, ಮೋಸವು ಹೊರಬೀಳದಿರಲಿಲ್ಲ. ಆ ಎಲ್ಲ ಮೊಳೆಗಳಿಗೂ ಒಂದೇ ವಿಧವಾದ ಬಣ್ಣ ಕೊಟ್ಟಿದ್ದರೂ ಅವುಗಳಲ್ಲಿ ಒಂದು ಮೊಳೆ ಮಾತ್ರ ಬಹಳ ಸವೆದಂತೆ ತೋರುತಲಿದ್ದಿತು.

ಸುಬ್ಬಣ್ಣವರು ಅತ್ತಿತ್ತ ನೋಡಿ ಮೆಲ್ಲನೆ ಆ ಮೊಳೆಯನ್ನು ಅತ್ತಿತ್ತ ತಿರುವಲೆತ್ನಿಸಿದರು; ಆದರೆ ಏನೂ ಸಾಧ್ಯವಾಗಲಿಲ್ಲ. ಆ ಮೇಲೆ ಆ ಮೊಳೆಯನ್ನು ಒಳಕ್ಕೆ ದಬ್ಬಿದರು ಕೂಡಲೆ ಆ ಮೋಳೆ ಕೊಂಚ ಒಳಗೆ ಹೋ-ಯಿತು ಒಡನೆಯೇ ಮೊದಲೇ ಸಂಶಯ ಬಂದ ಆ ಹಾಸುಗಲ್ಲು ಸರಿಯಿತು. ಮೊಳೆಯನ್ನು ಚನ್ನಾಗಿ ದಬ್ಬಲು ಹಾಸುಗಲ್ಲು ಚನ್ನಾಗಿ ಅಡ್ಡ ಸರಿದು, ಒಬ್ಬ ಮನುಷ್ಯನಿಗೆ ನಿರಾತಂಕವಾಗಿ ಕೆಳಗೆ ಇಳಿಯುವಂತೆ ದಾರಿ ಕೊಟ್ಟಿತು.

ಮೊಳೆಯನ್ನು ಅಲ್ಲಿಯೇ ಕೊಂಚ ಬಲಕ್ಕೆ ತಿರುಗಿಸಲು ಮೊಳೆ ಗಟ್ಟಿಯಾಗಿ ನಿಂತಿತು ಆ ಮೇಲೆ ಒಂದು ಅಲ್ಲಿ ಇಣುಕಲು ಸ್ವಚ್ಛವಾದ ಸೋಪಾನು ಗಳು ಕಾಣಿಸಿದುವು. ಆದರಿಂದ ಸುಬ್ಬಣ್ಣನಿಗೆ ಸಮಾಧಾನವಾಗಿ ಮೊಳೆ ಯನ್ನು ಮೊದಲಿನಂತಿರಿಸಿ ಅಲ್ಲಿಂದ ತಿರುಗಿ ತಮ್ಮ ಬಿಡಾರಕ್ಕೆ ತಲುಪಿದರು. ಮನೆಗೆ ಹೋಗಿ ಊಟ-ಉಡಿಗೆಗಳನ್ನು ತೀರಿಸಿಕೊಂಡರು ಆ ಮೇಲೆ ಮಾಟದ ಮನೆಯ ಸಂಕ್ಷಿಪ್ತ ಸಂಗತಿಯನ್ನೂ ಅಲ್ಲಿಗೆಹೋಗಬಹುದಾದ ದಾರಿ ಯನ್ನೂ ಅಲ್ಲಿ ದಬ್ಬತಕ್ಕ ಮೊಳೆಯ ನಂಬರನ್ನೂ ಬರೆದು ಒಂದು ವಿವಕ್ಷಿತ ಸ್ಥಳದಲ್ಲಿಟ್ಟರು ಅಲ್ಲಿಂದ ಪೋಲೀಸ ಕಚೇರಿಗೆ ಹೋಗಿ ನರಸಿಂಗರಾಯ ರನ್ನು ಕಂಡರು.

ನಃ—ಮತ್ತೇನು ಸುಬ್ಬೂಗಾರರೇ, ಎಲ್ಲಿಗೆ ಹೋಗೋಣವಾಗಿದ್ದಿತು?

ಸುಃ—ಮನೆಗೆ ಹೋಗಿ ಊಟ-ಉಡಿಗೆಗಳನ್ನು ತೀರಿಸಿದೆನು.

ನಃ—ಈಗ ಒಂದು ಸಲ ನಾವು ಇಂದು ಕೈಕೊಳ್ಳತಕ್ಕ ಮಹತ್ಪ್ರವಾಸದ ಸ್ಥಲದತ್ತ ಹೋಗಿ ಬರೋಣವೆ?

ಸುಃ—ನಾನಾದರೂ ಅದೇ ವಿಚಾರದವನಿದ್ದೆನು

ನಃ—ನಿತ್ಯದ ಉಡುಪಿನಲ್ಲಿ ಹೋಗಿ ಕಲ್ಲಪ್ಪನನ್ನು ಕಾಣೋಣವೋ? ಇಲ್ಲವೆ ವೇಷ ಬದಲಿಸಿ .......

ಸುಃ—ಆಹುದು. ಒಳಿತಾಗಬಹುದು?

ನಃ—ಅದೇನೋ ನಿಮ್ಮ ಯೋಚನೆಯಂತೆಯೇ ನಡೆಯಲು ನಾನು ಸಿದ್ಧನಿರುವೆನು ಸುಃ—ಕಲ್ಲಪ್ಪನು ಧೂರ್ತನಿರುವನೋ?

ನಃ—ಪಕ್ಕಾ ಬದ್‌ಮಾಷ್.

ಸುಃ—ಬದ್ಮಾಷನಂತೂ ಸರಿಯೆ; ಆದರೆ ಬಹಳ ದಕ್ಷತೆ ವಹಿಸುವಷ್ಟು ಮುಂಜಾಗ್ರತೆಯುಳ್ಳವನಿರುವನೋ ಅಥವಾ ಕಿಂಚಿತ್ತು ಭೋಳೇ... ....

ನಃ—ನಿಜವಾಗಿ ಹೇಳಬೇಕೆಂದರೆ ಕಲ್ಲಪ್ಪನು ಹೆಸರಿನಂತೆ ಕಲ್ಲಪ್ಪನೇ, ಆದರೆ ಅವನ ಹಸ್ತಕರು ಬಹು ಚಾಣಾಕ್ಷರಿರುತ್ತಾರೆ.

ಸುಃ—ಮುಖ್ಯವಾಗಿ ಒಂದು ಸಲ ಅವರ ಮನೆಯಲ್ಲಿ ಪ್ರವೇಶಮಾಡಲು ಬರುವಂತಾಗಬೇಕು. ಆವ ರೀತಿಯಲ್ಲಿ ಹೋದರೆ ಸಾಧ್ಯವಾಗುವುದು?

ನಃ—ಕಲ್ಲಪ್ಪನೊಬ್ಬನೇ ಇದ್ದರೆ ಎಲ್ಲವೂ ಸರಿಯು, ಆದರೆ ಅವನ ಹಸ್ತಕರು ಬಹಳ ಧೂರ್ತರಿರುತ್ತಾರ.

ಸುಃ—ಸ್ವಾಭಾವಿಕವಾಗಿ ನಿಮ್ಮನ್ನು ನೋಡಿದರೆ ಆದರಿಸಿ ಕರೆಯು ತ್ತಾನಲ್ಲವೆ?

**ನ:**— ಓಹೊ ! ಮೇಲೋಪಚಾರಕ್ಕೆ ಕೊರತೆ ಏನೂ ಇಲ್ಲ. ಬೇಕಾದಷ್ಟು ಮಾಡುತ್ತಾನೆ 'ಮಧುತಿಷ್ಠತಿ ಜಿಹ್ವಾಗ್ರೆ' ಎಂದಿರುತ್ತದೆ ಅವನ ಸ್ಥಿತಿ

ಸು:— ಹಾಗಾದರೆ ಈಗಲೆ ಹೋಗೋಣ. ನನ್ನ ನಿಜಸ್ಥಿತಿಯನ್ನು ತಿಳಿಸದೆ, ನಾನೊಬ್ಬ ಹೊಸಬನೆಂದೂ ನಗರವನ್ನು ತೋರಿಸಲು ಕರೆದುಕೊಂಡು ಹೊರಟಿದ್ದೆವೆಂದೂ ಹೇಳಿ ಬಿಡಿರಿ. ಉಳಿದುದನ್ನು ಯಥಾವಕಾಶ ಮಾಡೋಣ.

ಹೀಗೆ ವಿಚಾರಿಸಿ ಸುಬ್ಬಣ್ಣ-ನರಸಿಂಗರಾಯರಿಬ್ಬರೂ ಹೊರಟರು. ಕಲ್ಲಪ್ಪನ ಮನೆಯ ಮುಂದೆ ಸಹಜವಾಗಿ ಹಾಯುವವರಂತೆ ಹೋದರು. ಕಲ್ಲಪ್ಪ ಬಾಗಿಲಲ್ಲಿರಲಿಲ್ಲ ಅವನನ್ನು ಹೊರಗೆ ತರಬೇಕೆಂದು ಸುಬ್ಬಣ್ಣವರು ಒಂದು ಯುಕ್ತಿ ತೆಗೆದರು. ಅವರು ಗಟ್ಟಿಯಾಗಿ, 'ನರಸಿಂಗರಾಯರೇ, ಅಂತು ನಿಮ್ಮ ಊರು ವಿಲಕ್ಷಣವಾದುದಿದೆ ಬಹುತರ ಭೂಮಂಡಲದ ಯಾವ ಭಾಗದಲ್ಲಿಯೂ ಇಂತಹ ಊರು ಇರಲಿಕ್ಕಿಲ್ಲ.

ನರಸಿಂಗರಾಯರಿಗೆ ಸುಬ್ಬಣ್ಣವರ ಯುಕ್ತಿ ತಿಳಿಯಿತು. ಅವನೂ ಗಟ್ಟಿಯಾಗಿ, ರಾಮಣ್ಣವರೇ, ಈ ನಗರದ ಪುನರ್ರಚನೆಗೆ ಬಹಳವಾಗಿ ವೆಚ್ಚ ಹತ್ತಿತು ಎಂದನು

ಕಲ್ಲಪ್ಪ ಒಳಗಿದ್ದವನು ನರಸಿಂಗರಾಯನ ಧ್ವನಿ ಕೇಳುತ್ತಲೆ ಹೊರಗೆ ಬಂದನು ಅವನು ಅತ್ಯಂತ ನಮ್ರಭಾವದಿಂದ—ಓಹೋ ನರಸಿಂಗರಾಯರೇನು? ಬನ್ನಿ ಬಡವರ ಮನೆಗೆ ಭಾಗೀರಥಿ ಬಂದಂತಾಯಿತು. ದಯವಿಟ್ಟು ಒಳಗೆ ಬನ್ನಿರಿ. ಇವರಾರು? ಹೊಸಬರಂತೆ ತೋರುತ್ತಾರೆ, ಎಂದು ಕೇಳಿದನು.

ನರಸಿಂಗರಾಯನು ಕಲ್ಲಪ್ಪನವರೇ, ಇವರು ನಮ್ಮ ಮುಂಬಯಿಯ ಮಿತ್ರರೊಬ್ಬರು? ಇದೇ ಹೊಸದಾಗಿ ಇಲ್ಲಿಗೆ ಬಂದಿರುವರು? ಕುಸುಮಪುರದ ವ್ಯವಸ್ಥೆಯನ್ನು ನೋಡಲು ಕರೆದುಕೊಂಡು ಹೊರಟಿದ್ದೆವು ಸಹಜವಾಗಿ ನಿಮ್ಮ ಮನೆಯೆದುರು ಹಾಯುತ್ತಲಿದ್ದೆವು, ಎಂದು ನುಡಿದು, ಸುಬ್ಬಣ್ಣವರಿಗೆ:- ರಾಮರಾಯರೇ, ಇವರು ನಮ್ಮ ಸಂಸ್ಥಾನದಲ್ಲಿ ಪ್ರಮುಖ ವ್ಯಕ್ತಿಗಳಾದ ಕಲ್ಲಪ್ಪನವರು ಉದಾರಿಗಳೂ ವಿಚಾರಿಗಳೂ, ಇಂತಹರು ಸಿಕ್ಕುವುದು ಅಪರೂಪ, ಎಂದನು

ಹೀಗೆ ಮಾತುಗಳಾಗುತ್ತಿರುವಾಗಲೆ ಕಲ್ಲಪ್ಪನು ಆಗ್ರಹದಿಂದ ಅವರನ್ನು ತನ್ನ ಮನೆಯೊಳಗೆ ಕರೆದೊಯ್ದನು. ಅಲ್ಲಿ ಆದರೋಪಚಾರಗಳು ಬಹು ಚನ್ನಾಗಿ ನಡೆದುವು. ಅಲ್ಲಿಂದ ಎದ್ದು ಹೊರಟು ನರಸಿಂಗರಾಯರ ಮನೆಗೆ ತಲುಪಿದರು.

ನ:—ಸುಬ್ಬಣ್ಣವರೇ, ಸಾವುಕಾರರ ಕೊಲೆಯ ಬಗ್ಗೆ ನಿಮ್ಮ ವಿಚಾರ ವೇನಿದೆ? ಸು:-ಈ ಪರಿಸ್ಥಿತಿಯಲ್ಲಿ ನಾನೇನೂ ಹೇಳಲು ಶಕ್ಯಸಿಲ್ಲ.

ನ:—ಅಂದರೆ? ಕೊಲೆಗಾರನ ಬಗ್ಗೆ ನಿಮ್ಮ ವಿಚಾರಗಳೇನಿವೆ?

ಸು:—ವಿಚಾರಗಳೇನೇನಿದ್ದರೂ ಅವುಗಳ ಬಗ್ಗೆ ಯೋಚಿಸುವ ಕಾರಣವೇ ಇಲ್ಲ.

ನ—ಹಾಗಾದರೆ ನೀವು ಯಾವ ದಾರಿಯಿಂದ ಹೊರಡುವಿರಿ?

ಸು:—ಆರಂಭಕ್ಕೆ ಉಪಲಬ್ಧವಿರುವ ಸಂಗತಿಗಳಿಗೆ ವಿರುದ್ಧವಾಗಿ ಹೊರಡುವುದೇ ನನ್ನ ಸ್ವಭಾವ

ನ:—ಮಧುಕರನು ಕೊಲೆಗಾರನಲ್ಲವೆಂದು ನಿಮ್ಮ ಅಭಿಪ್ರಾಯವೆ?

ಸು:—ಆ ಬಗ್ಗೆ ನಾನು ಯಾವ ಅಭಿಪ್ರಾಯವನ್ನೂ ಹಿಡಿಯುವದಿಲ್ಲ. ಮಧುಕರನು ಕೊಲೆಗಾರನಲ್ಲವೆಂಬ ಬಗ್ಗೆ ಆಧಾರಗಳನ್ನು ಶೋಧಿಸುತ್ತಲಿರುವೆನು. ಇಷ್ಟೆ?

ನ:—ಹಾಗೇ ಆಗಲಿ. ಈಗ ಮಾಟದ ಮನೆಗೆ ಹೋಗುವ ಇಚ್ಛೆಯೇಕೆ ಉಂಟಾಯಿತು?

ಸು:—ಒಂದು ಸಲ ಅದನ್ನು ಸಂಪೂರ್ಣವಾಗಿ ಅವಲೋಕಿಸಿದರೆ ಒಳಿತಲ್ಲವೆ?

ನ:—ಅದೇನೋ ಸರಿಯೆ? ಆದರೆ ಪ್ರಾಣಾಪಾಯಕ್ಕೆ ಗುರಿಯಾಗುವ ಸಂದರ್ಭವೊದಗಿದರೂ ಒದಗಬಹುದು.

ಸು:—ಆಗಲಿ; ಆ ಮೇಲೆ ನೋಡುವಾ

ಅಲ್ಲಿ ಹೋಗುವದರಿಂದ ಉಪಯೋಗವೇನೂ ಇಲ್ಲವೆಂದು ನರಸಿಂಗರಾಯನ ಮತವಾಗಿದ್ದಿತು, ಆದರೆ ಸುಬ್ಬಣ್ಣವರ ಬಲುಮೆಗೆ ಸಿಕ್ಕುಬಿದ್ದಿದ್ದನು. ಅನಿವಾರ್ಯವಾಗಿ ಅಲ್ಲಿ ಹೋಗಲು ಒಪ್ಪಬೇಕಾಯಿತು

ಸರಿಯಾಗಿ ರಾತ್ರಿ ಎಂಟು ಗಂಟೆಗೆ ಮೂವರೂ ಕೂಡಿ ಹೊರಟರು. ಸುಬ್ಬಣ್ಣವರ ಸೂಚನೆಯಂತೆ ರಬ್ಬರಿನ ಕೈಚೀಲ ಬೂಟುಗಳನ್ನು ಧರಿಸಿದ್ದರು. ಮೂವರೂ ಕೂಡಿ ಕುಸುಮಪುರದಲ್ಲಿ ಹೊರಭಾಗಕ್ಕೆ ಕಾಣುವ ಒಂದು ಗುಡ್ಡದ ಬುಡಕ್ಕೆ ಹೋದರು. ಅಲ್ಲಿ ಒಂದು ಗುಹೆಯಿದ್ದಿತು. ನರಸಿಂಗರಾಯನು ಮುಂದೆ ಮುಂದೆ ಹೊರಟಿದ್ದನು ಅವನು—ಸುಬ್ಬಣ್ಣವರೇ, ನಾವು ಹೋಗಲಿರುವ ಭಾಗವು ಕಲ್ಲಪ್ಪನ ಮನೆಯ ಬುಡಕ್ಕೇನೇ ಹೋಗುತ್ತದೆ. ಇದು ಕಲ್ಲಪ್ಪನ ಮನೆಯ ಬುಡದಲ್ಲಿಯೇ ಇದ್ದರೂ ಯಾರಿಗೂ ತಿಳಿಯುವಂತಿಲ್ಲ. ಅಷ್ಟು ಮುಂಜಾಗ್ರತೆಯಿಂದ ಕಟ್ಟಲ್ಪಟ್ಟಿದೆ ಎಂದರು.

ಸುಬ್ಬಣ್ಣವರು ಎಡಬಲಗಳನ್ನು ಬಹು ಸೂಕ್ಷ್ಮವಾಗಿ ನಿರೀಕ್ಷಿಸುತ್ತ ನಡೆದಿದ್ದರು ನರಸಿಂಗರಾಯನ ಮಾತಿಗೆ ಸುಮ್ಮನೆ 'ಹುಂ'ಗುಡುತ್ತ ಹೊರಟಿದ್ದರು ಅವರು ಕತ್ತಲೆಯಲ್ಲಿಯೇ ಒಂದು ವಿವಕ್ಷಿತ ದಾರಿಯಿಂದ ಸಾಗಿದ್ದರು, ಸುಮಾರು ಹತ್ತು ಹದಿನೈದು ಮಿನಿಟು ದಾರೀ ಕ್ರಮಿಸಲು ಅವರು ಒಂದು ಬಾಗಿಲಿನ ಮುಂದೆ ಬಂದು ನಿಂತರು. ಆ ಬಾಗಿಲಿಗೆ ಚಿಲಕ ಕೀಲಿಗಳಾವವೂ ಇರಲಿಲ್ಲ ನರಸಿಂಗರಾಯನು ಉಳಿದಿಬ್ಬರಿಗೂ ಬಹಳ ಸಾವಧಾನಾಗಿರುವಂತೆ ಸೂಚನೆಯಿತ್ತು, ಹೊಸ್ತಿಲ ಹತ್ತರವೇ ಇದ್ದ ಒಂದು ಮೊಳೆಯನ್ನು ಬೂಟ್ಸಿನಿಂದ ಚನ್ನಾಗಿ ತುಳಿದನು. ದೊಡ್ಡದಾದ ಆ ಬಾಗಿಲು ಏನೂ ಸಪ್ಪಳಿಲ್ಲದೆ ಬಿಡ್ಡ ಸರಿಯಿತು ಮೂವರು ಒಳಕ್ಕೆ ಪ್ರವೇಶಿಸಿದರು.

ಆಗ್ಗೆ ನರಸಿಂಗರಾಯನು ಕೊಂಚ ವೇಳೆ ಸುಮ್ಮನೆ ನಿಂತು ಅಲ್ಲಿ ಯಾರೂ ಇಲ್ಲವೆಂದು ಮನಗಂಡು ತನ್ನ ಬ್ಯಾಟರಿಯನ್ನು ಹಿಚುಕಿದನು. ಆಗ್ಗೆ ಅದೊಂದು ವಿಸ್ತೀರ್ಣವಾದ ಸಭಾಮಂದಿರವಾಗಿದ್ದಿತು. ಕೆಳಗೆ ರತ್ನಗಂಬಳಿ ಹಾಸಿ ಕುರ್ಚಿ-ಮೇಜುಗಳನ್ನಿರಿಸಿದ್ದರು. ಗೋಡೆ-ಕಂಬಗಳ ಮೇಲೆ ರಾಮ ಕೃಷ್ಣಾದಿ ಮೂರ್ತಿಗಳ ಚಿತ್ರಗಳಿದ್ದವು ಹಾಗೆಯೇ ಸ್ವರ್ಗ-ನರಕಗಳ ಚಿತ್ರಗಳೂ ಬಹು ಸುಂದರವಾಗಿ ಚಿತ್ರಿಸಲ್ಪಟ್ಟಿದ್ದುವು ಅಲ್ಲಲ್ಲಿ ವೇದವಾಕ್ಯಗಳೂ ದೇವರ ಹೆಸರುಗಳೂ ಬರೆಯಲ್ಪಟ್ಟಿದ್ದುವು. ಆ ಮನೆಯ ಶೋಭೆಯನ್ನು ನೋಡಿ ಸುಬ್ಬಣ್ಣವರಿಗೆ ಬಹಳ ಆನಂದವಾಯಿತು.

ಅಲ್ಲಿ ನರಸಿಂಗರಾಯನು ಆ ಮೊದಲು ಬಹಳ ಸಲ ಹೋಗಿದ್ದನು. ಆದರಿಂದ ಅವನು ವಿಶೇಷವಾಗಿ ನೋಡುವ ಭರಕ್ಕೆ ಹೋಗಲಿಲ್ಲ ಅವನು ಏನನ್ನೋ ಹೇಳಬೇಕೆಂದು ಮತ್ತೆ.... ಎಂದು ಅನ್ನುವಷ್ಟರಲ್ಲಿ ಸುಬ್ಬಣ್ಣವರು ಅವನ ಬಾಯಿಯ ಮೇಲೆ ಕೈಯಿಟ್ಟು, ಕೂಡಲೆ ಹೊರಗೆ ಕರೆದುಕೊಂಡು ಬಂದರು.

ಸುಬ್ಬಣ್ಣವರ ವರ್ತನೆಯನ್ನು ನೋಡಿ ನರಸಿಂಗರಾಯನಿಗೆ ನಗು ಬಂದಿತು. ಸುಬ್ಬಣ್ಣವರು ಗಾಬರಿಯಾಗಿ ಹಾಗೆ ಮಾಡಿದರೆಂದು ಅವನು ತಿಳಿದುಕೊಂಡನು. ಅವರು ಆ ಮನೆದಾಟಿ ಬಯಲಿಗೆ ಬರಲು, ಅಲ್ಲಿ ಕೊಂಚ ನಿಭೀತಿಯೆನಿಸಿರಬಹುದೆಂದು ತಿಳಿದು ನರಸಿಂಗರಾಯನು ಸುಬ್ಬಣ್ಣವರಿಗೆ ಅವರ ವಿಚಿತ್ರ ವರ್ತನೆಯ ಕಾರಣವನ್ನು ಕೇಳಿದನು.

ನ:— ಸುಬ್ಬಣ್ಣವರೇ, ಹಾಗೇಕೆ ಮಾಡಿದಿರಿ ನೀವು?

ಸು:— ಪ್ರತಿಸಲ ಹೋದಾಗ್ಗೆ ನೀವು ಅಲ್ಲಿ ಯಾರನ್ನೂ ನೋಡದೆ ಮಾತನಾಡಿದ್ದಿರಲ್ಲವೆ?

ಶ್ರೀ:—ಅಹುದು.

ಸು:—ಅಂತೆಯೇ ನಿಮ್ಮ ಕೈಗೆ ಯಾರೂ ಸಿಕ್ಕಿಲ್ಲ. ನ:—ಅದೇಕೆ?

ಸು:—ಈ ಮಾಟದ ಮನೆಯು ಇಷ್ಟಕ್ಕೇ ಮುಗಿಯುವದಿಲ್ಲ.

ಶ್ರೀ:—ಅಂದರೆ?

ಸು:—ಇದರ ಬುಡಕ್ಕೆ ತೀರ ಸುರಕ್ಷಿತವಾದ ಇನ್ನೊಂದು ಮನೆ ಇದೆ.

ನ:—ಹೇಗೆ ಹೇಳುವಿರಿ? ಸು:—ಸ್ಪಷ್ಟವೇ ಇದೆ.

ಶ್ರೀ:—ಆಂ ಸ್ಪಷ್ಟವಾಗಿದೆಯೇ?

ನ:—ಇದೀಗ ಇಷ್ಟು ಬೇಗನೆ ಹೊರಗೆ ಬಂದ ಕಾರಣವೇನು?

ಸು:—ನಾವು ಹೋಗಿ ನಿಂತ ಆ ಕೋಣೆಯು ಒಂದು ದೊಡ್ಡ ಟೆಲಿಫೋನಿನಂತಿದೆ. ಅಲ್ಲಿ ಯಾರು ಏನು ಮಾತನಾಡಿದರೂ ಅದು ಬೇರೊಂದು ಸ್ಥಳಕ್ಕೆ ಕೇಳಬರುತ್ತದೆ. ಹಾಗೆಯೇ ಬುಡದಲ್ಲಿ ಆಡಲು ಕುಳಿತವರಿಗೂ ಕೇಳಬರುತ್ತದೆ ಅಲ್ಲಿಂದ ಅವರು ಸುರಕ್ಷಿತವಾಗಿ ಪಾರಾಗುತ್ತಾರೆ.

ಶ್ರೀ:—ಆಂ, ಹೀಗಿದೆಯೇ?

ಸು:—ಇಷ್ಟೇ ಏಕೆ, ಅದೆಲ್ಲವೂ ವಿದ್ಯುಲ್ಲತೆಯು ಪ್ರವಹಿಸುವಂತೆ ಮಾಡಿ, ನಿಂತಲ್ಲಿಯೇ ಧ್ವಂಸ ಮಾಡಲು ಬರುವಂತಿದೆ.

ಶ್ರೀ:—ಆಂ, ನಿಜವೆ? ಸು:—ಅಹುದು.

ನ:—ಇದನ್ನೆಲ್ಲ ಹೇಗೆ ಕಂಡು ಹಿಡಿದಿರಿ?

ಸು:—ಮುಂಜಾನೆ ಹೋದಾಗ್ಗೆ ಅಲ್ಲಿನ ಸ್ವಿಚ್ಚುಗಳಿಂದಲೇ ತಿಳಿಯ ಬಂದಿತು. ಶ್ರೀ:—ಆಂ, ಅದು ಹೇಗೆ?

ಸು:—ಅದು ಹೇಗೆನ್ನುವುದರ ಪರೀಕ್ಷೆ ಮಾಡೋಣವೇ?

ನ:—ನಡೆಯಿರಿ; ನೋಡಿಯೇ ಬಿಡೋಣ.

ಸು:—ಇಂದು ಬೇಡ. ಪುನಃ ನಾಳೆ ಬರುವಾ.

ನ:—ಇಂದೇಕೆ ಬೇಡ.

ಶ್ರೀ:— ನಾವು ಅಲ್ಲಿ ಹೋಗಿ ಬಂದುದಕ್ಕೆ ಅವರು ಎಚ್ಚರಾಗಿರಬಹುದೆ?

ಸು:—ಇದ್ದರೂ ಇರಬಹುದು. ಆದುದರಿಂದ ಶ್ರೀನಿವಾಸರಾಯರೇ, ನಾಳೆ ಒಂದು ಹಂಚಿಕೆ ಮಾಡೋಣ. ಶ್ರೀ:—ಏನು?

ಸು:—ನಾಳೆ ರಾತ್ರಿ ಎಂಟರಿಂದ ಒಂಬತ್ತರ ವರೆಗೆ ಅಥವಾ ಇನ್ನೂ ಒಂದು ತಾಸು ಹೆಚ್ಚೇ ಆದರೂ ಚಿಂತೆಯಿಲ್ಲ. ಯಾವದೊಂದು ನೆವದಿಂದ ಈ ಭಾಗದ ವಿದ್ಯುದ್ದೀಪಿಗೆಗಳನ್ನು ಬಂದು ಇಡುವಂತೆ ಹೇಳಿಬಿಡಿರಿ.

ಶ್ರೀ:—ಅಹುದು. ಹಾಗೆ ಮಾಡಿದರೆ ನಮಗೆ ಯಾವ ಭಯವೂ

ಇಲ್ಲದೆ ಆ ಮಾಟದ ಮನೆಯನ್ನು ಚೆನ್ನಾಗಿ ನೋಡಲು ಬರುವದು. ಯಾಕೆ ನರಸಿಂಗರಾಯರೇ? ನ:—ಸುಬ್ಬಣ್ಣನವರ ಯುಕ್ತಿ ಕೇಳುವದೇನು?

ಆ ಮೂವರೂ ಹೀಗೆ ನಿರ್ಧರಿಸಿ ಊರೊಳಗೆ ಮರಳಿ ಬಂದು, ತಮ್ಮ ತಮ್ಮ ಮನೆಗೆ ಹೊರಟು ಹೋದರು.

ಮರುದಿವಸ ಏಳೂವರೆಯಾಗಿರುವಾಗಲೆ ಮೂವರೂ ಸಿದ್ಧರಾಗಿ ಹೊರಟು ಮಾಟದ ಮನೆಯ ಬಾಗಿಲಿಗೆ ಬಂದರು. ಸರಿಯಾಗಿ ಎಂಟು ಹೊಡೆಯುವ ಸಮಯಕ್ಕೆ ಆ ನಗರದಭಾಗದಲ್ಲೆಲ್ಲ ಸಂಪೂರ್ಣ ಕತ್ತಲಾಯಿತು ವಿದ್ಯುದ್ದೀಪಗಳು ಫಕ್ಕನೆ ಆರಿ ಹೋಗಲು, ಜನರ ಕಣ್ಣೇ ಹೋದಂತಾಯಿತು. ಎಲ್ಲರೂ ಒಂದೇಸವನೆ ಓಡುವವರೇ. ಗದ್ದಲವೇ ಗದ್ದಲವಾಯಿತು

ಸು:—ಶ್ರೀನಿವಾಸರಾಯರೇ, ಈ ದಿನ ತಾಸೆರಡು ತಾಸು ನಾಗರಿಕರಿಗೆ ಬಹಳ ತೊಂದರೆಯಾಗುವುದು.

ಶ್ರೀ:—ಇದಿಷ್ಟು ತೊಂದರೆ ಸಹಿಸಿದರೆ ಅವರಿಗೆ ನಿರಂತರವೂ ತೊಂದರೆ ಕೊಡುತ್ತಲಿದ್ದ ಕಂಟಕವು ಕಡಿದು ಹೋಗುವುದು.

ಸು:—ಅದೇನೋ ನೋಡೋಣ

ಹೀಗೆ ಮಾತನಾಡಿ ಮೂವರೂ ಒಳಗೆ ಹೋದರು. ಅಲ್ಲಿ ಭಿನ್ನ ಭಿನ್ನ ದೇವರ ಮೂರ್ತಿಗಳನ್ನು ಚಿತ್ರಿಸಿದ್ದರು. ಸುಬ್ಬಣ್ಣನವರು.—ಶ್ರೀನಿವಾಸರಾಯರೇ, ನೀವು ಜನರು ಜೂಜಾಡುತ್ತಲಿದ್ದ ಸ್ಥಳವನ್ನು ನೋಡಬಯಸುವಿರೇನು? ಎಂದು ಕೇಳಿದರು.

ಆಹುದು, ಮತ್ತೆ ಬಂದುದೇ ಅದಕ್ಕೆ? ಎಂದು ಶ್ರೀನಿವಾಸರಾಯ-ನರಸಿಂಗರಾಯರಿಬ್ಬರೂ ಹೇಳಿದರು.

ಆಗ್ಗೆ ಸುಬ್ಬಣ್ಣನವರು ಪಾತಾಳ ಲೋಕದ ಚಿತ್ರದ ಹತ್ತರ ಹೋಗಿ ಅದನ್ನು ಚನ್ನಾಗಿ ನಿರೀಕ್ಷಿಸಿದರು ಬೇಗನೆ ಅದರಲ್ಲಿದ್ದ ಒಂದು ಸ್ಪ್ರಿಂಗಿನ ಗುಂಡಿಯನ್ನು ದಬ್ಬಲು ಪಾತಾಳಲೋಕದ ಚಿತ್ರವು ಗೋಡೆಯಲ್ಲಿ ಸೇರಿ ದಾರಿಮಾಡಿಕೊಟ್ಟಿತು. ಮುಂದೆ ಸೋಪಾನವು ಸಿದ್ಧವೇ ಇದ್ದಿತು. ಮೂವರೂ ಕೆಳಗಿಳಿದು ಹೋಗಲು, ಅಲ್ಲಿ ಜೂಜಾಟದ ಸಕಲ ಸಾಹಿತ್ಯಗಳೂ ಸಿದ್ಧವಿದ್ದುವು. ಅಲ್ಲಿ ಬೇರೆ ಬೇರೆ ಚಿಕ್ಕ ಚಿಕ್ಕ ಕಪಾಟುಗಳಿದ್ದು ಅವುಗಳ ಮೇಲೆ ಬೇರೆ ಬೇರೆ ನಾಗರಿಕರ ಹೆಸರುಗಳಿದ್ದುವು. ಅವುಗಳಲ್ಲಿ ಅನೇಕರು ನಗರದ ಸುಪ್ರತಿಷ್ಠಿತ ಗೃಹಸ್ಥರಿದ್ದರು ಅವರ ಹೆಸರು ನೋಡಿ ಶ್ರೀನಿವಾಸರಾಯರಿಗೆ ಆಶ್ಚರ್ಯವುಂಟಾಯಿತು. ಅಲ್ಲಿಯೇ ಒಂದು ಕಪಾಟಿನಲ್ಲಿ ಅಲ್ಲಿ ಬರತಕ್ಕ ಜನರ ಹೆಸರಿನ ಪಟ್ಟಿಯಿದ್ದಿತು. ಶ್ರೀನಿವಾಸರಾಯರು ಅದನ್ನು

ಜೇಬಿನಲ್ಲಿ ಸೇರಿಸಿದನು. ಅಲ್ಲಿಂದ ಅವರು ಮೇಲೆ ಹತ್ತಲು ಹೊರಟರು. ಅದೇ ವೇಳೆಗೆ ಸುಬ್ಬಣ್ಣವರು ಶ್ರೀನಿವಾಸರಾಯರೇ, ಇಲ್ಲಿ ನೋಡಿರಿ, ಇವು ಕಳ್ಳ ದಾರಿಗಳು ಎಂದು ಹೇಳಿ, ಅಲ್ಲಿದ್ದ ನಾಲ್ಕಾರು ಭಾಗಗಳಲ್ಲಿನ ಸ್ಪ್ರಿಂಗಿನ ಗುಂಡಿಗಳನ್ನು ತೋರಿಸಿದರು. ಒಂದೊಂದನ್ನೇ ದಬ್ಬುತ್ತಲೇ ಗೋಡೆಯ ಒಂದೊಂದು ಭಾಗವು ಅದೃಶ್ಯವಾಗಿ ದಾರಿಯನ್ನೀಯುತ್ತಲಿದ್ದಿತು. ಅದೆಲ್ಲವನ್ನೂ ನೋಡಿ ಶ್ರೀನಿವಾಸರಾಯನು ಮಂಕು ಹಿಡಿದವನಾಗಿ ಸುಬ್ಬಣ್ಣವರೇ, ಇದೇನು ಮನೆಯೋ ಇಲ್ಲವೆ ದೆವ್ವನ ಗುಹೆಯೋ? ಎಂದು ಕೇಳಿದನು

ಮೂವರೂ ಮೇಲೆ ಹತ್ತಿ ಬಂದು ಅಲ್ಲಲ್ಲಿ ನೋಡುತ್ತ ನಿಂತಿರಲು, ಒಮ್ಮೆಲೆ ಅವರು ನಿಂತ ಭಾಗವು ಕುಸಿದು ಬಿದ್ದು ಮೂವರೂ ಭೂಗತರಾದರು ಅವರಿಗೆ ಏನಾಯಿತೆಂಬದು ತಿಳಿಯುವದಕ್ಕೆ ಮೊದಲೇ ಕೆಳಗಿಳಿದು ಹೋಗಿದ್ದರು.

ಮರುಕ್ಷಣದಲ್ಲಿಯೇ ಮೂವರೂ ದೊಪ್ಪನೆ ಕೆಳಗೆ ಬಿದ್ದರು ನೆಲಕ್ಕೆ ಸ್ಪ್ರಿಂಗ ಜೋಡಿಸಿದ್ದುದರಿಂದ ಅವರಿಗೆ ಪೆಟ್ಟು ಹತ್ತಲಿಲ್ಲ.

ಶ್ರೀ:—ಸುಬ್ಬಣ್ಣವರೇ; ಇದೇನಾಗಿರಬಹುದು?

ಸು:—ಯಾರೋ ನಾವು ಬಂದುದನ್ನರಿತಿರಬೇಕು; ಇಲ್ಲವಾದರೆ ಹೀಗೆಂದೂ ಆಗಲು ಶಕ್ಯವಿಲ್ಲ ಏಕೆ, ನರಸಿಂಗರಾಯರೆ?

ನ:—ನಿಮ್ಮ ಅಭಿಪ್ರಾಯ ಸರಿಯಿದೆ ಇಲ್ಲವಾದರೆ ಇದುವರೆಗೂ ಯಾವ ಆತಂಕವೂ ಇಲ್ಲದೆ ಈಗಲೆ ಹೀಗಾಗಬೇಕಾದರೆ .......

ಅಷ್ಟು ವೇಳೆಗೆ ಸ್ವಚ್ಛವಾದ ಪ್ರಕಾಶ ಬಿದ್ದಿತು ಶ್ರೀನಿವಾಸರಾಯರು ತಮ್ಮ ಮುಂಗೈ ಗಡಿಯಾರ ನೋಡಲು ಹತ್ತು ಹೊಡೆದಿದ್ದಿತು. ಒಡನೆಯೇ ಅವರಿಗೆ ಮುಂದಿನಂತೆ ಮಾತುಗಳು ಕೇಳಿ ಬಂದುವು:

ಹ್ಹಾ-ಹ್ಹಾ-ಹ್ಹಾ! ಅಂತೂ ಒಳಿತಾಗಿ ಸಿಕ್ಕುಬಿದ್ದಿರಿ. ನಗರವನ್ನೆಲ್ಲ ಕತ್ತಲೆಯಲ್ಲಿ ಕುಳ್ಳಿರಿಸಿದುದು ಇದಕ್ಕೆಂದೇ ಏನು? ಭಾಪು! ಭಾಪು!! ಇದು ನಿಜವಾಗಿಯೂ ತುಬ್ಬುಗಾರ ಸುಬ್ಬಣ್ಣವರ ಯುಕ್ತಿಯೇ ಇರಬೇಕು. ಇಲ್ಲವಾದರೆ ಈಗ ನೂರಾರು ವರ್ಷಗಳಿಂದ ಇಲ್ಲಿನ ಹೊರಗಿನ ಒಂದು ಪಿಳ್ಳೆಗೂ ಕೂಡ ಒಳ ಸೇರಲು ಅವಕಾಶ ದೊರೆತಿದ್ದಿಲ್ಲ ಭಾಪು! ಭಾಪು!! ಸುಬ್ಬಣ್ಣವರೇ, ಭಾಪು!

ಮಾತನಾಡುವವರಾರೆಂದು ಅತ್ತಿತ್ತ ನೋಡಲು ಒಂದು ಕನ್ನಡಿಯಲ್ಲಿ ಸ್ವಚ್ಛವಾದ ಪ್ರತಿಬಿಂಬವೊಂದು ಕಾಣಿಸಿತು. ಅದನ್ನು ನೋಡುತ್ತಲೇ ಸುಬ್ಬಣ್ಣವರು:-ಇಂದುಶೇಖರ ಎಂದರು.

ಅಹುದು. ಸುಬ್ಬಣ್ಣವರೇ, ಇಂದುಶೇಖರನೇ ಅಹುದು. ಮುಂಬಯಿ ಯಂತಹ ಪೋಲೀಸರ ಕೇಂದ್ರಸ್ಥಳವಲ್ಲಿಯೂ ನಮ್ಮ ಕೊಲೆ-ಸುಲಿಗೆಗಳನ್ನು ನಿರಾತಂಕವಾಗಿ ಸಾಗಿಸಿದ್ದೆವು ಹಾಗೆಯೇ ಕುಸುಮಪುರದಲ್ಲಿಯೂ ಪರರ ಯಾವ ಅಕ್ಷೇಪಣೆಯೂ ಇಲ್ಲದೆ ನಮ್ಮ ಕಾರ್ಯ ಕೊನೆಗಾಣಿಸಿದ್ದೆವು. ಆದರೆ ನೀವು ಬಂದು ನಮಗೆ ವಿಘ್ನತಂದಿರಿ. ನೀವು ಬಂದಾಗಿನಿಂದಲೂ ನನಗೆ ಸಂದೇಹವೇ ಬಂದಿತ್ತು. ಇಲ್ಲಿಯ ಅಧಿಕಾರಿಗಳನ್ನೆಲ್ಲ ಮೋಸಗೊಳಿ ಸಲು ಶಕ್ತರಾದ ನಮಗೆ ನಿಮ್ಮನ್ನು ಮೋಸಗೊಳಿಸಲು ಶಕ್ಯವಿಲ್ಲವೆಂದು ಯೋಚಿಸಿದ್ದೆವು. ನಮ್ಮ ಯೋಚನೆ ನಿಜವಾಗಿ ಪರಿಣಮಿಸಿತು

ಆದರೆ ಇವನಿಗೆ ಹೇಗೆ ಗೊತ್ತಾಯಿತು? ನರಸಿಂಗರಾಯರು ಮಧ್ಯ ದಲ್ಲಿಯೇ ನುಡಿದರು.

ನರಸಿಂಗರಾಯರೇ, ನಿಜವಾಗಿಯೂ ನಿಮಗೆ ನನ್ನ ಬಲದ ಜ್ಞಾನವಿಲ್ಲ ಸುಬ್ಬಣ್ಣವರು ಮಾತ್ರ ನನಗೆ ಮೀರಿ ಇರುವರು. ಆ ದಿವಸ ನಾನು ಅವ ರನ್ನು ಗೊತ್ತು ಹಚ್ಚಿಯೇ ಬಿಡುತ್ತಲಿದ್ದೆ; ಆದರೆ ನಾನು ಬರುವ ಪೂರ್ವದ ಲ್ಲಿಯೇ ಪಾರಾಗಿದ್ದರು. ಅಂದಿನಿಂದ ಇದುವರೆಗೆ ನಾನು ಅವರನ್ನು ಶೋಧ ಮಾಡುತ್ತಲಿದ್ದೇನೆ. ಎಲ್ಲಿಯೂ ಸಿಕ್ಕಲಿಲ್ಲ ಅವರು ತಮ್ಮ ಜೊತೆಗಾರರಿಂದ ಅಗಲಿರುವರು. ಅಂತೂ ಅವರ ಯುಕ್ತಿಯೇ ಯುಕ್ತಿಯು! ಅಂಥ ಅವರೂ ಆಕಸ್ಮಿಕವಾಗಿ ಇಂದು ಸಿಕ್ಕರು.

ಈಗ ಹೇಗೆ ಬಂದನಿವನು? ಶ್ರೀನಿವಾಸರಾಯನಂದನು.

ಶ್ರೀನಿವಾಸರಾಯರೇ, ನೀವು ಪೋಲೀಸ ಅಧಿಕಾರಿಗಳಾದ ಮಾತ್ರಕ್ಕೆ ತುಬ್ಬುಗಾರಿಕೆಯನ್ನರಿಯಲಾರಿರಿ ನಾನು ಹೇಗೆ ಬಂದೆನೆಂಬ ಬಗ್ಗೆ ಸುಬ್ಬ ಣ್ಣವರನ್ನು ಕೇಳಿರಿ. ಅವರು ಸ್ಪಷ್ಟೀಕರಿಸುವರು.

ಏನು ಸುಬ್ಬಣ್ಣವರೇ? ಶ್ರೀನಿವಾಸರಾಯನಂದನು.

ಅವನ ಮಾಯಾಜಾಲವನ್ನು ನಾನು ಹೇಗೆ ತಿಳಿಯಬಲ್ಲೆನು? ಸುಬ್ಬ ಣ್ಣವರಂದರು.

ಓಹೋ! ಅವರು ತೋರಿಸುವಷ್ಟು ಅಜ್ಞಾನಿಗಳಲ್ಲ, ತಿಳಿಯಿತೆ ಕಮಿಶ ನರ ಸಾಹೇಬರೇ, ಈಗ ನಿಮಗೆ ಸ್ವಸ್ಥವಾಗಿ ವಿಚಾರಿಸಲವಕಾಶ ದೊರೆಯ ಲೆಂದು ನಾನು ಹೋಗುವೆನು. ಆ ಮೇಲೆ ನಿಮ್ಮನ್ನು ಕಾಣುವೆನು. ಆಗ ಮುಂದಿನ ಯೋಚನೆ ತಿಳಿಸುವೆನು ಈಗ ಸದ್ಯ ನಮಸ್ಕಾರ.

ಇಂದುಶೇಖರನ ಪ್ರತಿಬಿಂಬವು ಅದೃಶ್ಯವಾಯಿತು.

ಮೂವರೂ ಮಂಕು ಹಿಡಿದವರಂತೆ ಕುಳಿತುಕೊಂಡರು. ಸ್ವಲ್ಪವೇಳೆ ಸುಮ್ಮನೆ ಕುಳಿತು ಆ ಮೇಲೆ ಶ್ರೀನಿವಾಸರಾಯನು ಏನು ಸುಬ್ಬಣ್ಣವರೇ, ಇವನಿಗೆ ಹೇಗೆ ತಿಳಿದಿರಬಹುದು? ಎಂದು ಕೇಳಿದನು

ಶ್ರೀನಿವಾಸರಾಯರೇ, ಇದೆಲ್ಲವೂ ನಾವು ನಿನ್ನೆ ಬಂದು ಹೋದುದರ ಪರಿಣಾಮ ಅಂದರೆ?

ನಿನ್ನೆ ಬಂದು ಹೋದುದು ಇವನಿಗೆ ತಿಳಿದಿರಬೇಕು ಇಂದುಶೇಖರನು ಅತ್ಯಂತ ಧೂರ್ತನಿರುವನು ನಿನ್ನೆ ಅವನು ನಮ್ಮ ಬೋಧದಲ್ಲಿಯೇ ಇದ್ದಿರಬೇಕು ಇಂದು ಅಕಸ್ಮಾತ್ತಾಗಿ ವಿದ್ಯುದ್ದೀವಿಗೆಗಳ ಆರಿ ಹೋಗಲು ಎಲ್ಲ ಂತೆ ನೋದಲು ಅವನೂ ಮೋಸಹೋಗಿರಬೇಕು, ಆದರೆ ನಾವು ಮೂವರನ್ನೂ ಕಾಣದಿದ್ದುದರ ಮೂಲಕ ಅವನು ಓಡುತ್ತಲೇ ಇಲ್ಲಿಗೆ ಬಂದಿರಬೇಕು? ಮತ್ತು ನಾವು ಇಲ್ಲಿರುವುದನ್ನರಿತು ಈ ವ್ಯವಸ್ಥೆಮಾಡಿರ ಬೇಕು ಆಂ! ಅಂತೂ ಒಳ್ಳೇ ಬದ್ಮಾಷನಿರುವನು.

ಬದ್ಮಾಷನೆಂದರೆ ಏನು? ದುಷ್ಟರ ಶಿರೋಮಣಿಯೇ . ಮುಂದೆ?
ಮುಂದಿನ ವಿಚಾರ ನಮ್ಮ ಕೈಯಲ್ಲಿ ಉಳಿದಂತೆ ತೋರುವುದಿಲ್ಲ
ಅಂದರೆ?

ಬಹು ಭದ್ರವಾದ ನೆಲಮನೆಯೇ ಇದಾಗಿರುತ್ತದೆ ದೇವರೇ ಈ ಕಾಲಕ್ಕೆ ಸಹಾಯ ಮಾಡಬೇಕೆಲ್ಲದೆ ಮನುಷ್ಯಯತ್ನಕ್ಕೆ ಸಿಲುಕುವಂತಿಲ್ಲ

ಮೂವರೂ ಅಕಸ್ಮಾತ್ತಾಗಿ ಬಲೆಯಲ್ಲಿ ಸಿಕ್ಕುಬಿದ್ದರು ಸುಬ್ಬಣ್ಣವರಿಗೆ ಇಂತಹ ಪ್ರಸಂಗಗಳು ಬಹಳ ಸಲ ಬಂದಿದ್ದವು ಆದರಿಂದ ಅವರಿಗೆ ವಿಶೇಷವೇನೂ ಅನಿಸಲಿಲ್ಲ ಒಂದಿಲ್ಲೊಂದು ಘಟನೆ ಸಂಭವಿಸಿ ಬಿಡುಗಡೆ ಆಗಿಯೇ ಆಗುತ್ತದೆಂಬ ಭರವಸೆ ಅವರಲ್ಲಿದ್ದಿತು ಅವರು ವಿಶೇಷ ಗೊಂದಲದಲ್ಲಿ ಬೀಳಲಿಲ್ಲ ನರಸಿಂಗರಾಯನಾದರೂ ಪತ್ತೆದಾರಿಯ ಪ್ರಕರಣಗಳಲ್ಲಿ ಇಂಥ ಪೇಚುಗಳನ್ನು ಹಲವು ಸಲ ಅನುಭವಿಸಿದ್ದನು ಆದುದರಿಂದ ಅವನಾದರೂ ಗಾಬರಿಯಾಗಲಿಲ್ಲ ಅವನು ಎಲ್ಲಾದರೊಂದು ಪಡುವು ಸಿಕ್ಕರೆ ನೋಡಬೇಕೆಂದು ಗೋಡೆಗಳನ್ನು ಸೂಕ್ಷ್ಮವಾಗಿ ನಿರೀಕ್ಷಿಸಹತ್ತಿದನು, ಆದರೆ ಶ್ರೀನಿವಾಸರಾಯನ ಸ್ಥಿತಿ ವಿಚಿತ್ರವಾಯಿತು ಅವನು ಯಾವಾಗಲೂ ಅಧಿಕಾರೀ ಅಪ್ಪಣೆಗಳನ್ನೀಯುವದರಲ್ಲಿಯೇ ಮಗ್ನನಾದವನು ಅವನಿಗೆ ಇಂತಹ ಪ್ರಸಂಗಗಳು ಬಹುತರ ಬಂದಿರಲೇ ಇಲ್ಲ. ಆಕಸ್ಮಿಕವಾಗಿ ವಿಪತ್ತಿಗೆ ಸಿಕ್ಕು ಬಿದ್ದಿರಲು, ಅವನು ಗಾಬರಿಯಾದನು. ಸಂಗಡಿಗರಿಬ್ಬರೂ ತನ್ನನ್ನು ಭೀರುವೆಂದು ಗ್ರಹಿಸಕೂಡದೆಂದು ಸಾಕಷ್ಟು ಯತ್ನಿಸುತ್ತಲಿದ್ದನು. ಆದರೂ ಭೀತಿ

ಯು ಮುಖದ ಮೇಲೆ ವ್ಯಕ್ತವಾಗದಿರಲಿಲ್ಲ. ಅವನು ತನ್ನ ಮನಸ್ಸಿನಲ್ಲಿ ಬಹಳವಾಗಿ ಚಡಪಡಿಸುತ್ತಲಿದ್ದನು. ತುಬ್ಬುಗಾರರ ಜೊತೆಯಲ್ಲಿ ಅಂತಹ ಭಯಂಕರವಾದ ಸ್ಥಳಕ್ಕೆ ಹೋದುದಕ್ಕೆ ತನ್ನನ್ನು ತಾನೇ ನಿಂದಿಸಿಕೊಳ್ಳ ಹತ್ತಿದನು. ಅಂತಹ ವಿಪತ್ತಿಗೆ ಆಕಸ್ಮಾತ್ತಾಗಿ ಸಿಲುಕಿಸಿದುದಕ್ಕೆ ತನ್ನ ದೈವವನ್ನು ದೂಷಿಸುತ್ತಲಿದ್ದನು. ಸುಬ್ಬಣ್ಣವರನ್ನೂ ಹಳಿಯುತ್ತಲಿದ್ದನು ಇಂದುಶೇಖರನನ್ನಂತೂ ಅಬ್ಬಾ! ಕೇಳುವದೇನು? ಮನಸ್ವೀ ಬಯ್ಯುತ್ತಲಿದ್ದನು. ಒಂದುವೇಳೆ ಅವನು ಕೈಯಲ್ಲಿ ಸಿಕ್ಕಿದ್ದಾಗಿದ್ದರೆ ಅವನ ಅವಸ್ಥೆ ಮುಗಿದೇ ಹೋಗುತ್ತಲಿದ್ದುದರಲ್ಲಿ ಸಂದೇಹವೇ ಇರಲಿಲ್ಲ. ಪಾಪ! ಆತ ಎಂದೂ ಇಂತಹ ತೊಂದರೆಗೆ ಸಿಲುಕಿದವನಲ್ಲ. ಆಕಸ್ಮಾತ್ತಾಗಿ ಸುಬ್ಬಣ್ಣವರ ಬಲುವೆಗೆ ಸಿಕ್ಕು ಬಂದಿರಲು, ದುಷ್ಕರ ದವಡೆಯಲ್ಲಿಯೇ ಸಿಕ್ಕಬೇಕಾಯಿತು ಪ್ರಾಣ ದಿಂದ ಪಾರುಗಾಣುವ ಆಶೆಯೇ ತೋರಲಿಲ್ಲ. ಅಂದಮೇಲೆ ಭಯಪಡದೇನು?

ಸುಬ್ಬಣ್ಣವರು ಅವನ ಮನಃಸ್ಥಿಯನ್ನರಿತರು; ಆದರೆ ಮಾಡುವುದೇನು? ಅವರಾದರೂ ಅಸಹಾಯ ಸ್ಥಿತಿಯಲ್ಲಿಯೇ ಇದ್ದರು. ಅವರು ಸ್ವಸ್ಥವಾಗಿ ಕುಳಿತಿರಲು, ಅವರಿಗೆ ಪಾರಾಗಿ ಹೋಗಲು ಯಾವದೊಂದು ಉಪಾಯ ದೊರಕಿತ್ತೆಂದಲ್ಲ; ಆದರೆ ಅವರು ಮನಸ್ಸು ತಮ್ಮ ಹಿಡಿತದಲ್ಲಿಟ್ಟುಕೊಂಡರು. ಆಗಾಗ್ಗೆ ಭೀತಿಗೆ ಅವಕಾಶಕೊಡಲಿಲ್ಲ. ಎಂತಹ ಸಂದರ್ಭವೊದಗಿದರೂ ಅವರು ತಮ್ಮ ಮನಸ್ಸನ್ನು ಹೊಯ್ದಾಡಗೊಡುತ್ತಿರಲಿಲ್ಲ. ಇದಕ್ಕಿಂತಲೂ ಭೀಕರವಾದ ಅನೇಕ ಕಾರಾಗೃಹಗಳಿಂದ ತೊಂದರೆಯಿಲ್ಲದೆ ಪಾರುಗಂಡ ಅವರಿಗೆ ಇದನ್ನಾದರೂ ದಾಟಿಹೋಗಬಹುದೆಂಬ ಭರವಸೆಯಿದ್ದಿತು. ಒಂದುವೇಳೆ ದಾಟದೇ ಅಲ್ಲಿಯೇ ಅಂತ್ಯವಾಗುವ ಸಮಯ ಬಂದರೂ ಅವರು ಭಯಪಡುತ್ತಲಿರಲಿಲ್ಲ. ಕೈಕೊಂಡ ಕಾರ್ಯಗಳಲ್ಲಿ ಮರಣ ಬಂದರೂ ಅದಕ್ಕವರು ಸಿದ್ಧರೇ ಇದ್ದರು.

ರಾತ್ರಿ ಬಹಳವಾದುದರಿಂದ ಮೂವರೂ ಅಲ್ಲಿಯೇ ಸಿದ್ಧವಿದ್ದ ಹಾಸಿಗೆಗಳಲ್ಲಿ ಮಲಗಿದರು ಬೆಳಗಿನ ಉಪಹಾರದ ಕಾಲಕ್ಕೆ ಮತ್ತೆ ಚರ್ಚೆಗಾರಂಭವಾಯಿತು. ಇಂದುಶೇಖರನು ತಮ್ಮನ್ನೇಕೆ ಹಿಡಿದುಹಾಕಿರುವನೆಂಬುದೇ ಸಮಸ್ಯೆಯಾಗಿದ್ದಿತು.

ಸು — ಇದನ್ನೆಲ್ಲ ನೋಡುತ್ತಿರಲಾಗಿ ಈ ಕೊಲೆಯಲ್ಲಿ ಇಂದುಶೇಖರನದೇ ಮುಖ್ಯಪಾತ್ರವಾಗಿದೆ.

ಶ್ರೀ: — ಇನ್ನಾರೂ ಇಲ್ಲವೇ?

ಸು:— ಇದ್ದಾರೆ, ಇನ್ನೂ ಬೇರೆ ಬೇರೆ ಜನರುಂಟು

ಶ್ರೀ:— ಅವರಾರು?          ಸ :— ಮಧುಕರನ ಮಡದಿಯೊಬ್ಬಳು.

ಶ್ರೀ:— ಆಂ, ಮಧುಕರನ ಹೆಂಡತಿಯೆ?

ಸು:— ಅಹುದು ಆಕೆಯೇ? ಮತ್ತು ......

ಶ್ರೀ:— ಮತ್ತಾರು?

ಸು:— ಮತ್ತೆ ನಿನ್ನೆ ಗುಪ್ತವಾಗಿರಿಸಲು ಹೇಳಿದ್ದೆನಲ್ಲ?

ಶ್ರೀ:— ಅಹುದು.

ನರಸಿಂಗರಾಯನು ಅವರ ಭಾಷಣದಲ್ಲಿ ಭಾಗವಹಿಸಲಿಲ್ಲ ಅವನ ಲಕ್ಷ್ಯವು ಬೇರೊಂದು ಸಂಗತಿಯಲ್ಲಿ ತೊಡಗಿದ್ದಿತು. ಕೋಣೆಯಲ್ಲಿ ಕಳ್ಳ ಬಾಗಿಲು ಎಲ್ಲಾದರೂ ಇದ್ದರೆ, ಕಾಣಬೇಕೆಂದು ಅವನು ಕೋಣೆಯಲ್ಲವನ್ನೂ ಬಹಳ ಸೂಕ್ಷ್ಮವಾಗಿ ನಿರೀಕ್ಷಿಸುತ್ತಲಿದ್ದನು ಗೋಡೆಯಲ್ಲಿನ ಪ್ರತಿಯೊಂದು ಗೂಟ-ಮೊಳೆಗಳನ್ನು ನೋಡುತ್ತಲಿದ್ದನು ಹಾಗೆ ಅವನು ದೃಷ್ಟಿಸುತ್ತಲಿರಲು, ಒಂದೆಡೆ ಅವನಿಗೆ ಏನೋ ಸಂಶಯ ಬಂದಿತು. ಅವನು ಅತ್ತಿತ್ತ ನೋಡಿ ಅಲ್ಲಿ ಎದ್ದು ಹೋದನು ಗೋಡೆಯು ಒಂದು ಚಚ್ಚೌಕು ಮೊಳೆ ಬಿರುಕು ಬಿಟ್ಟಂತೆ ಕಾಣಿಸಿತು. ಅದು ಕಳ್ಳಬಾಗಿಲೇ ಇರಬೇಕೆಂದು ಅವನು ಬಹಳ ಲಕ್ಷ್ಯಗೊಟ್ಟು ನೋಡಹತ್ತಿದನು ಆ ಭಾಗಕ್ಕೆ ಹೊಂದಿ ಮೇಲ್ಗಡೆಗೆ ಒಂದು ಸ್ಪ್ರಿಂಗಿನ ಗುಂಡಿ ಕಾಣಿಸಿತು ಗೋಡೆಗೆ ಬಣ್ಣ ಹಚ್ಚುವಾಗ್ಗೆ ಅದಕ್ಕೂ ಬಣ್ಣ ಬಳಿದುದರಿಂದ ಅದು ಬೇರೆಯಾಗಿ ಕಾಣುತ್ತಲೇ ಇರಲಿಲ್ಲ. ನರಸಿಂಗರಾಯನು ಬಹಳ ಸೂಕ್ಷ್ಮವಾಗಿ ನಿರೀಕ್ಷಿಸಲು ಅದು ಕಾಣಿಸಿತು. ಅವನು ಆನಂದದಿಂದ ಆ ಗುಂಡಿಯನ್ನು ತಟ್ಟಿದನು. ಕೂಡಲೆ ಅವನಿಗೆ ಮೊದಲು ಸಂಶಯ ಬಂದ ಗೋಡೆಯ ಬಾಗಿಲು ಅದೃಶ್ಯವಾಯಿತು.' ಒಳಗೆ ಏನಿದೆಯೆಂದು ಆತುರತೆಯಿಂದ ಇಣುಕಲು, ಅಲ್ಲಿ ಹತ್ತೆಂಟು ವಿದ್ಯುತ್ತಿನ ಸ್ವಿಚ್ಚುಗಳಿದ್ದವು ನರಸಿಂಗರಾಯನು ಒಂದು ಸ್ವಿಚ್ಚು ಒತ್ತಲು ಆವರು ಕುಳಿತ ಕೋಣೆಯ ಗೋಡೆಯಲ್ಲಿ ಒಂದು ಭಾಗವು ಮಾಯವಾಯಿತು. ಶ್ರೀನಿವಾಸರಾಯನು ಧಿಗ್ಗನೆದ್ದು ಹೋಗಿ ಅಲ್ಲಿ ಇಣುಕಲು ಅವನಿಗೆ ಏನೂ ಕಾಣಲಿಲ್ಲ ಕತ್ತಲೆಯು ತುಂಬಿಹೋಗಿದ್ದಿತು. ಅವನು ದಿಙ್ಮೂಢನಾಗಿ ಒಳಗೆ ಕಾಲಿಕ್ಕುವ ಎದೆಯಾಗದೆ ನಿಂತುಕೊಂಡಿರಲು ನರಸಿಂಗರಾಯನು ಇನ್ನೊಂದು ಸ್ವಿಚ್ಚು ಒತ್ತಿದನು. ಆಗ್ಗೆ ಅಲ್ಲಿ ಸ್ವಚ್ಛವಾದ ಪ್ರಕಾಶ ಬಿದ್ದಿತು ಒಡನೆಯೇ ಅಲ್ಲಿಯ ನೋಟವನ್ನು ನೋಡಿ ಶ್ರೀನಿವಾಸರಾಯನು ಚಿಟ್ಟನೆ ಚೀರಿದನು

ಎಂತೆಂತಹ ಭೀಕರ ನೋಟಗಳಿಗೂ ಭಯಪಡದ ಪೋಲೀಸ ಕಮಿಶ

ನರ ಶ್ರೀನಿವಾಸರಾಯನು ಅಷ್ಟು ಭಯಚಕಿತನಾದುದನ್ನು ನೋಡಿ, ಸುಬ್ಬಣ್ಣ ನರಿಸಿಂಗರಾಯರಿಬ್ಬರೂ ಆಶ್ಚರ್ಯಚಕಿತರಾಗಿ ಎದ್ದು ಅಲ್ಲಿಗೆ ಹೋದರು ಅಲ್ಲಿಯ ಆ ಭಯಾನಕ, ಅಸಹ್ಯಕರ ನೋಟವನ್ನು ನೋಡಿ ನರಸಿಂಗರಾಯನಂತೂ ಗದಗದನೆನಡಗಹತ್ತಿದನು. ಸುಬ್ಬಣ್ಣವರಿಗೂ ಭಯ ವೆನಿಸದಿ-ಲಿಲ್ಲ ಅಂತಹ ಎದೆಗಾರನನ್ನೂ ಎದೆಗೆಡುವಂತೆ ಮಾಡಲು ಅಲ್ಲಿ ಇದ್ದುದಾದರೂ ಏನು?

ಅಲ್ಲಿ ನಾಲ್ಕಾರು ಉಕ್ಕಿನ ಭಯಂಕರ-ಮರಣವನ್ನೀಯುವ-ಯಂತ್ರ ಗಳಿದ್ದುವು ಒಂದು ಉಕ್ಕಿನ ಗಾಣವಿದ್ದಿತು ಕಬ್ಬು ಹಾಕುವಂತೆ ಅದರಲ್ಲ ಮನುಷ್ಯನನ್ನು ಇಟ್ಟು ಗಾಣ ತಿರುಗಿಸುತ್ತಲಿದ್ದ ಕಲ್ಪನೆ ಬಂದು ಅವರು ಬಹಳವಾಗಿ ಭಯಪಟ್ಟರು ಒಂದು ವಿದ್ಯುತ್ತಿನಿಂದ ಆಲ್ಲಾಡುವ ಗರಗಸ ವಿದ್ದಿತು ಇಂತಹವೇ ಇನ್ನೂ ಎರಡು ಮೂರು ಸಾಧನಗಳಿದ್ದುವು. ತಮ ಗಾದರೂ ಅವುಗಳಲ್ಲಿ ಒಂದು ಪ್ರಾಪ್ತವಾಗಬಹುದೆಂಬ ಭೀತಿಯಿಂದ ಅವರು ಬಹಳ ಬೆಂಡಾದರು

ಆ ಅಸಹ್ಯಕರ ಭೀಕರ ನೋಟವನ್ನು ನೋಡಲು ಹೇಸಿಕೆಯೆನಿಸಿ ನರ ಸಿಂಗರಾಯನ ಮರಳಿ ಸ್ವಿಚ್ಚುಗಳಿದ್ದಲ್ಲಿ ಹೋಗಿ ಮೊದಲಿನ ಸ್ವಿಚ್ಚು ಕೆಳಗೆ ಒತ್ತಿದನು. ಮೊದಲಿನ ಬಾಗಿಲು ಬಂದಾಗುವುದಕ್ಕೆ ಬದಲು ಇನ್ನೊಂದು ಗೊಡೆಯಒಳಗಿನ ಬಾಗಿಲೊಂದು ತೆರೆಯಿತು. ಅಲ್ಲಿ ಕತ್ತಲು ಇರದೇ ಕೆಂಪು ಪ್ರಕಾಶ ಹೊರಹೊಮ್ಮುತ್ತಲಿದ್ದಿತು ಅದೇನೆಂದು ಇಣುಕಲು ಭಯಂಕರ ವಾದ ಬೆಂಕಿ ಧಗ ಧಗನೇ ಉರಿಯುತ್ತಲಿದ್ದಿತು. ಆ ಸಹಸ್ರಜಿಹ್ವನ ಆಳವಿನಲ್ಲಿ ಸಿಕ್ಕಿದ್ದಾದರೆ ಒಳಿತಾಗದೆಂದು ತಿಳಿದು ಹಿಂದೆ ಸರಿದರು.

• ನರಸಿಂಗರಾಯರಿಗೆ ಆಶ್ಚರ್ಯವೆನಿಸಿತು. ಸ್ವಿಚ್ಚು ಮೇಲೆ ಮಾಡಿದರೆ ಬಾಗಿಲು ತೆರೆಯಿತು. ಕೆಳಗೆ ಮಾಡಿದರೆ ಬಾಗಿಲು ಇಕ್ಕುವುದಕ್ಕೆ ಬದಲು ಇನ್ನೊಂದು ತೆರೆಯಿತು ಇನ್ನೊಂದನ್ನಾದರೂ ಪ್ರಯೋಗ ಮಾಡಿ ನೋಡುವಾ ಎಂದು ಮತ್ತೊಂದು ಸ್ವಿಚ್ಚು ಒತ್ತಿದನು. ಕೂಡಲೆ ಇನ್ನೊಂದು ಗೋಡೆಯ ಭಾಗವು ಅದೃಶ್ಯವಾಯಿತು ಅಲ್ಲಿ ದುರ್ಗಂಧಮಯ ಗಾಳಿ ಬರ ಹತ್ತಿತು. ನರಸಿಂಗರಾಯನು ಮಂಕುಹಿಡಿದವನೇ ಆದನು. ಸುಮ್ಮನೆ ಕುಳಿತಿರದೆ ಏನಾದರು ಕೆಟ್ಟ ಕೆಲಸಕ್ಕೆ ಕೈಹಾಕಿದಂತಾಯಿತು ತಾನು ಮಾಡಹೋದದ್ದೊಂದು, ಆದರೆ ಆದುದಿನ್ನೊಂದು ಅವನಿಗೆ ಏನೂ ತಿಳಿಯ ದಂತಾಯಿತು ಒಂದು ಬಾಗಿಲಿಂದ ದುರ್ಗಂಧ ಬರಹತ್ತಿದ್ದರೆ, ಇನ್ನೊಂದು ಬಾಗಿಲಿಂದ ಬೆಂಕಿಯ ಝಳವು ಬರಹತ್ತಿದ್ದಿತು. ಮತ್ತೊಂದರಿಂದ ರಕ್ತ-

ಮಾಂಸಗಳ ಭೀಕರ ನೋಟವು ಕಾಣುತ್ತಲಿದ್ದಿತು. ಅವುಗಳನ್ನು ಆದಷ್ಟು ಬೇಗನೆ ಮುಚ್ಚಬೇಕೆನ್ನುತ್ತಲಿದ್ದನು, ಆದರೆ ಮುಚ್ಚುವದು ಹೇಗೇ ಮುಂಗಾಣದೆ ಮೂಕನಂತೆ ನಿಂತು ಬಿಟ್ಟನು.

ಹ್ಹಾ ಹ್ಹಾ ಹ್ಹಾ! ಏನು, ಪತ್ತೆದಾರ ಸಾಹೇಬರೆ? ಹೇಗಿದೆ ಜೂಜಾಟದವರ ಕೈ. ಅವರನ್ನು ನಾಶಗೊಳಿಸಬೇಕೆನ್ನುವಿರಲ್ಲವೆ? ಹೇಗಿದೆ? ಕಮಿಶನರ ಸಾಹೇಬರೇ, ಇನ್ನೂ ಈ ಪ್ರಕರಣ ಕೊನೆಗಂಡಿಲ್ಲ; ಆದರೂ ನೀವು ಸುಮ್ಮನೆ ಬಿದ್ದುಕೊಂಡಿರಲಿಕ್ಕೇಬೇಕು ಇಲ್ಲವಾದರೆ ಈಗಲೇ ನಿಮ್ಮನ್ನು ನಾಶಗೊಳಿಸಿ ಬಿಡುವೆ. ಇಕೋ, ನೋಡಿರಿ ನಮ್ಮ ಸಾಧನಗಳನ್ನು, ಹೀಗೆ ನುಡಿಯುತ್ತಲೆ ನೆಲಕ್ಕೆ ಹೊಂದಿಸಿದ ಹಾಸುಗಲ್ಲುಗಳಲ್ಲಿ ಒಂದು ಮಾಯವಾಯಿತು. ಕೆಳಗೆ ಇಣುಕಲು ನೀರಿನ ಪ್ರವಾಹವುಹರಿಯುತ್ತಲಿದ್ದಿತು. ಅದೆಷ್ಟುಆಳವಿದ್ದಿತೋ ತಿಳಿದವರಾರು? ಆದರೂ ಬಹಳ ಭೀಕರಾಕಾರ ತಾಳಿದ್ದಂತೆ ತೋರುತ್ತಲಿದ್ದಿತು.

ಇಗೊಳ್ಳಿ. ಇನ್ನೂ ನೋಡಿರಿ ಎನ್ನುತ್ತಲೇ ಮತ್ತೊಂದು ಕಲ್ಲು ಮರೆಯಾಯಿತು ಅಷ್ಟರಲ್ಲಿ ಇನ್ನೊಂದು ಹೀಗೆ ಅವರು ನಿಂತಷ್ಟು ಉಳಿದು, ಉಳಿದುದೆಲ್ಲವೂ ಹೋಗಿಬಿಟ್ಟು ನೀರಿನ ಪ್ರವಾಹವೇ ಕಾಣಹತ್ತಿತು.

ಕಮಿಶನರ ಶ್ರೀನಿವಾಸರಾಯನ ತಲೆ ತಿರುಗಹತ್ತಿತು ತಾವು ಅದೆಲ್ಲಿಯೋ ಯಮಲೋಕವೆಂದು ಪುರಾಣಗಳಲ್ಲಿ ವರ್ಣಿಸಲ್ಪಟ್ಟಿಲ್ಲವೆ? ಅಂತಹ ಒಂದು ಯಮಲೋಕದಲ್ಲಿ ಹೋಗಿದ್ದು, ಅಲ್ಲಿ ಯಮನು ತಮ್ಮ ಶಿಕ್ಷೆಗೆ ಎಂದು ಆ ಎಲ್ಲ ಸಾಧನಗಳನ್ನು ಅಣಿಮಾಡಿಟ್ಟಿದ್ದನೆಂದೂ, ಶಿಕ್ಷೆ ಕೊಡುವದಷ್ಟೇ ಶಿಲುಕು ಉಳಿದಿತ್ತೆಂದೂ ನಂಬಿಬಿಟ್ಟನು. ದೈನ್ಯದ ಮೂರ್ತಿಯೇ ಆಗಿ ಭೀತಿಯಿಂದ ಆ ಭಯಂಕರ ನೋಟವನ್ನು ಟಕಮಕ ನೋಡುತ್ತ ನಿಂತುಬಿಟ್ಟನು.

ನರಸಿಂಗರಾಯನಾದರೂ ಬಹಳವಾಗಿ ಬೆದರಿದ್ದನು. ಸುಬ್ಬಣ್ಣವರೇ, ಎಂತಹ ಭಯಂಕರ ಮನುಷ್ಯರಿರುವರು? ಪ್ರತ್ಯಕ್ಷ ಯಮನಿಗೆ ಸರಿಯಾಗಿ ನಿಂತಿರುವರು. ಮನುಷ್ಯತ್ವವು ಅಲ್ಪವಾದರೂ ಇದೆಯೆ ಇವರಲ್ಲಿ? ಎಂದರು.

ಹ್ಹಾ-ಹ್ಹಾ-ಹ್ಹಾ! ಪತ್ತೆದಾರ ಸಾಹೇಬರೇ, ನೀವು ಇಲ್ಲದ ಉಪದ್ವ್ಯಾಪಕ್ಕೆಹೋದುದರಿಂದ ನಾವು ಇಷ್ಟು ಕ್ರೂರರಾಗಬೇಕಾಯಿತು. ತಿಳಿಯಿತೇ? ಇದರಲ್ಲಿ ನಮ್ಮ ಅಪರಾಧವೇನೂ ಇಲ್ಲ. ಇದುವರೆಗೆ ಪೋಲೀಸರು ಈ ಸ್ಥಳದ ಶೋಧಕ್ಕೆ ನೂರಾರು ಸಲವಾದರೂ ಬಂದದ್ದಿರಬಹುದು; ಆದರೆ ನಾವು

ಒಮ್ಮೆಯಾದರೂ ಹೀಗೆ ಮಾಡಿದ್ದೇವೆ? ಈಗಲೆ ಮೂವರನ್ನೂ ಕೊಲೆ ಮಾಡಬಹುದಿತ್ತು; ಆದರೆ ನಮ್ಮ ಕಾರ್ಯಕಾರೀ ಮಂಡಳಿಯು ಬೇಗನೆ ಕೂಡತಕ್ಕದ್ದಿದೆ. ಅವರು ನಿರ್ಣಯಿಸುವವರೆಗೆ ಸುಮ್ಮನೆ ಇರಬೇಕಾಗಿದೆ ಆದುದರಿಂದ ಅದುವರೆಗೂ ನಿಮಗೆ ಅವಕಾಶವಿದೆ, ಮತ್ತು ಅಷ್ಟುವೇಳೆಯು ವರೆಗೆ ನೀವು ಈಶಚಿಂತನೆಯಲ್ಲಿ ಕಾಲ ಕಳೆಯುತ್ತ ಸುಮ್ಮನೆ ಬಿದ್ದುಕೊಂಡಿರಿ ಏನಾದರೂ ಹೆಚ್ಚು-ಕಡಿಮೆ ಮಾಡಲೆತ್ನಿಸಿದರೆ ಆರೆಕ್ಷಣದಲ್ಲಿ ನಿಮ್ಮ ಹೆಸರು ಸಹ ಉಳಿಯಲಿಕ್ಕಿಲ್ಲ. ಜೋಕೆ!

ಹೀಗೆ ನುಡಿಯುತ್ತಲೇ ಮೊದಲಿನಂತೆ ಎಲ್ಲ ಕಲ್ಲುಗಳೂ ಮತ್ತೆ ಮತ್ತೆ ಬಂದು ಕೂಡ್ರಹತ್ತಿದುವು ಗೋಡೆಯೊಳಗಿನ ಬಾಗಿಲುಗಳೂ ಬಂದಾದವು ಎಲ್ಲವೂ ಮೊದಲಿನಂತಾದರೂ ಮುನ್ನಿನ ಆ ಭೀಕರ ಭಯಾನಕ-ಅಸಹ್ಯಕರ ನೋಟಗಳು ಪ್ರತ್ಯಕ್ಷವಾಗಿ ಎದುರಿನಲ್ಲಿಲ್ಲದಿದ್ದರೂ ಅವರ ಮನಸ್ಸಿನಲ್ಲಿ ಮನೆ ಮಾಡಿ, ಅಲ್ಲಿಂದ ಅಲ್ಪವಾದರೂ ಅಲ್ಲಾಡದಾದುವು ತಾವು ನೆಲದಲ್ಲಿ ಹಾಸು ಗೆಯ ಮೇಲೆ ಮಲಗಿದ್ದರೂ ಆ ಹಾಸುಗಲ್ಲಿನ ಬುಡದಲ್ಲಿನ ಆ ಪ್ರವಾಹವು ಸದಾ ಸರ್ವದಾ ಸಿದ್ಧವಿದ್ದು, ಬೇಕಾದ ಕ್ಷಣದಲ್ಲಿ ತಾವು ಅದಕ್ಕೆ ಆಹುತಿಯಾಗ ಬಹುದೆಂಬ ಅಂಜಿಕೆ ಮಾತ್ರ ಸ್ಥಿರವಾಗಿದ್ದಿತು.

ಮಧ್ಯಾಹ್ನದ ಊಟ-ಉಪಚಾರಗಳೆಲ್ಲವೂ ಯಥಾಪ್ರಕಾರ ಕೊನೆ ಗಂಡವು ಅವರ ಊಟ ಮುಗಿಯುವ ಹೊತ್ತಿಗೆ ಊರೊಳಗಿನ ದೈನಿಕ ಪತ್ರವೊಂದನ್ನು ಓದಲು ತಂದಿತ್ತರು.

'ಕುಸುಮಪುರ ವೃತ್ತ'

ಅತ್ಯಂತ ಆಶ್ಚರ್ಯದ ಸಂಗತಿ! ಅಧಿಕಾರಿಗಳು ಮಾಯವಾದರು!

ಕುಸುಮಪುರ ಸಂಸ್ಥಾನದ ಪೋಲೀಸ ಖಾತೆಯ ಸುಪರಿಂಟೆಂಡೆಂಟ ರಾದ ಶ್ರೀ. ರಾ. ರಾ. ಶ್ರೀನಿವಾಸರಾಯರು, ಸಿ. ಐ. ಡಿ ಇನ್ಸಪೆಕ್ಟರರಾದ ಶ್ರೀಮಾನ್ ನರಸಿಂಗರಾಯರು, ಹುಬ್ಬಳ್ಳಿಯ ಸುಪ್ರಸಿದ್ಧ ತುಬ್ಬುಗಾರರಾದ ಶ್ರೀಮಾನ್ ಸುಬ್ಬಣ್ಣವರು ಹೀಗೆ ಮೂವರೂ ಆಕಸ್ಮಿಕವಾಗಿ ಕಾಣದಾ ಗಿರುವರು: ಯಾವ ಕಾರ್ಯದ ಮೂಲಕವೂ ಡ್ಯೂಟಿಯ ಮೇಲೆ ಹೋದ ವಾರ್ತೆಯಿಲ್ಲ

ನಗರದಲ್ಲೆಲ್ಲ ಗೊಂದಲವೆದ್ದು ಹೋಗಿದೆ. ಈ ಅಧಿಕಾರಿಗಳ ಅದೃಶ್ಯದ ಕಾರಣವು ಯಾರಿಗೂ ತಿಳಿಯದಾಗಿದೆ. ಬಹುತರ ಕುಸುಮಪುರದ ಹೊರಗೆ ಎಲ್ಲಿಯೋ ಹೋಗಿದ್ದು, ಅಲ್ಲಿ ನೀಚರಾರೋ ಅವರ ಕೊಲೆ ಮಾಡಿರಬಹು ದೆಂದು ತರ್ಕವಿದೆ. ಇನ್ನೂ ಕೆಲವರು ಅವರು ಬೇಟೆಗೆಂದು ಹೋದವರು

ಅಲ್ಲೆಲ್ಲಿಯೋ ಉಳಿದಿರಬಹುದೆಂದೂ ಊಹಿಸುತ್ತಾರೆ. ಸರಿಯಾದ ಸಂಗತಿ ತಿಳಿಯದಾಗಿದೆ.

ಖುದ್ದ ಮಹಾರಾಜರೇ ಈ ಮೂವರು ಅಧಿಕಾರಿಗಳ ಬಗ್ಗೆ ಚಿಕಿತ್ಸೆ ಮಾಡುತ್ತಲಿದ್ದಾರೆ

ತುಬ್ಬುಗಾರರ ಶೋಧಕ್ಕೆ ತುಬ್ಬುಗಾರರನ್ನು ನಿಯಮಿಸುವ ಸಮಯ ಬಂದಿದೆ

ಹೀಗಿದ್ದಿತು ಇನ್ನೂ ಎಷ್ಟೋ ವಿಧವಾದ ಸುದ್ದಿ-ಸಂಗತಿಗಳು ಅದರಲ್ಲಿ ದ್ದವು. ಅವುಗಳನ್ನೆಲ್ಲ ಓದಿದರು ಅದೆಷ್ಟೋ ವೇಳೆ ಚರ್ಚಿಸಿದರೂ ಫಲಿತಾಂಶವೇನೂ ಹೊರಡಲಿಲ್ಲ

ಶ್ರೀನಿವಾಸರಾಯನಂತೂ ಸಂಪೂರ್ಣ ನಿರಾಶನೇ ಆಗಿದ್ದನು ನರಸಿಂಗರಾಯನಾದರೂ ನಿರಾಶೆಯುತ್ತವೇ ಹೋಗುತ್ತಲಿದ್ದನು. ಸುಬ್ಬಣ್ಣವರು ಮಾತ್ರ ಸ್ವಸ್ಥರಾಗಿದ್ದರು. ಸುಬ್ಬಣ್ಣವರು ಕೊಂಚವಾದರೂ ಅಲ್ಲಾಡದೆ ಶಾಂತರಾಗಿರುವದನ್ನು ನೋಡಿ ಅವರಿಬ್ಬರಿಗೂ ಆಶ್ಚರ್ಯವೆನಿಸಿತು. ಅದರಲ್ಲಿ ಶ್ರೀನಿವಾಸರಾಯನಂತೂ ಆಶ್ಚರ್ಯಮೂಢನೇ ಆಗಿ ಹೋಗಿದ್ದನು.

ಶ್ರೀ:— ಸುಬ್ಬಣ್ಣವರೇ, ನಿಮಗೆ ಇನ್ನೂ ಬಿಡುಗಡೆಯಾಗುವ ಆಶೆಯಿದೆಯೇನು?

ಸು:—ಆಶೆಯಿಲ್ಲವೆಂದು ಹೇಗೆ ಹೇಳುತ್ತೀರಿ?

ಶ್ರೀ:—ಹೇಗೆಂದರೇನು? ತೀರಾ ಅಸಹಾಯಸ್ಥಿತಿಯಲ್ಲಿ ಬಿದ್ದಿರುತ್ತೇವೆ. ನಾವಿರುವ ಸ್ಥಳ ನಮ್ಮನ್ನು ಬಂದಿಯಾಗಿಟ್ಟ ಈ ಬದ್ಮಾಷರ ಹೊರತು ಇನ್ನಾರಿಗೂ ತಿಳಿಯದು. ಇವರಾದರೋ ನಮ್ಮನ್ನು ನಾಶ ಮಾಡುವವರೇ ಹೊರತು ಉಳಿಸುವದು ಸಾಧ್ಯವೇ ಇಲ್ಲ. ಹೀಗಿದ್ದರೂ ನೀವು ಇನ್ನೂ ಆಶೆ ಹಿಡಿದಿರುವಿರಲ್ಲ?

ಸು.— ಶ್ರೀನಿವಾಸರಾಯರೇ, ಈ ಎಲ್ಲ ಸುಷ್ಟ-ದುಷ್ಟ ಜನರಾಚೆಗೆ ಪರಮಾತ್ಮನೊಬ್ಬನಿರುವನೆಂಬ ಬಗ್ಗೆ ನಿಮಗೆ ವಿಶ್ವಾಸವಿದೆಯೆ?

ಶ್ರೀ:— ಇಲ್ಲದೇನು? ಸೃಷ್ಟಿಯನ್ನು ನಿರ್ಮಿಸಿ ಹೊತ್ತು ಕಾಯುತ್ತಲಿರುವ ಆ ದೇವದೇವನಲ್ಲಿ ವಿಶ್ವಾಸವಿಲ್ಲವೆಂದರೆ ಹೇಗೆ?

ಸು:—ಆಗೊಳ್ಳಿ. ನಾನಾದರೂ ಆ ಪರಮಾತ್ಮನಲ್ಲಿ ಪೂರ್ಣ ವಿಶ್ವಾಸ ವಿಟ್ಟಿರುವೆನು. ಆತನು ಒಂದಿಲ್ಲೊಂದು ರೂಪದಿಂದ ಬಂದು ನಿಶ್ಚಯವಾಗಿ ಸಹಾಯ ಮಾಡುತ್ತಾನೆಂದು ನನ್ನ ಪೂರ್ಣ ನಂಬಿಗೆಯಿದೆ.

ಶ್ರೀ:—ಪರಮಾತ್ಮನು ನಮ್ಮನ್ನು ಉಳಿಸಬಹುದೆ?

ಸು:-ಆತನಿಗೆ ಪ್ರಶ್ನೆ ಮಾಡುವ ಅಧಿಕಾರ ಯಾರದು? ಮುಖ್ಯವಾಗಿ ಆತನಲ್ಲಿ ಶ್ರದ್ಧೆಯಿಟ್ಟು ನಿಶ್ಚಿಂತರಾಗಿರ್ರಿ ನಾವು ನಮ್ಮ ಮನೆಯಲ್ಲಿದ್ದಷ್ಟೇ ನಿಶ್ಯಂಕೆಯಿಂದಿರೋಣ ಸತ್ಯ ಕೆಲಸಕ್ಕಾಗಿ ಯತ್ನಿಸುವ ನಮಗೆ ಇದ್ದದ್ದರಲ್ಲಿ ತನ್ನ ನೆರವನ್ನು ನೀಡಿಯೇ ನೀಡುವನು. ಒಂದು ವೇಳೆ ನಮಗೆ ಇದರ ಲ್ಲಿಯೇ ಮರಣ ಬಂದರೆ ಖೇದ ಹೊಂದಲು ಕಾರಣವಿಲ್ಲ ಒಮ್ಮಿಲ್ಲೊಮ್ಮೆ ತಪ್ಪದೆ ಆಗಮಿಸುವ ಆ ಮರಣವು ಇಂತಹ ಸತ್ಕಾರ್ಯಕ್ಕೆ ಯತ್ನಿಸುವ ಸಮಯದಲ್ಲಿ ಬಂದರೆ ನಾವು ಅತ್ಯಾನಂದದಿಂದ ಸ್ವಾಗತಿಸತಕ್ಕದ್ದು.

ಹೀಗೆ ಅದೆಷ್ಟೋ ವೇಳೆ ಚರ್ಚೆ ನಡೆಯುವದು ಸುಬ್ಬಣ್ಣವರು ಪ್ರತಿ ಸಲ ಶ್ರೀನಿವಾಸರಾಯನಿಗೆ ದೇವರಲ್ಲಿ ನಂಬುಗೆಯಿಟ್ಟು ಸ್ವಸ್ಥವಾಗಿರುವಂತೆ ಉಪದೇಶಿಸುತ್ತಲಿದ್ದರು.

ಆದರೆ ಸ್ವತಃ ಸುಬ್ಬಣ್ಣವರು? ಅವರಲ್ಲಿ ದೇವದೇವನ ವಿಷಯಕ್ಕೆ ಅಚಲವಾದ ಭಕ್ತಿಯಿದ್ದಿತು, ಆದರೆ ದೇವರ ಮೇಲೆ ಭಾರ ಹಾಕಿ ಪ್ರಯತ್ನ ಮಾಡದೆ ಸ್ವಸ್ಥವಾಗಿ ಕುಳಿತು ಬಿಟ್ಟಿದ್ದರೆ? ಛೆ, ಅದು ಅವರ ಸ್ವಭಾವವೇ ಅಲ್ಲ, ಅವರಾವಾಗಲೂ, 'ಪ್ರಯತ್ನಾಂತೇ ಪರಮೇಶ್ವರಃ' ಅನ್ನುವವರು ಹಾಗಿದ್ದರೆ? ಸ್ವಸ್ಥವಾಗಿ ಕುಳಿತಿದ್ದ ಕಾರಣವೇನಿದ್ದಿತು?

ಅವರೇನಾದರೂ ಹೊರಗಿನ ನೆರವನ್ನು ಹೊಂದುವ ಭರವಸೆಯುಳ್ಳವ ರಾಗಿದ್ದರೆ? ಅಹುದು ಅವರು ಒಂದು ವ್ಯಕ್ತಿಯಿಂದ ಸಹಾಯ ದೊರಕುವು ದೆಂದು ನಂಬಿದ್ದರು. ಆತನಾರು? ಮುರಾರಿ

ಅಹುದು. ಅವನೇನು ಮಾಡಿದನೆನ್ನುವುದನ್ನು ನೋಡೋಣ.

----

## ● ಮು ರಾ ರಿ. ●

ಅಂದು ರಾತ್ರಿಯಲ್ಲಿ ಮುರಾರಿ, ಮುಂಬಯಿಯಿಂದ ಕುಸುಮಪುರಕ್ಕೆ ಬಂದ ತರುಣನ ಹಿಂದೆ ಹೊರಟುದನ್ನು ಓದುಗರು ಮರೆತಿರಲಿಕ್ಕಿಲ್ಲ. ರಾತ್ರಿ ಒಂದರ ಸಮಯಕ್ಕೆ ಗಾಡಿಯನ್ನು ಹತ್ತಿದನು. ಎರಡನೇ ವರ್ಗದಲ್ಲಿ ಕುಳಿ ತಿದ್ದನು. ಅದರಲ್ಲಿಯೂ ಕುಸುಮಪುರ ಸಂಸ್ಥಾನದ ರೈಲು. ಕೇಳುವುದೇನು? ಒಳ್ಳೇ ಸುವ್ಯವಸ್ಥೆಯಲ್ಲಿದ್ದಿತು. ಅವನು ಆನಂದದಿಂದ ಯಾವ ಅನಾನು ಕೂಲತೆಯೂ ಇಲ್ಲದೆ ಕುಳಿತಿದ್ದನು. ರಾತ್ರಿ ಬಹಳವಾಗಿದ್ದಿತು. ನಿದ್ರೆಯೂ ಬಾಧಿಸಹತ್ತಿತು, ಆದರೆ ಮಲಗಿ ನಿದ್ರಿಸುವಂತಿರಲಿಲ್ಲ. ಬಂದ ಆ ತರುಣನು ಮಲಗಿದ್ದನೋ ಹೇಗೆ ಎಂದರಿಯಲು ಮುಂದಿನ ಒಂದು ನಿಲ್ಲುಮನೆಯಲ್ಲಿ ಕೆಳ

ಇಳಿದು ಹೋಗಿ ನೋಡಿದನು ಅವನು ಮಲಗಿ ನಿದ್ರಿಸುತ್ತಲಿದ್ದನು. ಅವನು ನಿದ್ರೆಯನ್ನೇ ಮಾಡುತ್ತಲಿದ್ದನೆಂದು ಚನ್ನಾಗಿ ಮನವರಿಕೆ ಮಾಡಿಕೊಂಡು ಬಂದು ತಾನೂ ಕೊಂಚ ಅವಧಿ ಮಲಗಿದ್ದನು.

ಮುರಾರಿಯಾದರೂ ಸುಬ್ಬಣ್ಣವರ ಶಿಷ್ಯ. ತಬ್ಬುಗಾರರಲ್ಲಿ ಅಥವಾ ದೊಡ್ಡ ಜನರಲ್ಲಿ ಇದೊಂದು ವೈಶಿಷ್ಟ್ಯವೇ ಇರುವುದುಂಟು. ಅವರಿಗೆ ಬೇಕಾದ ಸಮಯದಲ್ಲಿ ಬೇಕಾದಷ್ಟು ತೊಂದರೆಗಳಿದ್ದರೂ ನಿದ್ರೆ ಬರುತ್ತದೆ, ಮತ್ತು ಇನ್ನೂ ಹೆಚ್ಚಿನ ಸಂಗತಿಯೆಂದರೆ, ಅವರು ಬೇಕಾದಷ್ಟೇ ಅವಧಿ ಮಲಗಿ ನಿದ್ರಿಸಬಲ್ಲರು. ಮುರಾರಿ ಗಾಡಿಬಿಡುವ ಸಮಯಕ್ಕೆ ಮಲಗಿದವನು ಮುಂದಿನ ನಿಲ್ಲುಮನೆ ಬರುವ ಸಮಯಕ್ಕೆ ಎದ್ದೇ ಬಿಟ್ಟನು. ಒಡನೆಯೇ ಅವನು ಗಾಡಿಯಿಂದ ಕೆಳಗಿಳಿದು ಹೋಗಿ ನೋಡಲು ಅವಸರಿಲ್ಲ. ಅವನು ಕೊಂಚ ಶೋಧಕ ಬುದ್ಧಿಯಿಂದ ಚಿಕಿತ್ಸೆ ಮಾಡಲು ಅವನು ಕೆಳಗಿಳಿದು ಎತಕ್ಕೋ ಹೋದವನು ಮತ್ತೆ ಮರಳಿ ಬಂದನು. ಹೀಗಾದರೆ ಬಹಳ ತೊಂದರೆಯಾಗುವುದೆಂದು ತಿಳಿದು, ಮುರಾರಿ ತನ್ನದೂ ಎರಡನೆಯ ವರ್ಗದ ಟಿಕೇಟು ಇದ್ದ ಮೂಲಕ ಅವನಾದರೂ ಅದೇ ಡಬ್ಬಿಯಲ್ಲಿ ಕುಳಿತನು. ಆ ಹೊಸ ತರುಣನು ಒಂದು ಸಲ ಅವನ ಕಡೆಗೆ ನಿರೀಕ್ಷಿಸಿದನು, ಆದರೆ ಅವನಿಗೆ ವಿಶೇಷ ಏನೂಸಂಗತಿ ತಿಳಿಯದಿದ್ದುದರಿಂದ ಯಾವಗೊಂದಲಕ್ಕೂ ಹೋಗದೆ ಸುಮ್ಮನೆ ಮಲಗಿದನು, ಮುರಾರಿಯಾದರೂ ಮಲಗಿದನು. ನಿಲ್ಲುಮನೆ ದಾಟುತ್ತಲೇ ಮುಂದಿನ ನಿಲ್ಲುಮನೆಗೆ ಬರುವವರೆಗೆ ನಿದ್ರಿಸಿದವನು ಎಚ್ಚರಾಗುತ್ತಲಿದ್ದನು. ಹೀಗೆ ಮಾರ್ಗದಲ್ಲಿ ವಿಶೇಷ ತೊಂದರೆಗಳಿಲ್ಲದೆ ನಡೆಯಿತು.

ಮರುದಿನಮಧ್ಯಾಹ್ನದ ಮೂರುಗಂಟೆಗೆಅವರುಮುಂಬೈಗೆ ತಲುಪಿದರು. ಅಲ್ಲಿಯ ನಿಲ್ಲುಮನೆಯಲ್ಲಿಳಿಯುತ್ತಲೇ ಮುರಾರಿ ಅಲ್ಪಾವಧಿಯಲ್ಲಿಯೇ ತನ್ನ ಸಾಹೇಬೀ ವೇಷ ಕಳಚಿ ಮುಸಲ್ಮಾನ ಸಭ್ಯಗೃಹಸ್ಥನ ವೇಷದಿಂದ ಬಂದು ಮತ್ತೆ ಆ ತರುಣನ ಬೆನ್ನು ಹತ್ತಿದನು. ಇಬ್ಬರೂ ಟ್ರಾಮು ಹತ್ತಿದರು.

ಅಲ್ಲಿಂದಹೊರಟವರುಅಲ್ಲಿಯ ಒಂದುಹೋಟೆಲ್ಲು ಹೊಕ್ಕರು. ಮುರಾರಿಯಾದರೂ ಹಿಂದೂಹೋಟೆಲಿನಲ್ಲಿಯೇಹೋದನು. ಅವನು ಮುಂದೆ ಹೊಗಿ ಆ ಹೊಸ ತರುಣನ ಸಮೀಪದಲ್ಲಿಯೇ ಕುಳಿತನು. ಇಬ್ಬರೂ ತಮಗೆ ಬೇಕಾದ ಸಾಮಾನು ತರಿಸಿ ತಿನ್ನಹತ್ತಿದರು.

ದುಷ್ಟ ಚಟಗಳು ತೀರಾ ವಿಘಾತುಕವಾದುವು. ಅವುಗಳಿಂದಾಗುವ ಹಾನಿ ಬಹಳವಾದುದು. ಮನುಷ್ಯನ ಆರೋಗ್ಯವನ್ನುಕೆಡಿಸಿಅಲ್ಪಾಯುಷಿಯನ್ನಾಗಿ ಮಾಡುತ್ತಿವೆಯಲ್ಲದೆ, ಹತ್ತರಿದ್ದ ಹಣವನ್ನು ಹಾಳು ಮಾಡಿ ಅವ

ನನ್ನೂ ಅವನ ಬಂಧು-ಭಾಂಧವರನ್ನೂ ಗೋಳಿಗೀಡು ಮಾಡುತ್ತವೆ. ಇದೆಲ್ಲವೂ ನಿಜವೆ ಈ ಸಂಗತಿಯನ್ನು ಅನೇಕ ಮುಂದಾಳುಗಳು ಡಾಕ್ಟರರು (ಸ್ವತಃ ತಮಗಲ್ಲ) ಹೇಳಿರುವರು. ನಾನು ಹೇಳುವ ವಿಷಯ ಅದಲ್ಲ. ಆ ದುಷ್ಟ ಚಟಗಳಲ್ಲಿಯಾದರೂ ಒಂದು ಸುಷ್ಟ ಪರಿಣಾಮವಿಲ್ಲದಿಲ್ಲ. ಹಲವು ಜನರು ಹಲವು ವಿಧವಾಗಿ ಸುಪರಿಣಾಮಗಳನ್ನು ಹೇಳುತ್ತಾರೆ; ಆದರೆ ಸಾಮಾನ್ಯವಾದ ಒಂದು ಒಳ್ಳೆಯ ಪರಿಣಾಮವೆಂದರೆ ಸಖ್ಯಕ್ಕೆ ಅವು ಬಹಳವಾಗಿ ಸಹಾಯ ಮಾಡುತ್ತವೆ ಗಾಡಿ-ಮೋಟಾರುಗಳ ಪ್ರವಾಸವು ಅದನ್ನು ಇನ್ನೂ ಸುಗಮವನ್ನಾಗಿ ಮಾಡಿದೆ ಗಾಡಿಯಲ್ಲಿ ಕುಳಿತಾಗ್ಗೆ ಯಾವದೊಂದು ಚಟವಿದ್ದರೆ ಅಲ್ಲಿಯ ಎಲ್ಲ ಪ್ರವಾಸಿಗಳ ಪರಿಚಯ ಬಹು ಬೇಗನೆ ಆಗುತ್ತದೆ. ಅದರಲ್ಲಿಯೂ ಹೊಗೆಬತ್ತಿಯು ಎಲ್ಲಕ್ಕೂ ಹಿರಿದು ಹೊಗೆಬತ್ತಿಯ ಚಟದಿಂದ ಜನತೆಯಲ್ಲಿ ಸಖ್ಯ-ಪ್ರೇಮಗಳು ಹೊಗೆಗಿಂತಲೂ ಬಹು ಬೇಗನೆ ಪ್ರಸಾರ ವಾಗುತ್ತಲಿವೆ. ಯಾವನೊಬ್ಬನು ಹೊಗೆಬತ್ತಿ ಸೇದುವುದನ್ನು ನೋಡಿದೊಡನೆ ಉಳಿದವರಿಗೆ ಅವನ ವಿಷಯವಾಗಿ ತಿರಸ್ಕಾರವೆನಿಸಬಹುದು; ಆದರೆ ಇನ್ನೊಬ್ಬ ಹೊಗೆಬತ್ತಿಯ ಚಟದವನಿಗೆ ಅವನ ವಿಷಯವಾಗಿ ಆತ್ಮೀಯ ಭಾವನೆಯುಂಟಾಗುತ್ತದೆ. ತನ್ನ ಹಾಗೆ ಅವನೂ ಹೊಗೆಬತ್ತಿಯ ಭಕ್ತನಿರುವ ಮೂಲಕ ಅವನ ವಿಷಯವಾಗಿ ಸಹಾನುಭೂತಿಯುಂಟಾಗುತ್ತದೆ. ಸಹಾನುಭೂತಿಯೊಡನೆ ಸಖ್ಯ ಮಾಡುವ ಬಗ್ಗೆ ಜಿಜ್ಞಾಸೆಯುಂಟಾಗುತ್ತದೆ. ಮತ್ತೇನು ತಡ? ಅವನ ಊರು, ಪರಿಚಯವನ್ನು ಕೇಳಿಯೇ ಬಿಡುತ್ತಾರೆ ಅವರಿಗೆ ಕಾರಣವನ್ನಾದರೂ ಶೋಧಿಸ ಹೋಗಬೇಕಿಲ್ಲ? ತಮ್ಮ ಜೇಬಿನಿಂದ ಹೊಗೆಬತ್ತಿ ತೆಗೆದು ಕೈಯಲ್ಲಿ ಹಿಡಿದು ಏನು ಸ್ವಾಮೀ. ಕೊಂಚ ಬೆಂಕೀಪೆಟ್ಟಿಗೆ ಕೊಡುತ್ತೀರಾ? ಎಂದರಾಯಿತು ಆತನಾದರೂ ತನ್ನ ಒಬ್ಬ ಸಹಚಟ, ಸಹೋದ್ಯೋಗಿ, ತನ್ಮೂಲಕ ಸಹೋದರನೇ ಎಂದು ಭಾವಿಸಿ, ಅತೀವ ಆದರ ಭಾವ ತಳೆದು ಕಡ್ಡಿಯನ್ನು ಕೊಡುತ್ತಾನೆ. ಆ ಮೇಲೆ ಸ್ವಾಭಾವಿಕವಾಗಿ ನಿಮ್ಮದು ಯಾವ ಊರು? ಎಂಬ ಪ್ರಶ್ನೆ ಮುಂದೆ ಬರುತ್ತದೆ. ಸುರುವಾಯಿತು, ಕಡ್ಡಿಯಿಂದಾರಂಭವಾದುದು ಗುಡ್ಡ ಅಡ್ಡ ಬಂದರೂ ಬಿಡದಂತಹ ಗೆಳೆತನ ಕೂಡಿಯೇ ಬಿಡುತ್ತದೆ ಅಂತೆಯೇ ಕವಿಗಳು ಸಮಾನ ಶೀಲ ವ್ಯಸನೇಷು ಸಖ್ಯಂ। ಎಂದಿರುವರು.

ಮುರಾರಿಯಾದರೂ ಅಂತಹದೇ ಒಂದು ಕಾರಣವನ್ನು ಶೋಧಿಸಿ ಆತನನ್ನು ಮಾತನಾಡಿಸಿದನು ಮನುಷ್ಯನಾವಾಗಲೂ ಸ್ತುತಿಪ್ರಿಯನು. ಹಾಗೆಯೇ ಒಂದೆರಡು ಮಾತುಗಳಲ್ಲಿ ಆತನ ಸ್ತುತಿಮಾಡಿ ಬಿಡಲು, ಅವನು

ಮುರಾರಿಯೊಡನೆ ಚನ್ನಾಗಿ ಹರಟೆ ಹೊಡೆಯಹತ್ತಿದನು ಹೀಗೆ ಮುರಾರಿ ಯುಕ್ತಿಯಿಂದ ಮಾತನಾಡಿಸಿ, ಅವನ ಸಂಗತಿಯನ್ನೆಲ್ಲ ತಿಳಿದುಕೊಂಡನು ಅವನ ಹೆಸರು ಕೃಷ್ಣರಾಯ ಅವನ ಊರು ಕರ್ನಾಟಕದಲ್ಲಿ ಒಂದಿದ್ದಿತು, ಆದರೆ ಅವನು ಶಿಕ್ಷಣದ ಸಲುವಾಗಿ ಮುಂಬಯಿಯಲ್ಲಿ ಬಂದಿದ್ದವನು ಅಲ್ಲಿಯೇ ವೃತ್ತಪತ್ರದ ಕಚೇರಿಯೊಂದರಲ್ಲಿ ತಿಂಗಳಿಗೆ ನೂರೈವತ್ತು ರೂಪಾಯಿ ಸಂಬಳದ ಮೇಲೆ ಕೆಲಸ ಮಾಡುತಲಿದ್ದನಂತೆ ಅವನ ತಂದೆ ಮರಣಹೊಂದಿದ್ದರಿಂದ ಅಲ್ಲಿನ ವ್ಯವಸ್ಥೆ ಮಾಡಿ ಬರಲು ಹೋಗಿದ್ದನು ಅಲ್ಲಿಂದ ಮರಳಿ ಅದೇ ಬಂದಿದ್ದನು ತಂದೆಯ ಲಕ್ಷಾವಧಿ ಆಸ್ತಿಗೆ ತಾನೇ ಒಡೆಯನಾದುದರಿಂದ. ಇನ್ನು ವೃತ್ತಪತ್ರದಲ್ಲಿನ ಕೆಲಸ ಬಿಟ್ಟು ಮುಂಬಯಿಯಲ್ಲಿಯೇ ಆನಂದದಿಂದಿರಬೇಕೆಂದು ನಿರ್ಧರಿಸಿದ್ದನು ಇಷ್ಟೆಲ್ಲ ಸಂಗತಿಯನ್ನು ಅವನಿಂದ ತಿಳಿದುದಲ್ಲದೆ ಲಕ್ಷಾವಧಿ ಆಸ್ತಿಗೆ ಒಡೆಯನಾದುದರ ಸಂತೋಷದ ಸ್ಮರಣೆಯೆಂದು ಅವನಿಂದಲೇ ತನ್ನ ಉಪಹಾರದ ವೆಚ್ಚವನ್ನು ಕೊಡಿಸಿದನು ಆ ಮೇಲೆ ಕೃಷ್ಣರಾಯನು ಮುರಾರಿಗೆ ಮರುದಿನ ತನ್ನ ವಾಸಸ್ಥಾನಕ್ಕೇನೇ ಊಟಕ್ಕೆ ಬರಬೇಕೆಂದು ಆಗ್ರಹದ ಆಮಂತ್ರಣವಿತ್ತನು ಮುರಾರಿ ಮೊದಮೊದಲು ತನ್ನ ಅನಾನುಕೂಲತೆಯನ್ನು ತೋರಿಸಿದರೂ ಕೊನೆಗೆ ಬಲುಮೆಗೊಳಗಾದವನಂತೆ ಸಮ್ಮತಿಸಿದನು ಹಿಂದೂ ಮುಸಲ್ಮಾನರ ಒಕ್ಕಟ್ಟಿನ ಪ್ರಾರಂಭವನ್ನೇ ಇಬ್ಬರೂ ಕೂಡಿ ನಿರ್ಧರಿಸಿದ್ದಂತೆ ತೋರಿತು

ಕೃಷ್ಣರಾಯನ ಮುಂಬೈಯ ಜೀವನದ ಸಂಗತಿಯನ್ನು ದೊರೆಕಿಸಿ ಮುರಾರಿ ಬೇರೊಂದು ಸ್ಥಳದಲ್ಲಿ ಹೋಗಿ ವಸತಿಹಾಕಿದನು ಅಂದು ಚನ್ನಾಗಿ ವಿಶ್ರಾಂತಿ ಹೊಂದಿದನು. ಸಾಯಂಕಾಲಕ್ಕೆ ಎದ್ದು ಮುಂಬೈನಗರದ ಸೊಬಗನ್ನು ನಿರೀಕ್ಷಿಸುವದಕ್ಕೆಂದು ಕಾಲುನಡಿಗೆಯಿಂದ ಹೊರಬಿದ್ದನು.

ನಾವು ಹಳ್ಳಿಯಲ್ಲಿರುವವರು ಮುಂಬೈ ಏನು? ವಿಜಯನಗರವೇನು? ಅದೂ ನಮ್ಮ ಊರಿನಂತಹ ಊರೇ ಅಲ್ಲವೆ? ಅಲ್ಲಿಯೂ ನಮ್ಮಂತೆಯೇ ಎರಡು ಕಾಲುಗಳ ಜನರೇ ವಾಸಿಸುವುದಿಲ್ಲವೆ? ಅವರಿಗೇನು ಕೋಡುಗಳಿರುತ್ತವೆಯೊ? ಇಲ್ಲವೆ ಮನೆಗಳು ಕೆಳಗು ಮೇಲಾಗಿ ಜಂತಿ ಕೆಳಗೆ, ನೆಲವೆ ಮೇಲೆ ಹೀಗೇನಾದರೂ ಇರುತ್ತದೆಯೆ? ನಮ್ಮ ಮನೆಗಳಂತೆಯೇ ಮನೆಗಳಿರುತ್ತವೆ ಭೇದವಿಷ್ಟೆ, ನಮ್ಮವು ಹೆಂಟೆ-ಮಣ್ಣುಗಳಿಂದಕಟ್ಟಲ್ಪಟ್ಟಿದ್ದರೆ, ಅವರವು ಗಚ್ಚು ಕಲ್ಲು–ಉಲ್ಲ, ಇಟ್ಟಂಗಿ-ಸಿಮೆಂಟುಗಳಿಂದ ಕಟ್ಟಲ್ಪಟ್ಟಿರುತ್ತವೆ ನಮ್ಮ ಮನೆಗಳಿಗೆ ಮೇಲೆ ಮುರುಕ ಜಂತಿ ಹುಳುಕ ಗಳಗಳು ಇದ್ದರೆ ಅವರ ಮನೆಗಳಿಗೆ ಉಕ್ಕಿನ ಜಂತಿ ಹಾಸುಗಲ್ಲುಗಳಿರುತ್ತವೆ. ನಮ್ಮವು ನಾಲ್ಕು ಐದು ಫೂಟು

ಎತ್ತರವಿದ್ದರೆ ಅವರವು ನಾಲ್ವತ್ತು-ಐವತ್ತು ಫೂಟು ಎತ್ತ-ವಿರುತ್ತವೆ. ಇಷ್ಟೇ ಅಲ್ಲವೆ? ಇದೇನು ಮಹಾ ಆಶ್ಚರ್ಯದ ಸಂಗತಿ? ಇಷ್ಟಕ್ಕೆ ಅಷ್ಟು ಹಣ ವೆಚ್ಚ ಮಾಡಿಕೊಂಡು ಹೋಗುವದೇಕೆ? ಇನ್ನು ಸಮುದ್ರವೇ? ಅದು ನಮ್ಮ ಕುಡಿಯುವ ನೀರಿನ ಕೆರೆಯಂತಹದು ಬಹಳ ದೊಡ್ಡದು ಇಷ್ಟೆ? ಮತ್ತು ಅಲ್ಲಿಯ ಜನರಾದರೂ ನಮ್ಮ ಹಾಗೆಯೇ ಇರುತ್ತಾರೆ ಭೇದವಿಷ್ಟೆ. ನಾವು ಹರುಕು, ಉರುಟು ಅರಿವೆ ತೊಟ್ಟರೆ, ಅವರು ತಿಳುವಾದ, ಶರೀರವೆಲ್ಲ ಒಡೆದು ಕಾಣುವಂತಹ, 'ಉಫ್' ಎಂಬರೆ ಹಾರುವಂತಹ ಅರಿವೆ ಧರಿಸುತ್ತಾರೆ ಇನ್ನೇನು? ನಾವು ರೊಟ್ಟಿ-ಹಿಂಡಿ ತಿಂದರೆ, ಅವರು ಚಹ-ಬ್ರೆಡ್ಡು ಮುಂತಾ ದವುಗಳಿಂದಲೇ ಕಾಲ ಕಳೆಯುತ್ತಾರೆ ನಾವು ಮುಂಜಾವಿನಿಂದ ಸಂಜೆಯ ವರೆಗೆ ಉದ್ಯೋಗದಲ್ಲಿಯೇ ಕಾಲ ಕಳೆದರೆ, ಅವರು ಅನ್ಯರನ್ನು ಮೋಸಗೊಳಿ ಸುವದರಲ್ಲಿಯೇ ಮಗ್ನರಾಗಿರುತ್ತಾರೆ ನಾವು ಇರುಳಿನಲ್ಲಿ ದೇವರ ನಾಮ ಸ್ಮರಣ, ಚಿಕ್ಕ ಮಕ್ಕಳನ್ನು ನಗಿಸುವದರಲ್ಲಿ ಕಾಲಕಳೆದರೆ, ಅವರು ಸಿನೇಮಾ, ನಾಟಕ, ಕ್ಲಬ್ಬ ಮುಂತಾದವುಗಳಲ್ಲಿ ಕಾಲ ಕಳೆಯುತ್ತಾರೆ. ಅಂದಲ್ಲಿ ಅಲ್ಲಿಗೆ ಹೋಗಲು ಕಾರಣವೇನು? ಎಂದು ಕೇಳುವುದುಂಟು, ಆದರೆ ಅಲ್ಲಿಯ ಸೊಬಗು ಇಷ್ಟೇಯೇ ಇಲ್ಲವೆ ಇನ್ನೂ ಇದೆಯೋ ಅನ್ನುವದು ಅಲ್ಲಿಯವರೆಗೆ ಹೋಗದೆ ಹೇಗೆ ತಿಳಿಯಬೇಕು? ಇರಲಿ ಹಣ ವೆಚ್ಚವಮಾಡಿಕೊಂಡು ಹೋಗುವವರಿಗೆ ಮುಂಬಯಿಯೇನು? ಲಂಡನ್ನವೇನು? ಅದು ಅವರವರ ಸಾಂಪತ್ತಿಕ ಸ್ಥಿತಿಯ ಪ್ರಶ್ನೆಯಲ್ಲದೇ ಇನ್ನೇನೂ ಅಲ್ಲ

ಮುರಾರಿ ಮುಂಬಯಿಗೆ ಹೋಗಿದ್ದ. ಅವನೇನು ಅದನ್ನು ನೋಡ ಬೇಕೆಂದು ಹೋದವನಲ್ಲ. ತನ್ನ ಕಾರ್ಯದ ಮೂಲಕ ಹೋಗಿದ್ದ. ಅವ ಕಾಶವಿದ್ದುದರಿಂದ ಮುಂಬೈ ನಗರದ ಸೊಬಗು ನೋಡಲು ಹೊರಟದ್ದ. ಮುಂಬೈ ನಗರದ ಸೊಬಗನ್ನು ಬೇರೆಯಾಗಿ ನಾನು ಬಣ್ಣಿಸಬೇಕೆಂಬುದೆನೂ ಇಲ್ಲ. ಬಹಳ ಜನ ಬರೆಹಗಾರರು ಈ ಕಾರ್ಯ ಮಾಡಿಯೇ ಮಾಡಿರುವರು ಮತ್ತು ಓದುಗರಾದರೂ ಅನೇಕ ಸಲ ಓದಿಯೇ ಓದಿರುವರು. ಆದುದರಿಂದ ನಾನು ಈ ಕೆಲಸಕ್ಕೆ ಹೋಗಲಾರೆನು. ಅನೇಕ ಬರೆಹಗಳಲ್ಲಿ ಓದಿದ, ಟಾಕಿ (Talkie)ಗಳಲ್ಲಿ ನೋಡಿದ ಮುಂಬೈ ನಗರದ ಎಲ್ಲ ವರ್ಣನೆಗಳನ್ನು ತಮ್ಮ ಮನಸ್ಸಿನಲ್ಲಿ ಒಂದುಗೂಡಿಸಿಕೊಂಡರೆ ಸಾಕು. ಮುರಾರಿ ಆ ಎಲ್ಲ ಭಾಗಗಳನ್ನು ನೋಡಿದ ಅವನು ತುಬ್ಬುಗಾರನಾದುದರಿಂದ ಮುಂಬೈ ನಗರದಲ್ಲ ಅಲ್ಲಲ್ಲ ನಿತ್ಯವೂ ನಡೆಯುತ್ತಲಿದ್ದ ಕಳವು-ಮೋಸಗಳನ್ನು ಚನ್ನಾಗಿ ನಿರೀಕ್ಷಿಸಿದ ಆ ಬಗ್ಗೆ ಅವನು ಉದ್ದವಾದ ಲೇಖನವೊಂದನ್ನು

ಬರೆದು ಪ್ರಕಟಿಸಿ ಮುಂಬೈಗೆ ಹೋಗುವವರು ಮುಂಜಾಗ್ರತೆ ವಹಿಸಬೇಕಾದ ಸಂಗತಿಗಳ ಬಗ್ಗೆ ತಿಳಿಹೇಳಬೇಕೆಂದಿದ್ದಾನೆ. ಅದೇನೋ ಬೆಳಕಿಗೆ ಬಂದಾಗ್ಗೇನೇ ನಿಜ ಇರಲಿ ಸದ್ಯದ ವಿಷಯುವನ್ನು ನೋಡುವಾ.

ಮರುದಿನ ಏಳುವಷ್ಟರಲ್ಲಿ ಮುರಾರಿ ಮಲಗಿದ್ದ ಕೋಣೆಯ ಬಾಗಿಲಿನಲ್ಲಿಯೇ ವೃತ್ತಪತ್ರದ ಹುಡುಗನೊಬ್ಬನು, ಕ್ರಾನಿಕಲ್, ಸಂಯುಕ್ತಕರ್ನಾಟಕ, ಕುಸುಮಪುರವೃತ್ತ ಎಂದು ಮುಂತಾಗಿ ಕೂಗಹತ್ತಿದನು. ಮುರಾರಿಗೆ ವೃತ್ತಪತ್ರಗಳನ್ನು ಓದುವ ರೂಢಿಯಿರಲಿಲ್ಲ. ಅವರು ಕೊಡುವ ಸಂಗತಿಗಳು ಅಷ್ಟು ಮಹತ್ವ (?) ವಾದವುಗಳೆಂದು ಅವನು ಅಭಿಪ್ರಾಯ ಪಡುತ್ತಲಿದ್ದನು, ಆದರೂ ತಾನು ದೂರ ಪ್ರದೇಶದಲ್ಲಿದ್ದುದರಿಂದ ಅಲ್ಲಿಯ ಸಂಗತಿಯನ್ನರಿಯಬೇಕೆಂದು ಮೇಲಿನ ಮೂರೂ ಪತ್ರಗಳನ್ನು ಕೊಂಡು ನೋಡಹತ್ತಿದನು. ಅದರಲ್ಲಿ ಕುಸುಮಪುರ ವೃತ್ತವನ್ನೇ ಮೊದಲು ತೆಗೆದನು. ಕುಸುಮಪುರವೃತ್ತದಲ್ಲಿ ಪ್ರಸಿದ್ಧಿಸಲ್ಪಟ್ಟ ಶ್ರೀನಿವಾಸರಾಯ ಮುಂತಾದವರು ಅದೃಶ್ಯವಾದ ಸಂಗತಿಯನ್ನು ಓದಿ ಅವನು ಗೊಂದಲದಲ್ಲಿ ಬಿದ್ದನು. ಬರಿಯ ಸುಬ್ಬಣ್ಣವರ ವಿಷಯ ವಾದರೆ ಅಷ್ಟು ಯೋಚನೆಗೆ ಅವಕಾಶವಿರಲಿಲ್ಲ, ಆದರೆ ಪೋಲೀಸ ಅಧಿಕಾರಿ ಶ್ರೀನಿವಾಸರಾಯ, C. I. D. ಖಾತೆಯ ಇನಸ್ಪೆಕ್ಟರ ನರಸಿಂಗರಾಯ ಹೀಗೆ ಮೂವರೂ ಮಾಯವಾದ ಕಾರಣವೇನು? ಇಂದುಶೇಖರನ ಬೆನ್ನು ಹತ್ತಿ ಏನಾದರೂ ಅಪಾಯಕ್ಕೆ ಗುರಿಯಾಗಿರಲಿಕ್ಕಿಲ್ಲವೇ? ಹಾಗೇನಾದರೂ ಆಗಿದ್ದರೆ ನಾನು ಆದಷ್ಟು ಬೇಗನೆ ಮರಳುವುದು ವಿಹಿತವಲ್ಲವೆ?............ಅವನ ಮನಸ್ಸು ಸುಬ್ಬಣ್ಣವರ ವಿಷಯುವಾಗಿ ಹರಿಯಹತ್ತಲು ಪ್ರತಿಯೊಂದು ಕ್ಷಣವೂ ಅವನಿಗೆ ಬಹಳ ನೋವನ್ನುಂಟುಮಾಡಹತ್ತಿತು, ಆದರೂ ತಾನು ಬಂದ ಕಾರ್ಯವನ್ನು ಅರ್ಧಕ್ಕೇನೇ ಬಿಟ್ಟು ಹೋಗುವದು ಉಚಿತವಾಗದೆಂದು ತಿಳಿದು, ಆದಷ್ಟು ಬೇಗನ ತನ್ನ ಕಾರ್ಯ ಕೊನೆಗಾಣಿಸಿ ಮರಳಬೇಕೆಂದು ನಿರ್ಧರಿಸಿದನು.

ಹತ್ತು ಗಂಟೆಯ ಸಮಯಕ್ಕೆ ಅವನು ಕೃಷ್ಣರಾಯನ ವಸತಿಸ್ಥಳಕ್ಕೆ ಹೊರಟನು. ಕೃಷ್ಣರಾಯನು ಅವನ ದಾರಿಯನ್ನೇ ನೋಡುತ್ತ ನಿಂತಿದ್ದನು ಒಡನೆಯೇ ಅವನು ನಗುಮುಖದಿಂದ ಸ್ವಾಗತಿಸಿ, ಕರೆದೊಯ್ದು ಕುಳ್ಳಿರಿಸಿದನು. ಉತ್ತಮ ಉಪಾಹಾರವಾಯಿತು ಕೊನೆಯ ವರೆಗೂ ಕೃಷ್ಣರಾಯನು ತನ್ನ ಬಗ್ಗೆ ಸಂಶಯುಪಟ್ಟಿದ್ದರೆ ನೋಡಬೇಕೆಂದು ಬಹಳವಾಗಿ ನಿರೀಕ್ಷಿಸಿದನು, ಆದರೆ ಮುರಾರಿಗೆ ಆ ಬಗ್ಗೆ ಅಲ್ಪವಾದರೂ ಸಂದೇಹವೆನಿಸಲಿಲ್ಲ, ಆದರೂ ಅವಶ್ಯವಿದ್ದ ದಕ್ಷತೆ ವಹಿಸಲು ಹಿಂದೆ ಬೀಳಲಿಲ್ಲ. ಉಪಾ

ಹಾರದ ಸಮಯಕ್ಕೆ ಕೃಷ್ಣರಾಯನು ತೋರಿಸಿದ ಸ್ಥಳವನ್ನು ದಾಕ್ಷಿಣ್ಯ
'ತೋರಿಸಿ ಅವರಿಗೇ ಬಿಟ್ಟು ತಾನು ಇನ್ನೊಂದನ್ನು ಸ್ವೀಕರಿಸಿದನು ಹೀಗೆ
ಅವನು ಎಷ್ಟು ರೀತಿಯಿಂದ ವಿಚಾರಿಸಿದರೂ ಸಂದೇಹ ತೋರಲಿಲ್ಲ. ಕೃಷ್ಣ
ರಾಯನು ನೀಚ ಮನುಷ್ಯನೇನೋ ಸರಿಯೆ, ಆದರೆ ನಿಜವಾಗಿಯೂ ಆ
ಸಮಯದಲ್ಲಿ ಶುದ್ಧವಾದ ಮಿತ್ರಪ್ರೇಮವನ್ನೇ ಹೊಂದಿದ್ದನಷ್ಟೆ. ಕಪಟಕ್ಕೆ
ಕಿಂಚಿತ್ತಾದರೂ ಅವಕಾಶವನ್ನೀಯಲಿಲ್ಲ ಉಪಹಾರದ ಸಮಯದಲ್ಲಿ ಅವ
ರಿಬ್ಬರೂ ಅದೆಷ್ಟೋ ವಿಷಯಗಳ ಬಗ್ಗೆ ಚರ್ಚಿಸಿದರು. ರಾಜಕಾರಣ,
ಕಾಂಗ್ರೆಸ್ಸಿನ ನೀತಿ ಮುಂತಾದ ಎಲ್ಲ ವಿಷಯಗಳನ್ನೂ ವಿವೇಚಿಸಿದರು.
ಇಬ್ಬರೂ ಮನಬಿಚ್ಚಿ ಮಾತನಾಡಿದರು. ಉಪಹಾರವಾಗುತ್ತಲೆ ಸಿಗಾರ
ಸೇದಿದರು. ಆ ಮೇಲೆ ಕೃಷ್ಣರಾಯನು ಕುಸುಮಪುರಕ್ಕೆ ಮರಳುವ ಸಮ
ಯವನ್ನರಿಯಲೆಣಿಸಿ:-ಕೃಷ್ಣರಾಯರೇ, ನಾಲ್ಕಾರು ದಿನಗಳಲ್ಲಿ ನಾನೊಂದು
ಔತಣವನ್ನೇರ್ಪಡಿಸತಕ್ಕವನಿರುವೆನು ಮತ್ತೆ ಆ ಸಮಯ ನೀವು ತಪ್ಪದೇ
ಬರಬೇಕು ಇನ್ನೂ ತಾರೀಖು ನಿಶ್ಚಿತವಾಗಿಲ್ಲ ನಿಶ್ಚಿತವಾದೊಡನೆ ತಿಳಿಸು
ವೆನು, ಎಂದನು.

ಸಾಧಾರಣ ಎಂದು ಮಾಡಿಸಲಿ ಇವಿರಿ? ಎಂದು ಕೃಷ್ಣರಾಯ ಕೇಳಿದ.

ಏದಾರು ದಿನಗಳಲ್ಲಿಯೇ ಆಗಬಹುದು, ಮುರಾರಿ ಉತ್ತರವಿತ್ತನು.

ಎಂಟು ದಿನಗಳ ಮೇಲೆ ಆದರೆ ನಾನು ಬರಬಹುದು, ಕೃಷ್ಣರಾಯ
ನೆಂದನು.

ಏಕೆ, ಎಲ್ಲಿಯಾದರೂ ಪರಸ್ಥಳಕ್ಕೆ ಹೋಗಲಿರುವಿರೇನು? ಮುರಾರಿ
ಮರಳಿ ಪ್ರಶ್ನೆ ಕೇಳಿದನು.

ನಮ್ಮ ಊರಲ್ಲಿಯ ಎಲ್ಲ ವ್ಯವಸ್ಥೆ ಇನ್ನೂ ಆಗಿರುವದಿಲ್ಲ. ಆದುದರಿಂದ
ನಾನು ಬೇಗನೇ ಮರಳಿ ಹೋಗಿ ಎಲ್ಲ ವ್ಯವಸ್ಥೆ ಮಾಡಿ ಬರಬೇಕಾಗಿದೆ.
ಕೃಷ್ಣರಾಯ ಹೇಳಿದನು.

ಒಳ್ಳೇದು ಹಾಗಾದರೆ ನೀವು ಹೋಗುವಷ್ಟರಲ್ಲಿ ಸಾಧ್ಯವಾದರೆ ನೋ
ಡುವೆನು. ನೀವು ಇನ್ನೂ ಮೂರು-ನಾಲ್ಕು ದಿವಸ ಇಲ್ಲಿ ಉಳಿಯಬಹುದಷ್ಟೇ?
ಮುರಾರಿ ಅವನು ಹೊರಡುವ ಸಮಯವನ್ನರಿಯಬೇಕೆಂದು ಕೇಳಿದನು.

ನಾನು ನಾಡದು ಹೋಗಲೇಬೇಕು. ದಯವಿಟ್ಟು ಇದೊಂದು ಸಲ
ಕ್ಷಮಿಸಿರಿ. ಇನ್ನೊಂದು ಸಲ ಬಂದಾಗ್ಗೆ ತಪ್ಪದೆ ಬರುವೆನು, ಕೃಷ್ಣರಾಯನು
ನಿರುಪಾಯನಾಗಿ ನುಡಿದನು.

ಛೆ, ಕೃಷ್ಣರಾಯರೆ, ಹಾಗೆ ಮಾಡಿದುದುಂಟೆ? ಎರಡು ದಿವಸ ತಡ

ವಾದರೂ ಚಿಂತೆಯಿಲ್ಲ ನೀವು ಬಂದ ಮೇಲೆಯೇ ಏರ್ಪಡಿಸುವೆನು. ಮುರಾರಿ ಹೀಗೆ ನುಡಿದು ತನ್ನ ಜೇಬಿನೊಳಗಿಂದ ಒಂದು ಸಿಗಾರ್ ತೆಗೆದು ಕೊಟ್ಟನು. ತಾನು ಮತ್ತೊಂದನ್ನು ತೆಗೆದು ಕೈಯಲ್ಲಿ ಹಿಡಿದುಕೊಂಡನು.

ಕೃಷ್ಣರಾಯನು, ಮುರಾರಿ ಕೊಟ್ಟ ಸಿಗಾರ್‌ಸೇದುತ್ತ:-ಭಲೆ! ಚನ್ನಾಗಿದೆ ಇದು ಯಾವ ಕಂಪನಿಯವರದು? ಎಂದು ಕೇಳಿದನು.

ಮುರಾರಿ ತನ್ನ ಸಿಗಾರ್ ಸೇದುತ್ತ:-ಕೃಷ್ಣರಾಯರೇ, ಇದು ಅಮೇರಿಕದ 'ಬ್ಲೂಮ್' ಕಂಪನಿಯವರು ಸಿದ್ಧಪಡಿಸಿದುದು. ನಾನಾವಾಗಲೂ ಇದನ್ನೇ ಸೇದುತ್ತೇನೆ, ಎಂದು ನುಡಿದನು

ಕೃಷ್ಣರಾಯನಿಗೆ ಕಣ್ಣು ಮುಚ್ಚ ಹತ್ತಿದವು. ನನಗೆ ನಿದ್ರೆ ಬರಹತ್ತಿದೆ. ಆದುದರಿಂದ ಮಲಗುವೆನು ನೀವಾದರೂ ಕೊಂಚ ನಿದ್ರಿಸಿರಿ, ಎಂದು ಹೇಳಿ ಉತ್ತರದ ದಾರೀ ನೋಡದೆ ಮಲಗಿದನು.

ಮುರಾರಿಯು ಅಲ್ಲಿಂದ ಎದ್ದು ಕೃಷ್ಣರಾಯನ ಜೇಬಿನಿಂದ ಕೀಲಿಯ ಕೈ ತೆಗೆದುಕೊಂಡು, ಅವನ ಹ್ಯಾಂಡಬ್ಯಾಗು ತೆಗೆದು, ಅದರೊಳಗಿನ ಪತ್ರದ ಕಟ್ಟೊಂದನ್ನು ಜೇಬಿಗೆ ಸೇರಿಸಿ, ಕೀಲಿಯನ್ನು ಹಾಕಿ, ಕೈ ಅದರ ಮುಂಚಿನ ಸ್ಥಳದಲ್ಲಿರಿಸಿ, ಬಾಗಿಲು ಮುಂದೆ ಮಾಡಿಕೊಂಡು ಹೊರಬಿದ್ದನು.

ಕೃಷ್ಣರಾಯನ ಮನೆಯಿಂದ ಹೊರಟವನೇ ಮುರಾರಿ ತಾರು ಕಚೇರಿಗೆ ಹೋಗಿ, ಇಂದುಶೇಖರನ ಹೆಸರಿನಲ್ಲಿ ಬಂದ ತಾರುಗಳನ್ನಾಗಲೀ, ಪತ್ರಗಳನ್ನಾಗಲಿ ಅವನಿಗೆ ಮುಟ್ಟಿಸಕೂಡದೆಂದು ಶಹರ ಫೌಜದಾರನಾದ ಹನುಮಂತರಾಯನಿಗೆ ತಾರು ಮಾಡಿ, ತಾನೊಂದು ಸ್ಪೆಶಲ್ ಮೋಟರು ಮಾಡಿಕೊಂಡು ಕುಸುಮಪುರಕ್ಕೆ ಹೊರಟನು

ಮೊಟರು ವೇಗವಾಗಿಯೇ ಹೋಗುತ್ತಲಿದ್ದಿತು; ಆದರೆ ಅವನ ತಲೆಯೊಳಗಿನ ಯೋಚನೆಗಳು ಅದಕ್ಕೂ ವೇಗವಾಗಿ ತಿರುಗುತ್ತಲಿದ್ದುವು. ಸುಬ್ಬಣ್ಣನವರು ಎಲ್ಲಿರಬಹುದು? ಯಾವದೊಂದು ತುಬ್ಬು ಕೈಕೊಂಡು, ಅದರಸಲುವಾಗಿ ಗುಪ್ತವೇಷದಿಂದ ತಿರುಗಾಡುತ್ತಿರಬಹುದೆ? ಆದರೆ ಒಂದು ಕೆಲಸ ಕೈಕೊಂಡು ಅದನ್ನು ಕೊನೆಗಾಣಿಸುವವರೆಗೆ ಇನ್ನೊಂದನ್ನು ಅವರೆಂದೂ ಕೈಕೊಳ್ಳತಕ್ಕವರಲ್ಲ. ಅಂದಮೇಲೆ ಅವರೆಲ್ಲಿ ಹೋಗಿರಬೇಕು? ಇದೇ ಕೆಲಸದ ಸಲುವಾಗಿ ಹೋಗಿರಬಹುದೆ? ಆದರೆ ಇದರಲ್ಲಿನ ಮುಖ್ಯ ಮನುಷ್ಯನು ಇಲ್ಲಿ ಮುಂಬಯಿಯಲ್ಲಿ ಇರುವನು. ಅವನ ಸಮಾಚಾರ ತೆಗೆದುಕೊಳ್ಳಲು ನಾನು ಇತ್ತ ಬಂದೇ ಬಂದಿರುವೆನು? ಹಾಗಾದರೆ ಅವರು ಇನ್ನೆಲ್ಲಿ ಹೋಗಿರಬೇಕು? ಇಂದುಶೇಖರನ ಯಾವುದೊ ಒಂದು ಕಪಟವ್ಯೂಹದಲ್ಲಿಯೇ ಬಿದ್ದಿರಬೇಕು.

ಇಲ್ಲವಾದರೆ....ಛೇ! ಇನ್ನೇನೂ ಶಕ್ಯವೇ ಇಲ್ಲ ಇಂದುಶೇಖರ ಭಯಂಕರ ನೀಚವೃತ್ತಿಯವ. ಮಹಾ ಕಪಟಿ, ಕಪಟ ಕಾರಸ್ಥಾನಗಳಲ್ಲಿ ಚತುರ. ಏನೇ ಆದರೂ ನಾನು ಮೊದಲು ಅವರನ್ನು ಗೊತ್ತು ಹಚ್ಚಲೇಬೇಕು....ಇಂತೀ ವಿಚಾರಗಳಲ್ಲಿಯೇ ಮುಳುಗಿ ಹೋಗಿದ್ದ. ಸುಬ್ಬಣ್ಣವರ ವಿಷಯವಾಗಿ ಅವನ ಮನಸ್ಸು ಬಹಳ ಹಾತೊರೆಯುತ್ತಲಿದ್ದಿತು. ಅವರನ್ನು ನೋಡಲು ಕಣ್ಣುಗಳು ಬಹಳ ಆತುರವಾಗಿದ್ದವು. ನಿಜವಾಗಿಯೂ ಅವನು ಸುಬ್ಬಣ್ಣವರನ್ನು ತನ್ನ ಗುರುಗಳೆಂದೇ ನಂಬಿಬಿಟ್ಟಿದ್ದನು. ಅವರ ಕುಶಲದ ಬಗ್ಗೆ ಶಂಕೆಯುಂಟಾಗಲು ಅವನು ಭಯಪಟ್ಟನು

ಸುಬ್ಬಣ್ಣವರ ಮುಂಜಾಗ್ರತೆಯನ್ನು ವಿಚಾರಿಸಿದಲ್ಲಿ ಮುರಾರಿಗೆ ಹೀಗೆ ಸಂದೇಹ ತೆಗೆದುಕೊಳ್ಳಲು ಏನೂ ಕಾರಣವಿರಲಿಲ್ಲ ಅವರ ಊಹಾಶಕ್ತಿ ಅದ್ಭುತವಾಗಿದ್ದಿತೆಂಬದನ್ನು ಆತ ಬಲ್ಲ ಅವರು ಬಹಳ ಚಾಣಾಕ್ಷರಿದ್ದರೆಂದೂ ತಿಳಿದಿದ್ದ. ಎಂತಹ ಬಿಕ್ಕಟ್ಟಿನ ವಿಪತ್ತುಗಳಲ್ಲಿಯೂ ಅವರು ಸುಲಭವಾಗಿ ಪಾರುಗಂಡುದನ್ನು ಅವನು ಅನುಭವಿಸಿ ಅರಿತಿದ್ದ. ಹೀಗಿದ್ದರೂ ಅವನ ಮನಸ್ಸು ಸಾಶಂಕವಾಗಿದ್ದಿತು ಸುಬ್ಬಣ್ಣವರ ಕುಶಲವು ತನ್ನ ಕರ್ತೃತ್ವಶಕ್ತಿಯನ್ನೇ ಅವಲಂಬಿಸಿದ್ದಿತೆಂದು ಅವನ ವಿವೇಕವು ಹೇಳಹತ್ತಿತು. ಅದೇಕೋ, ಆ ಪರಮಾತ್ಮನಿಗೆ ಅರಿಕೆ, ಅಥವಾ ನಮ್ಮೆಲ್ಲರಲ್ಲಿಯು ಚೇತನಾಶಕ್ತಿ-ಆತ್ಮ-ಅದಾವುದೋ ಒಂದು ಶಕ್ತಿಯಿದೆಯಲ್ಲವೆ? ಅದು ಪ್ರತಿಯೊಬ್ಬನಲ್ಲಿಯೂ ಇರುತ್ತದೆ. ಆ ಶಕ್ತಿ ಭಿನ್ನ ಭಿನ್ನ ವ್ಯಕ್ತಿಗಳಲ್ಲಿದ್ದರೂ ಒಂದೇ ರೀತಿಯದು, ಒಂದೇ ಸ್ವಭಾವದ್ದು, ಒಂದೇ ಬಗೆಯದು ಇರುತ್ತದೆ. ನಮ್ಮ ಮೇಲು ತೋರಿಕೆಯಲ್ಲಿ ಭಿನ್ನತೆಯಿದ್ದರೂ ನಮ್ಮ ಅಂತರಂಗವು ಭಿನ್ನವಿಲ್ಲ. ಎಲ್ಲರ ಅಂತರಂಗವು ಒಂದೇ ಆಗಿರುತ್ತದೆ. ವಿದ್ಯುಲ್ಲತೆಯ ಪ್ರವಾಹದಂತೆ ನಮ್ಮ ನಮ್ಮ ಅಂತರಂಗದ ಸ್ಥಿತಿಗಳಿಗೂ ಒಂದು ಗತಿಯಿದೆ ಎಂದೇನೋ ಹೇಳುವುದಿಲ್ಲವೆ? ಹಾಗಿದ್ದರೂ ಇರಬಹುದು. ಮುರಾರಿಯ ಅಂತರಂಗವು ಸುಬ್ಬಣ್ಣವರ ಅಂತರಂಗವನ್ನರಿಯಲು ಸಮರ್ಥವಾಗಿರಬೇಕು. ಅದೇನು ಕಾರಣವೋ ಮುರಾರಿ ಮಾತ್ರ ಸುಬ್ಬಣ್ಣವರ ಕ್ಷೇಮದ ಬಗ್ಗೆ ಶಂಕೆಯುಳ್ಳವನಾಗಿದ್ದನು.

ಅವನು ವ್ಯಗ್ರಮನಸ್ಕನಾಗಿ ಭಿನ್ನ ಭಿನ್ನ ವಿಚಾರಗಳಲ್ಲಿ ಮುಳುಗಿರುವಾಗಲೇ ಕುಸುಮಪುರವು ಬಂತು. ಡ್ರಾಯವ್ಹರನು ಮೋಟಾರು ನಿಲ್ಲಿಸಲು, ಮುರಾರಿಯ ವಿಚಾರಗಳಿಗೂ ತಡೆಯುಂಟಾಯಿತು. ಅವನು ಕಣ್ಣುತೆರೆದು ನೋಡಿ ಹರ್ಷದಿಂದ ಕೆಳಗಿಳಿದು ಮೋಟಾರಿನವನಿಗೆ ಕೊಡ

ತಕ್ಕದ್ದನ್ನು ಕೊಟ್ಟು ಕಳುಹಿದನು. ಮುಂದೆ ಕೈಕೊಳ್ಳತಕ್ಕ ದಾರಿಯನ್ನು ಅವನು ಮೊದಲೇ ನಿರ್ಧರಿಸಿದ್ದನು. ಹಾಗೆ ತನ್ನ ನಿರ್ಧರದಂತೆ ಅವನು ಮೊಟ್ಟಮೊದಲು ತಮ್ಮ ವಸತಿಸ್ಥಳಕ್ಕೆ ಹೊದನು.

ಅಲ್ಲಿ ಹೋದೊಡನೆ ಮೊದಲು ಸುಬ್ಬಣ್ಣವರು ಮುರಾರಿ ಇಲ್ಲಿದಾಗ್ಗೆ ಒಬ್ಬರೇ ಹೊರಗೆ ಹೋಗುವ ಸಮಯದಲ್ಲಿ ಪತ್ರವಿಡುವ ಗುಪ್ತಸ್ಥಳಕ್ಕೆ ಹೋಗಿ ನೋಡಿದನು. ಅಲ್ಲಿ ಪತ್ರವಿದ್ದಿತು ಅದನ್ನು ನೋಡಿ ಅವನಿಗೆ ಬಹಳ ಆನಂದವಾಯಿತು. ಆತುರತೆಯಿಂದ ಪತ್ರವನ್ನು ತೆರೆದನು. ಸುಬ್ಬಣ್ಣವರು ಮುಂದಿನಂತೆ ಪತ್ರವಿಟ್ಟಿದ್ದರು.

ಮುರಾರೀ, ಇಂದು ನಾವು ಮಾಟದ ಮನೆಯ ಶೋಧಕ್ಕೆ ಹೋಗುತ್ತೇನೆ ಮಾಟದ ಮನೆಯೆಂದರ ಕುಸುಮಪುರದಲ್ಲಿನ ದುಷ್ಟರ ಕೇಂದ್ರಸ್ಥಳ. ಒಂದು ಸಲ ಅದನ್ನು ಸಂಪೂರ್ಣ ಶೋಧಿಸಿ ಅಲ್ಲಿಯ ಕಪಟವನ್ನು ಹೊರಗೆಳೆದರೆ ಕುಸುಮಪುರವು ಕೊನೆಯವರೆಗೂ ಈ ಕಂಟಕದಿಂದ ಪಾರಾಗುವುದು. ಇನ್ನೊಂದು ಸಂಗತಿಯೆಂದರೆ, ಇಂದುಶೇಖರನು ಅಲ್ಲಿಯ ಒಬ್ಬ ಸನ್ಮಾನ್ಯ ಸಭಾಸದನಿರುವನು. ಸದ್ಯದ ಕೊಲೆಯ ಸಂಗತಿಯೂ ಇದರಲ್ಲಿ ದೊರೆಯಬಹುದು. ನೀನು ಅಲ್ಲಿಯ ಆ ಕೊಲೆಗಾರನ ಯೋಗ್ಯ ವ್ಯವಸ್ಥೆ ಮಾಡಿ ಬರುವೆಯೆಂದು ಭರವಸೆಯಿದೆ. ಆದರೂ ನಾನು ಇಷ್ಟು ಶಕ್ಯವಿದ್ದ ಕೆಲಸ ಮಾಡಲು ಹೋಗಿರುವೆನು. ಮಾಟದ ಮನೆಯು ಉಕ್ಕಿನಸ್ಪ್ರಿಂಗು, ವಿದ್ಯುತ್ತಿನ ಪ್ರಕಾಶ, ಶಕ್ತಿಯಿಂದಲೇ ಮಾಡಿದಂತಿದೆ. ಸಂಪೂರ್ಣ ಉಕ್ಕಿನ ತಗಡುಗಳಿಂದಲೇ ಮಾಡಲ್ಪಟ್ಟಿರುವ ಮೂಲಕ ಸಂಪೂರ್ಣವಾಗಿ ವಿದ್ಯುತ್ತು ಪ್ರವಹಿಸುವಂತೆ ಮಾಡಲು ಬರುವಂತಿದೆ. ಅಂತೂ ಒಳ್ಳೇ ವಿಚಿತ್ರವಾದ ಮನೆಯಿರುತ್ತದೆ.

ಅಲ್ಲಿಯೇ ಮಾಟದಮನೆಯ ದಾರಿಯ ಸಂಗತಿಯೂ ಇನ್ನೊಂದು ಕಾಗದದಲ್ಲಿದ್ದಿತು.

ಮುರಾರಿಯು ಈ ಪತ್ರವನ್ನೋದುತ್ತಲೆ ಸುಬ್ಬಣ್ಣವರು ಮಾಟದ ಮನೆಯಲ್ಲಿ ಸಿಕ್ಕದ್ದೇ ನಿಜವೆಂದು ತಿಳಿದು ಬಿಟ್ಟನು ಮುಂದೆ ಹೇಗೆ ಮಾಡಬೇಕು? ಎಂಬ ವಿಚಾರವು ಅವನ ಮುಂದೆ ಬಂದು ನಿಂತಿತು. ಬರಿಯ ವಿಚಾರಗಳಲ್ಲಿ ಮಗ್ನನಾಗಿ ಕುಳಿತಿರುವಂತಿರಲಿಲ್ಲ ಆದುದರಿಂದ ಮೊದಲು ಅವನು ಮಾಡಬೇಕೆಂದಿದ್ದ ಕಾರ್ಯದ ಸಲುವಾಗಿ ಹೊರಟನು.

ತಮ್ಮ ಮನೆಯಿಂದ ಹೊರಟನು ಕೊತವಾಲ ಹನುಮಂತರಾಯನಿಗೆ ಭೆಟ್ಟಿಯಾದನು. ಹನುಮಂತರಾಯನು ಅವನನ್ನು ನೋಡುತ್ತಲೆ ಆನಂದದಿಂದ ಸ್ವಾಗತಿಸಿದನು

ಮುರಾರಿರಾಯರೇ, ನಿಮ್ಮ ತಾರು ಮಧ್ಯಾಹ್ನಕ್ಕೆ ತಲುಪಿತು.

ಅದರಂತೆ ಇಂದುಶೇಖರನಿಗೆ ತಾರುಗಳೇನಾದರೂ ಬಂದಿವೆಯೋ?

ಇದೋ ನೋಡಿ, ಸುಮಾರು ಎರಡು ತಾಸಾಯಿತು. ಒಂದು ತಾರು ಬಂದಿದೆ.

"ಇಂದುಶೇಖರ, ನಾನು ಸೂಚಿಸಿದಂತೆ ನಿನ್ನ ಕೆಲಸ ಈಗಲೆ ಮಾಡಿ ಬಿಡು. ನಾನು ನಾಳೆ ಮುಂಜಾನೆ ಅಲ್ಲಿಗೆ ತಪ್ಪದೆ ಬರುತ್ತೇನೆ" ಎಂದಿದ್ದಿತು.

ಮುರಾರಿರಾಯರೇ, ಇದರ ಒಗಟವೇನು ಹೇಳುವಿರಾ?

ಅದು ಸ್ಪಷ್ಟವೇ ಇದೆ ಈ ತಾರು ಕೊಟ್ಟವನೇ ಸಾವುಕಾರರ ಕೊಲೆಗಾರ ಹೇಗೆ? ಏನು? ಅನ್ನುವ ಬಗ್ಗೆ ಈಗ ಪ್ರಶ್ನೆ ಕೇಳಬೇಡಿರಿ. ಏಕೆಂದರೆ, ಅದನ್ನೆಲ್ಲ ವಿವರಿಲು ಅವಕಾಶವಿಲ್ಲ, ಮತ್ತು ಸಮಯವೂ ಇಲ್ಲ ಇದಲ್ಲದೆ ಎಲ್ಲಸಂಗತಿಗಳನ್ನೂ ಒಡೆದು ಹೇಳಲು ನಾನು ಶಕ್ತನೂ ಅಲ್ಲ ಅಂತಹರನ್ನು ಈಗ ನಾವು ಶೋಧಿಸಿ ತೆಗೆಯಬೇಕಾಗಿದೆ

ಅವರಾರ ? ಸುಬ್ಬಣ್ಣವರು.

ಅಹುದು ಮುರಾರಿರಾಯರೇ, ಈಗ ನಾವು ಅದರ ಸಲುವಾಗಿ ಯತ್ನಿಸಬೇಕಾಗಿದೆ ಮಹಾರಾಜರು ನಿಮಗೆ ಬರಹೇಳಿರುವರು.

ಆಗಲಿ ಫೌಜದಾರ ಸಾಹೇಬರೇ, ಅದನ್ನೇ ಮಾಡೋಣ ಮೊದಲು ನನಗೊಂದು ವಿಷಯದ ಬಗ್ಗೆ ಕೆಲವು ಮಾಹಿತಿಬೆ ಕಾಗಿದೆ.

ಅದೇನು?

ಹನುಮಂತರಾಯರೇ, ಮಾಟದ ಮನೆಯ ಬಗ್ಗೆ ನನಗೆ ಸವಿಸ್ತರ ಸಂಗತಿ ಬೇಕಾಗಿದೆ ಆಂ, ಮಾಟದ ಮನೆಯೆ?

ಅಹುದು ಅದೇತಕ್ಕೆ ಬೇಕಾಗಿದೆ?

ನೀವು ಅರಸುತ್ತಿರುವ ಜನರು ಅಲ್ಲಿ ಸಿಕ್ಕುಬಿದ್ದಿರುವರು.

ಆಂ, ಮಾಟದ ಮನೆಯಲ್ಲಿ ಸಿಕ್ಕುಬಿದ್ದಿರುವರೆ?

ಅಹುದು. ಹೇಗೆ ಗೊತ್ತು?

ಆ ಬಗ್ಗೆ ಸುಬ್ಬಣ್ಣವರು ಪತ್ರವನ್ನಿಟ್ಟಿರುವರು ಪತ್ರವನ್ನೆ?

ಅಹುದು ಅದು ನಮ್ಮ ಗುಪ್ತಕರಾರು. ನಾನು ಅವರಿಗೆ ತಿಳಿಸದೆ ಹೋಗುವ ಸಮಯ ಬಂದಲ್ಲಿ ನಾನಾದರೂ ಹೋಗುವ ವೇಳೆಯಲ್ಲಿ ಒಂದು ಪತ್ರವನ್ನಿಟ್ಟೇ ಹೋಗುತ್ತೇನೆ ಹಾಗೆಯೇ ಅವರಾದರೂ ಪತ್ರವನ್ನಿಟ್ಟೇ ಹೋಗಿದ್ದಾರೆ ಅದರಂತೆ ಈಗ ನಾವು ಅಲ್ಲಿ ಹೋಗಬೇಕು.

ಹಾಗಿದ್ದರೆ ....... ಏಕೆ, ರಾಯರೇ?

ಆ ಕಾರ್ಯ ಕಠಿಣವಾದುದು. ಮಾಟದ ಮನೆಯ ವೈಚಿತ್ರ್ಯವನ್ನರಿತವರು ತೀರ ತುಸ ಜನರಿರುವರು. ಅಲ್ಲಿಯ ಘಾತುಕವಾದ ಸಾಧನಗಳು ನಮ್ಮಂತಹರಿಗೆ ತಿಳಿಯಲು ಬರುವಂತಿಲ್ಲ

ಆದರೆ ಅವರನ್ನು ನಾವು ಬಿಡಿಸಲೇ ಬೇಕಲ್ಲವೆ?

ಅದೇನೋ ಸರಿ; ಆದರೆ ನಾವು ಯಾವ ರೀತಿಯಿಂದ ಯತ್ನಿಸಬೇಕು?

ಒಳ್ಳೇದು, ಮೊದಲು ಮಹಾರಾಜರನ್ನು ಕಾಣುವಾ ನಡೆಯಿರಿ. ಅಲ್ಲಿಯೇ ಎಲ್ಲವನ್ನೂ ವಿಚಾರಿಸಲು ಬರುತ್ತದೆ ಒಂದು ಮಾತೆಂದರೆ, ಮಾಟದ ಮನೆಯ ಆ ದುಷ್ಟರು ಯಾರು? ಎಂಬದನ್ನು ಯಾರಾದರೂ ಹೇಳಬಲ್ಲರೆ?

ಪ್ರತಿಯೊಬ್ಬನನ್ನೂ ಅರಿತಿರುವೆವು; ಆದರೆ ನಮಗೆ ಆಧಾರವಿಲ್ಲದಿರುವ ಮೂಲಕ ಅವರನ್ನು ಬಂಧಿಸಲು ಬಾರದಂತಾಗಿದೆ

ಒಳ್ಳೇದು, ನಡೆಯಿರಿ. ಮೊದಲು ಮಹಾರಾಜರಲ್ಲಿಗೆ ಹೋಗೋಣ.

ಇಬ್ಬರೂ ಕೂಡಿ ಮಹಾರಾಜರ ಬಳಿಗೆ ಹೋದರು ಕುಸುಮಪುರದರಸು ಪ್ರಜಾಪ್ರೇಮಿಯೆಂಬದು ಹಿಂದೆಯೇ ಬಂದಿದೆ ತನ್ನ ಪ್ರಜೆಗಳಿಗೆ ಬಹಳ ಪೀಡೆ ಕೊಡುತ್ತಲಿದ್ದ ಆ ಜೂಜಾಟವನ್ನು ನಿಲ್ಲಿಸಲು ಬಹಳವಾಗಿ ಯತ್ನಿಸುತ್ತಲಿದ್ದನು. ಅಂತಹ ಸಮಯದಲ್ಲಿ ಸಾವುಕಾರ ಶ್ರೀನಿವಾಸರಾಯರ ಕೊಲೆಯು ಅವನ ಮನಸ್ಸನ್ನು ಬಹಳವಾಗಿ ವ್ಯಗ್ರಮಾಡಿತ್ತು. ಅಂತಹ ಸಮಯದಲ್ಲಿ ತನ್ನ ಕೈಕೆಳಗಿನ ಸ್ವಾಮಿನಿಷ್ಠ ಸೇವಕರು ಅದೃಶ್ಯರಾಗಲು ಅವನಿಗೆ ಬಹಳ ಚಿಂತೆಯುಂಟಾಯಿತು ಅನೇಕ ವಿಧವಾಗಿ ಯತ್ನ ಮಾಡಿದನು, ಆದರೆ ಏನೂ ಸಾಧ್ಯವಾಗಲಿಲ್ಲ ಹೀಗೆ ಚಿಂತಾಮಗ್ನನಾಗಿ ಕುಳಿತಾಗ್ಗೆ ಮುರಾರಿಯಿಂದ ತಾರು ಬಂದ ಸಂಗತಿ ತಿಳಿಯಲು, ಅವನು ಬಂದೊಡನೆ ತನ್ನ ಬಳಿಗೆ ಕರೆದು ತರಬೇಕೆಂದು ಕೊತವಾಲನಿಗೆ ಹೇಳಿದ್ದನು.

ಮುರಾರಿ ಅರಮನೆಗೆ ಹೋದಾಗ್ಗೆ ಮಹಾರಾಜರು ಅವನ ನಿರೀಕ್ಷಣೆಯಲ್ಲಿಯೇ ಕುಳಿತಿದ್ದರು. ಅವನನ್ನು ನೋಡುತ್ತಲೆ ನಗುಮುಖದಿಂದ ಸ್ವಾಗತಿಸಿದರು.

ಮುರಾರಿರಾವ್, ಈ ಜನರು ಎಲ್ಲಿ ಹೋಗಿರುವರೆಂಬ ಬಗ್ಗೆ ನಿಮ್ಮ ತರ್ಕವೇನಾದರೂ ನಡೆಯುತ್ತಿದೆಯೆ?

ತರ್ಕವೇಕೆ? ಆಧಾರವೇ ದೊರೆತಿದೆ ಮಹಾರಾಜ.

ಆಂ, ಆಧಾರವೆ! ಅಹುದು

ಅದೇನು?

ಸುಬ್ಬಣ್ಣವರು ನನಗೆ ಪತ್ರವನ್ನಿಟ್ಟು ಹೋಗಿರುತ್ತಾರೆ.

ಹಾಗಾದರೆ ಅವರು ಇರುವುದೆಲ್ಲಿ? ಮಾಟದ ಮನೆಯಲ್ಲಿ.

ಆಂ, ಮಾಟದ ಮನೆಯಲ್ಲಿಯೆ! ಅಹುದು ಮಹಾರಾಜ.

ಹಾಗಾದರೆ ಮುಂದೆ ಏನು ಮಾಡಬೇಕೆನ್ನುವಿರಿ?

ಮಾಟದ ಮನೆಯೆಂದರೆ ಭಯಂಕರವಾದ ಸ್ಥಳವೆಂಬುದನ್ನು ಮಹಾರಾಜರು ಅರಿತಿರಬಹುದು.

ಓಹೋ, ಅದನ್ನು ನಾನು ಬಲ್ಲೆ. ಅಂತೆಯೇ ನಾವು ಹತ್ತಿಪ್ಪತ್ತು ವರುಷಗಳಿಂದ ಯತ್ನಿಸಿದರೂ ಜೂಜಾಟವನ್ನು ನಿಲ್ಲಿಸಲು ಅಸಮರ್ಥರಾಗಿರುವೆವು.

ಈಗ ಕೆಲವು ವ್ಯಕ್ತಿಗಳನ್ನು ಬಂಧಿಸಲು ಮಹಾರಾಜರು ಅಪ್ಪಣೆ ಕೊಡಬೇಕು

ಮುರಾರಿರಾವ್, ಈ ಸಮಯದಲ್ಲಿ ನಾನು ನಿಮಗೆ ಬೇಕಾದ ಅಧಿಕಾರ ಕೊಡುತ್ತೇನೆ, ಆದರೆ ಅನ್ಯಾಯಕ್ಕೆ ಆಸ್ಪದ ಸಿಕ್ಕದೆಂಬ ಬಗ್ಗೆ ನನಗೆ ಆಶ್ವಾಸನವೀಯಬೇಕು.

ಆ ಬಗ್ಗೆ ಮಹಾರಾಜರು ನಿಶ್ಚಿಂತರಾಗಿರಬೇಕು ಅಪರಾಧ ಮಾಡಿದ ಬಗ್ಗೆ ಮನಗಾಣದೆ ನಾವು ಯಾರನ್ನೂ ಬಂಧಿಸುವದಿಲ್ಲ.

ಹಾಗಿದ್ದರೆ ನಿಮಗೆ ಅಧಿಕಾರಪತ್ರ ಬರೆದು ಕೊಡಲೋ?

ಹನುಮಂತರಾಯರಿರುವರಲ್ಲ? ಅವರಿಗೇ ಅಷ್ಟು ಅಧಿಕಾರವಿತ್ತರೆ ಸಾಕು. ಮುಂದಿನ ಕೆಲಸಗಳನ್ನು ನಾನೂ ಅವರೂ ಕೂಡಿಯೇ ಮಾಡುವೆವು.

ಹಾಗೆಯೇ ಆಗಲಿ

ಹೀಗೆಂದು ಮಹಾರಾಜರು ಸ್ವತಃ ಒಂದು ಅಧಿಕಾರಪತ್ರ ಬರೆದು ರಾಜಮುದ್ರೆಯೊತ್ತಿ ಹನುಮಂತರಾಯರಿಗಿತ್ತರು ಮುರಾರಿ ಮತ್ತು ಹನುಮಂತರಾಯರೀರ್ವರೂ ಅಲ್ಲಿಂದ ಹೊರಟು ಪೋಲೀಸು ಕಚೇರಿಗೆ ಬಂದರು. ಅಲ್ಲಿ ಇಬ್ಬರೂ ಗುಪ್ತ ಸ್ಥಳದಲ್ಲಿ ಕುಳಿತು ಮುಂದಿನ ಕಾರ್ಯದ ರೂಪರೇಖೆಯನ್ನು ಹಾಕಹತ್ತಿದರು.

ಮುರಾರಿರಾವ್, ಈಗ ಯಾರನ್ನು ಬಂಧಿಸಬೇಕೆನ್ನುವಿರಿ?

ನಿಮಗೆ ಜೂಜಾಟದವರೆಂಬ ಬಗ್ಗೆ ಯಾರಲ್ಲಿ ಸಂದೇಹವೆನಿಸುತ್ತಿದೆಯೋ, ಆ ಎಲ್ಲರ ಹೆಸರುಗಳಲ್ಲಿಯೂ ವಾರಂಟು ಬರೆದು ಸಿದ್ಧಮಾಡಿರಿ. ಮುಖ್ಯವಾಗಿ ಈ ಸಂದರ್ಭದಲ್ಲಿ ನಾವು ಲಕ್ಷ್ಯದಲ್ಲಿಡತಕ್ಕ ಸಂಗತಿಯೊಂದಿದೆ.

ಅದೇನು?

ಮಾಟದ ಮನೆಯಲ್ಲಿ ಸ್ಪ್ರಿಂಗಿನ ಮತ್ತು ವಿದ್ಯುಲ್ಲತೆಯ ಯೋಜನೆ ಬಹಳವಿದೆ? ಅಹುದು.

ಅಲ್ಲಿಯ ಆ ಎಲ್ಲ ಸಂಗತಿಯನ್ನು ತಿಳಿದವರು ಬಹಳ ಸ್ವಲ್ಪ ಜನರಿರುವರು. ನಿಜ.

ಅಂತಹರನ್ನು ಅಂದರೆ, ನಿಮ್ಮ ಹೆಸರಿನ ಯಾದಿಯನ್ನು ಮುಖಂಡರೂ ಮುಂದಾಳುಗಳೂ, ಜಾಣರೂ ಎಂದು ತೋರಿಬರುವಂತಹರನ್ನು ಮೊದಲು ಹಿಡಿಯಬೇಕು

ಒಳ್ಳೇದು ಮತ್ತೆ ಯಾರನ್ನು ಬಂಧಿಸಬೇಕು?

ಎಲ್ಲಕ್ಕೂ ಮೊದಲು ಬಂಧಿಸತಕ್ಕ ವ್ಯಕ್ತಿಯಂದರೆ ಇಂದುಶೇಖರ.

ಅವನ ಬಗ್ಗೆ ನಿಮ್ಮಲ್ಲಿ ಸಾಕಷ್ಟು ಆಧಾರವಿದೆಯೆ?

ಸಂಪೂರ್ಣವಾಗಿದೆ. ಆ ಬಗ್ಗೆ ಯೋಚನೆಯನ್ನೇ ಮಾಡಬೇಡಿರಿ. ಅವನೊಡನೆ ಕಮಲಿನಿಯನ್ನೂ ಬಂಧಿಸಿ ತರಲು ಹಿಂದೆ ಬೀಳಬಾರದು.

ಏನು ಕುಲೀನಸ್ತ್ರೀ........

ಛೆ, ಎಲ್ಲಿಯದು? ಆಕೆ ಯಾರು? ಏನು? ಅನ್ನುವುದೆಲ್ಲವೂ ಆ ಮೇಲೆ ತಿಳಿದು ಬರುವದು. ಹೀಗಿದೆಯೇನು?

ಅವರ ಬಲೆಯು ಇನ್ನೂ ಭಯಂಕರವಾದುದಿದೆ. ಆ ಬಗ್ಗೆ ಚರ್ಚಿಸಲವಕಾಶವಿಲ್ಲ. ಆದುದರಿಂದ ಮೊದಲು ನಾವು ನಮ್ಮ ಕಾರ್ಯಕ್ಕೆ ತೊಡಗಬೇಕು. ಇನ್ನೊಂದು ಸಂಗತಿಯಿದೆ. ಅದೇನು?

ಕೃಷ್ಣರಾಯನು ಬರುವ ವೇಳೆ ತಾರಿನಿಂದ ತಿಳಿದಿದೆಯಲ್ಲವೆ?

ಅಹುದು.

ಹಾಗಾದರೆ ಅವನು ಬಂದೊಡನೆ ಅವನಿಗೆ ಮುಂದಿನ ಯಾವ ಸಂಗತಿಯನ್ನೂ ತಿಳಿಯಗೊಡದೆ ಬಂಧಿಸಿಬಿಡಬೇಕು. ಬಹಳ ದಕ್ಷತೆ ವಹಿಸಬೇಕಲ್ಲವೆ? ಆಂ, ಅಹುದು. ಅದೂ ನಿಜವೇ.

ಒಳ್ಳೇದು, ಈಗ ಇದೇ ಕೆಲಸಕ್ಕೆ ತೊಡಗಿರಿ ಎಲ್ಲಕ್ಕೂ ಮೊದಲು ಇಂದುಶೇಖರನ ಬಂಧನೆಯಾಗಬೇಕು. ಮತ್ತೊಂದು ವಿಚಾರವೆಂದರೆ, ನಾವು ಈ ಜನರನ್ನು ಬಂಧಿಸಿದುದು ಗುಪ್ತವಾಗಿರಬೇಕು. ಈ ಕೆಲಸವನ್ನು ಅಷ್ಟು ಯುಕ್ತಿಯಿಂದ ಗುಪ್ತವಾಗಿ ಮಾಡಲು ಶಕ್ತರಿದ್ದ ನಾಲ್ವತ್ತು-ಐವತ್ತು ಜನ ವಿಶ್ವಾಸುಕ ಪೋಲೀಸರನ್ನು ಆರಿಸಿ ಕಳುಹಿರಿ. ಅವರು ಸಾದಾವೇಷದಲ್ಲಿ ಹೋಗಿ ತಮಗೆ ತೋಚಿದ ಯುಕ್ತಿಯನ್ನನುಸರಿಸಿ ಈ ಜನರನ್ನು ಕೈದು ಮಾಡಲಿ. ಒಮ್ಮೆ ಈ ಜನರು ನಮ್ಮ ಕೈಯಲ್ಲಿ ಸಿಕ್ಕರಾಯಿತು. ಆ ಮೇಲೆ

ಅವರ ಸೆರೆಯಲ್ಲಿದ್ದ ನಮ್ಮವರಿಗೆ ಯಾವ ತೊಂದರೆಯೂ ಇಲ್ಲ

ಹನುಮಂತರಾಯನು ತನ್ನ ಸಿದ್ಧತೆಗೆ ತೊಡಗಿದನು ಮುರಾರಿಗೆ ಎಷ್ಟೋ ಸಮಾಧಾನವಾದಂತಾಯಿತು. ದುಷ್ಟರು ಬಹಳ ಘಾತುಕರೂ, ಜೀವ ತೆಗೆಯಲು ಹೇಸುವವರಲ್ಲವೆಂದೂ ಅವನು ಅರಿತಿದ್ದನು. ಅಂತೆಯೇ ಆದಷ್ಟು ಬೇಗ ಶಕ್ಯವಿದ್ದಷ್ಟು ತೀವ್ರ ಅವರನ್ನು ಕೈದು ಮಾಡಿ ಕತ್ತಲೆ ಕೋಣೆಯಲ್ಲಿ ಕುಳ್ಳಿರಿಸಬೇಕೆಂದು ಯೋಚಿಸಿದನು

ಹೀಗೆ ಮುರಾರಿ-ಸುಬ್ಬಣ್ಣ ಮುಂತಾದವರ ಬಿಡುಗಡೆಗೆಂದು ಶಕ್ಯವಿದ್ದ ಯತ್ನ ಮಾಡಿದನು. ಅದೇ ವೇಳೆಗೆ ಮಾಟದ ಮನೆಯಲ್ಲಿಯ ವಾತಾವರಣ ನಿರಾಶಾಮಯವೇ ಆಗಹತ್ತಿದ್ದಿತು ಬಹುತರ ಎಲ್ಲರೂ ಆಶೆಯನ್ನೇ ಬಿಟ್ಟು ಬಿಟ್ಟಿದ್ದರು. ಇದರಲ್ಲಿ ಶ್ರೀನಿವಾಸರಾಯನ ಅವಸ್ಥೆಯಂತೂ ವರ್ಣನೆಗೆ ಮೀರಿದ್ದಿತು.

ಸುಬ್ಬಣ್ಣವರೇ, ಸಂಪೂರ್ಣ ನಿರಾಶೆಯೇ ಅಲ್ಲವೆ?

ಶ್ರೀನಿವಾಸರಾಯರೇ, ನಿರಾಶೆಯೆಂದರೆ ಎಂತಹದು ಎನ್ನುವುದು ಕೂಡ ನನಗೆ ತಿಳಿಯದು.

ಅಂದರೆ, ನೀವು ಇನ್ನೂ ಆಶೆ ಹಿಡಿಯುತ್ತೀರಾ?

ಆಶೆಯೇ? ಅದು ಮಾನವನ ಸ್ವಭಾವವು ಆಶೆಯು ಅಂತ್ಯದವರೆಗೂ ಬಿಡತಕ್ಕುದಲ್ಲ.

ನೀವು ನಿಮ್ಮ ವೇದಾಂತವನ್ನು ಇನ್ನು ಮರೆಯಿರಿ ಅದರಿಂದ ಏನೂ ಉಪಯೋಗವಿಲ್ಲ ಈ ವೇಳೆಯಲ್ಲಿ ಆ ವೇದಾಂತವು ಕಿಂಚಿತ್ತಾದರೂ ಸಹಾಯ ಮಾಡಲಾರದು.

ಶ್ರೀನಿವಾಸರಾಯರೇ, ಈ ವೇಳೆಯಲ್ಲಿ ನಮಗೆ ಯೋಗ್ಯ ಸಹಾಯ ಮಾಡತಕ್ಕದೆಂದರೆ ವೇದಾಂತವೇ.

ಅಂದರೆ?

ಅಂದರೇನು ಬಂದುದೆಲ್ಲವನ್ನೂ ಭೋಗಿಸಲು ನಮ್ಮ ಮನಸ್ಸನ್ನು ಸಿದ್ಧ ಗೊಳಿಸಬೇಕಲ್ಲವೆ?

ಅದಂತೂ ಸರಿಯೇ ನಾವು ಒಲ್ಲೆವೆಂದರೂ ಅದೇನೂ ಬಿಡಬೇಕಾಗಿಲ್ಲ.

ಅಂತೆಯೇ ಹೇಳುವುದು.

ಆದರೆ ಬಿಡುಗಡೆಯ ಆಶೆ ಅಲ್ಪವಾದರೂ ಇದೆಯೆ?

ಇದೆ, ಸಂಪೂರ್ಣವಾಗಿದೆ

ಸಹಾಯ ಮಾಡುವವರಾರು? ಪರಮಾತ್ಮ.

ಓಹೋ, ವ್ಯಾವಹಾರಿಕವಾಗಿ ಮಾತನಾಡಿರಿ ನೋಡುವಾ?

ಶ್ರೀನಿವಾಸರಾಯರೇ, ನಮ್ಮ ಆಳವಿನೊಳಗಿನದಾಗಿದ್ದರೆ ಇದುವರೆಗೂ ಇಲ್ಲಿಯೇಕೆ ಕುಳಿತಿರುತ್ತಿದ್ದೆವು? ಹೊರಟು ಹೋಗಿ ಬಹಳ ವೇಳೆಯಾಗುತ್ತಲಿದ್ದಿತು

ಏನು ಮಾಡಬೇಕು? ದುಷ್ಟರ ಬಲೆಯಲ್ಲಿ ಬಿದ್ದಿರುವೆವು. ಇಲ್ಲವಾಗಿದ್ದರೆ ... .......

ಹ್ಹಾ-ಹ್ಹಾ-ಹ್ಹಾ! ಶ್ರೀನಿವಾಸರಾಯರೇ, ಇಲ್ಲವಾಗಿದ್ದರೆ ಏನು ಮಾಡುತ್ತಲಿದ್ದಿರಿ? ಇಂದುಶೇಖರ ಕೇಳಿದನು.

ನಿನ್ನ ಗಂಟಲು ಹಿಚುಗುತಲಿದ್ದೆ.

ಇದುವರೆಗೇಕೆ ಹಿಚುಕಲಿಲ್ಲ?

ನೀನು ಇಷ್ಟು ನೀಚನಿರುವೆಯೆಂಬದು ತಿಳಿದಿರಲಿಲ್ಲ.

ಏಕೆ, ತಿಳಿದಿರಲಿಲ್ಲ? ನಿನ್ನ ಕಪಟ ವ್ಯೂಹಕ್ಕಾಗಿ.

ಏಕೆ, ಅಂದು ನೋಡಲಿಲ್ಲವೆ? ನಾನು ಏನು ಮಾಡಬಲ್ಲೆನೆಂಬದು?

ಓಹೋ ಗೊತ್ತಿದೆ. ನೀನು ಮಾಡುವುದಾದರೂ ಏನು?

ಶ್ರೀನಿವಾಸರಾಯನು ಬಹಳ ರೇಗಿಗೆದ್ದು ಮಾತನಾಡಹತ್ತಿದನು, ಆದರೆ ಸುಬ್ಬಣ್ಣವರಿಗೆ ಅದು ಸರಿಬೀಳಲಿಲ್ಲ. ಅವರು ಶ್ರೀನಿವಾಸರಾಯನಿಗೆ ಸೂಕ್ಷ್ಮವಾಗಿ ಸುಮ್ಮನಿರುವಂತೆ ಸೂಚನೆ ಮಾಡಿದರು. ಶ್ರೀನಿವಾಸರಾಯನಿಗೆ ಆದರ ಮರ್ಮ ತಿಳಿಯಲಿಲ್ಲ. ಆದರೂ ತುಬ್ಬುಗಾರರ ಸೂಚನೆಯಲ್ಲಿ ಮರ್ಮವೇನೋ ಇರಬಹುದೆಂದು ಊಹಿಸಿ ಸುಮ್ಮನಾದನು.

ಏಕೆ ಶ್ರೀನಿವಾಸರಾಯರೇ, ಸುಮ್ಮನಾದಿರಲ್ಲ?

ಇಂದುಶೇಖರ, ಬಹಳ ಮಾತನಾಡುವದರಿಂದ ಲಾಭವೇನು? ಎಲ್ಲವೂ ದೈವದಾಟವೇ ದೈವದ ಮೂಲಕ ನಿನ್ನ ಕೈಯಲ್ಲಿ ಸಿಕ್ಕು ಬಿದ್ದಿರುವೆವು. ಅದೇ ದೈವದಲ್ಲಿ ನಮ್ಮನ್ನು ಬಿಡಿಸಬೇಕೆಂದಿದ್ದರೆ ಹೇಗಾದರೂ ಬಿಡಿಸಿಯೇ ಬಿಡಿಸುವದು

ಓಹೋ, ಇದೆಲ್ಲಿಯ ಅಳುಬುರುಕ ವೇದಾಂತ ಕಲಿತಿರಿ?

ಅಸಹಾಯ ಸ್ಥಿತಿಯಲ್ಲಿದ್ದವರಿಗೆ ಅಳುಬುರುಕ ವೇದಾಂತವೇ ಆಶ್ರಯವಲ್ಲವೆ? ಹಾಗಾದರೆ ಸೋಲನ್ನೊಪ್ಪಿದಿರಲ್ಲವೆ?

ಕೈ-ಕಾಲು ಕಟ್ಟಿ ಹಾಕಿ 'ನೋಡಿ ಒಗೆದಿರುವೆ'ನೆಂದರೆ ಏನೆನ್ನಬೇಕು? ಕುಸ್ತಿ ಆಡಲಿದ್ದರೆ ಕೈ-ಕಾಲು ಬಿಚ್ಚಿ ಸಡ್ಡು ಹೊಡೆದು, ಕಣದಲ್ಲಿ ಎದುರೆದುರಾಗಿ ನಿಲ್ಲಬೇಕು.

ಓಹೋ, ಹೀಗೋ? ಅದೂ ನಿಜ, ಆದರೆ ಅಸಾಧ್ಯ. ಏಕೆಂದರೆ, ನಿಮ್ಮನ್ನು ಬಿಡುವುದೆಂದರೆ ನಮ್ಮಗಳ ನಾಶಕ್ಕೆ ನಾವೇ ಕಾರಣರಾದಂತಾಗುತ್ತದೆ

ನಿಜ. ನಿನ್ನ ಅಪರಾಧಗಳನ್ನೆಲ್ಲ ಬಯಲಿಗೆಳೆಯುತ್ತೇವೆ.

ಅದೇನೋ, ಈಗ ಆ ಮಾತುಗಳ ಉಪಯೋಗವೇನು?

ಕೊಲೆಯನ್ನು ಕೂಡಾ ಮಾಡಿರುವೆ.

ಹಾಗನ್ನುವವರಾರು? ನಾನು.

ಆದಕ್ಕೆ ಆಧಾರವೇನು? ಶ್ರೀನಿವಾಸರಾಯರೇ, ಮೋಸಹೋಗಿರುವಿರಿ. ನಿಜವಾದ ಕೊಲೆಗಾರನಾರೆಂಬದನ್ನು ಕಂಡುಹಿಡಿಯುವವುದು ನಿಮಗಾರಿಗೂ ಶಕ್ಯವಿಲ್ಲ. ಅದಕ್ಕೆ ಶಕ್ತರೆಂದರೆ ಸುಬ್ಬಣ್ಣವರೊಬ್ಬರೇ ತಿಳಿಯಿತೆ? ಅಂತೆಯೇ ನಾವು ಬಹಳವಾಗಿ ವಿಚಾರದಲ್ಲಿರುವೆವು. ಅದೇಕೆ?

ನಿಮ್ಮ ಮೂವರನ್ನೂ ಕೊಲ್ಲಬೇಕೋ ಹೇಗೆ? ಅಥವಾ ನಿಮ್ಮೊಬ್ಬರ ನ್ನುಳಿಸಬೇಕೊ? ಹಾಗೆ ಮಾಡಬೇಕು ಎಂದು ಹಲವರು ಅಭಿಪ್ರಾಯ ಪಟ್ಟರೆ, ಉಳಿದವರ ಅಭಿಪ್ರಾಯ ಭಿನ್ನವಿರುತ್ತದೆ ಆದುದರಿಂದ ಈಗಲೆ ನಾನು ಯಾವ ನಿರ್ಣಯವನ್ನೂ ಹೇಳಲಾರೆ

ಆಗಲಿ ಬೇಕಾದಾಗ್ಗೆ ಬೇಕಾದರೆ ಹೇಳು

ಆದಂತೂ ಸರಿಯೆ. ಆಗಲಿ. ಈಗ ನನಗೆ ಬೇರೆ ಕೆಲಸಗಳಿವೆ

ಇಂದುಶೇಖರ ಸಮ್ಮನಾದ. ಅಂದರೆ ಅವನ ಸ್ವರಕೇಳುವುದು ನಿಂತಿತು. ಅವನು ಮೇಲೆಲ್ಲಿಯೋ ನಿಂತು ಮಾತನಾಡುತ್ತಲಿದ್ದ. ಅವನ ಸ್ವರವು ಮೂವರೂ ಕುಳಿತಲ್ಲಿಗೆ ಚನ್ನಾಗಿ ಕೇಳಬರುತ್ತಲಿದ್ದಿತು. ಇಂದುಶೇಖರನು ಮಾತನಾಡುವುದನ್ನು ಬಿಟ್ಟ ಮೇಲೆ ಶ್ರೀನಿವಾಸರಾಯನು ಸುಬ್ಬಣ್ಣವರನ್ನು ಪ್ರಶ್ನಾರ್ಥಕ ದೃಷ್ಟಿಯಿಂದ ನೋಡಿದನು. ಸುಬ್ಬಣ್ಣವರು ಶ್ರೀನಿವಾಸರಾಯನ ಕೈ ತೆಗೆದುಕೊಂಡು ಅವನ ಕೈ ಮೇಲೆ ತನ್ನ ಬೆರಳಿನಿಂದ ಏನನ್ನೋ ಬರೆದರು. ಅದರಿಂದ ಶ್ರೀನಿವಾಸರಾಯನಿಗೆ ಸಮಾಧಾನವೇ ಆಯಿತು.

ಇಂದುಶೇಖರನು ಹೀಗೆ ತನ್ನ ಅಬ್ಬರದ ಮಾತುಗಳನ್ನಾಡಿ ಅಲ್ಲಿಂದ ಹೊರಬಿದ್ದು ರಾಜಮಾರ್ಗಕ್ಕೆ ಬರುವ ವೇಳೆಗೆ ಸ್ವತಃ ಮುರಾರಿಯು ನಾಲ್ಕು ಜನ ಚತುರ ಶಿಪಾಯಿಗಳ ಸಂಗಡ ಸಾದಾ ವೇಷದಲ್ಲಿ ಒಂದು ಬಾಗಿಲು ಕಾಯುತ್ತಲೇ ಇದ್ದನು. ಮುರಾರಿ ಹೊರಬಿದ್ದು 'ಭರ' 'ಭರ' ಹೊರಟನು. ರಾತ್ರಿಯ ವೇಳೆಯಾದುದರಿಂದ ಜನದಟ್ಟಣೆ ಅಷ್ಟು ಬಹಳವಾಗಿರಲಿಲ್ಲ. ಜನರಹಿತ ಪ್ರದೇಶವನ್ನು ಸಮೀಪಿಸುತ್ತಲೆ ಮುರಾರಿ ತನ್ನ ಸಂಗಡ ಇದ್ದ ಶಿಪಾಯಿಗಳಲ್ಲಿ ಒಬ್ಬನಿಗೆ ಸನ್ನೆ ಮಾಡಿದನು. ಅವನು ಚಪಲತನದಿಂದ ಮುಂದೆ

ಹೋದವನೇ ಇಂದುಶೇಖರನ ಮುಖಕ್ಕೆ ದಪ್ಪವಾದ ಅರಿವೆಯಿಂದ ಮುಸುಕು ಹಾಕಿಬಿಟ್ಟನು ಅಷ್ಟರಲ್ಲಿ ಇನ್ನಿಬ್ಬರು ವೇಗವಾಗಿ ಮುಂದೆ ಹೋಗಿ ಅವನ ಎರಡೂ ಕೈಗಳನ್ನು ಗಟ್ಟಿಯಾಗಿ ಹಿಡಿದರು. ಉಳಿದಿಬ್ಬರು (ಮುರಾರಿ ಸಹಿತ) ಅವನ ಕೈ ಕಾಲುಗಳನ್ನು ಗಟ್ಟಿಯಾಗಿ ಕಟ್ಟಿ ಹೊತ್ತೇಬಿಟ್ಟರು.

ಇಂದುಶೇಖರನಿಗೆ ಕೂಗಲು ಕೂಡ ಅವಕಾಶವೇ ಸಿಕ್ಕಲಿಲ್ಲ. ಅವನು ಧಡಪಡಿಸುತ್ತ ಅವರ ಹೆಗಲಮೇಲೆಯೇ ಬಿದ್ದುಕೊಂಡಿರಬೇಕಾಯಿತು. ಅರ್ಧತಾಸು ಅವನನ್ನು ಹೊತ್ತುಕೊಂಡು ಹೋಗುವಷ್ಟು ವೇಳೆಗೆ ಪೋಲೀಸು ಕಚೇರಿಯೇ ಬಂದಿತು ಅವನನ್ನೊಯ್ದು ತೀರಾ ಒಳಭಾಗದಲ್ಲಿ ಮೊದಲೇ ನಿರ್ಧರಿಸಿದ್ದಂತೆ ಇಳಿಸಿದರು ಕೈಕಾಲುಗಳು ಬಂಧಿಸಲ್ಪಟ್ಟಿದ್ದರಿಂದ ಅವನು ಹಾಗೆಯೇ ಬಿದ್ದುಕೊಂಡಿರಬೇಕಾಯಿತು, ಆದರೂ ಬಾಯಿ ಬೇರೆ ಬಂದಾಗಿರಲಿಲ್ಲ. ತನ್ನನ್ನು ಹೀಗೆ ಮೋಸದಿಂದ ಕಟ್ಟಿದ್ದಕ್ಕೆ ಅವನು ಭಯಂಕರವಾಗಿ ಸಿಟ್ಟಿಗೆದ್ದನು. 'ನನ್ನನ್ನು ಹೀಗೆ ಮೋಸದಿಂದ ಕಟ್ಟಿದವರಾರು?' ಎಂದು ಅಧಿಕಾರೀ ವಾಣಿಯಿಂದ ಕೇಳಿದನು

ಮುರಾರಿ ತನ್ನ ನಿತ್ಯದ ಉಡುಪಿನಲ್ಲಿ ಅಲ್ಲಿಗೆ ಬಂದು:-'ಏಕೆ ರಾಯರೇ, ಹೇಗಿದೆ? ಎಲ್ಲವೂ ಕ್ಷೇಮತಾನೇ' ಎಂದು ನಗುತ್ತ ಪ್ರಶ್ನೆಮಾಡಿದನು

ಮುರಾರಿಯನ್ನು ನೋಡುತ್ತಲೇ ಇಂದುಶೇಖರನ ಅಬ್ಬರ ಕುಗ್ಗಿತು. ಹಾವಿಗೆ ಗರುಡನ ದರುಶನವಾದಂತಾಯಿತು. ಅವನು ಕೊಂಚ ನಮ್ರನಾಗಿ, 'ಯಾರು? ಸುಬ್ಬಣ್ಣನವರ ಸಹಾಯಕ ಮುರಾರಿರಾಯರೇ?' ಎಂದು ನುಡಿದನು.

ಅಹುದು ಮಹಾಶಯ, ಆತನೇ. ಸಿಂಹನನ್ನು ಹಿಡಿದು ಕಟ್ಟಿದರೂ ಸಿಂಹನ ಮರಿ ಹೊರಗೇ ಉಳಿದಿದ್ದಿತೆಂಬದನ್ನು ನೀನು ಮರೆತಂತೆ ತೋರುತ್ತದೆ. ಆದರ ಫಲವೇ ಇದು. ಸಾಕಷ್ಟು ಮುಂಜಾಗ್ರತೆ ವಹಿಸದಿದ್ದುದರ ಪರಿಣಾಮವಾಗಿ ನೀನು ಬಂದಿಯಾಗಬೇಕಾಯಿತು ಮುರಾರಿ ಅವನ ಹೃದಯಕ್ಕೆ ಚುಚ್ಚುವಂತೆ ಮಾತನಾಡಿದನು

ಅಂದರೆ, ನೀವು ಅನ್ನುವದಾದರೂ ಏನು? ಇಂದುಶೇಖರ ಅರಿಯದವನಂತೆ ಪ್ರಶ್ನೆ ಮಾಡಿದ.

ಅದು ಯಥಾವಕಾಶ ತಿಳಿದು ಬರುವದು, ಮುರಾರಿ ನುಡಿದನು

ಹೀಗೆ ಅವರೀರ್ವರಲ್ಲಿ ಮಾತುಗಳು ನಡೆದಿರಲು, ಮತ್ತೆ ನಾಲ್ಕು ಸಿಪಾಯಿಗಳು ಒಬ್ಬನನ್ನು ಹೊತ್ತು ತಂದಿಳಿಸಿದರು ಯಾರು? ಮಲ್ಲಪ್ಪ ಶೆಟ್ಟರೆ. ಮಲ್ಲಪ್ಪಸೆಟ್ಟರಂತೂ ಸಿಟ್ಟಿನಿಂದ ಹುಚ್ಚರೇ ಆಗಿದ್ದರು. ಅವರ

ಮೂಗು ಒಮ್ಮೊಮ್ಮೆ ಕುಂಬಳಕಾಯಿಯಂತೆ ಉಬ್ಬುತ್ತಲಿದ್ದಿತು. ಅವರು ಸಿಂಹಗರ್ಜನೆಯಿಂದ, ನನ್ನನ್ನೇಕೆ ಬಂಧಿಸಿದಿರಿ? ಎಂದು ಅಬ್ಬರಿಸಿದರು.

ಪೋಲೀಸರು ಉಳಿದ ಮಾತುಗಳನ್ನಾಡದೆ ನಮಗೆ ಅದಾವುದೂ ಗೊತ್ತಿಲ್ಲ. ಫೌಜದಾರ ಸಾಹೇಬರ ಅಪ್ಪಣೆಯಂತೆ ವರ್ತಿಸುತ್ತಲಿರುವೆವು ಅಷ್ಟೆ? ಎಂದರು.

ಅದೇ ವೇಳೆಗೆ ಸ್ವತಃ ಫೌಜದಾರ ಸಾಹೇಬರು ಒಂದು ವ್ಯಕ್ತಿಯನ್ನು ಹೊರಿಸಿ ತಂದರು. ಅವರಾರು? ಮಾಟದ ಮನೆಯ ಕಲ್ಲಪ್ಪನವರು. ಕೊಂಚ ವೇಳೆಯಲ್ಲಿಯೇ ಅಲ್ಲಿ ಸುಮಾರು ಇಪ್ಪತ್ತು ಜನರು ಬಂದು ಕೂಡಿದರು. ಸೆಟ್ಟರು, ಸಾವುಕಾರರು, ಶಾನಭೋಗರು ಮುಂತಾದವರೆಲ್ಲರೂ ಅಲ್ಲಿದ್ದರು. ಕಮಲಿನಿಯಾದರೂ ಬಂಧಿಸಿ ಅಲ್ಲಿಗೆ ತರಲ್ಪಟ್ಟಿದ್ದಳು.

ಫೌಜದಾರನೂ ಮುರಾರಿಯೂ ಅಲ್ಲಿಯೇ ನಿಂತಿದ್ದರು ಫೌಜದಾರನು, ಮುರಾರಿರಾಯರೇ, ಕುಸುಮಪುರದ ಮುಖಂಡರ ದುಂಡುಮೇಜಿನ ಪರಿಷತ್ತೇ ನೆರೆದಿದೆಯಲ್ಲವೆ? ಎಂದನು.

ಅಹುದು ಫೌಜದಾರಸಾಹೇಬ, ನಿಮ್ಮ ಮಾತು ನಿಜವಿರುತ್ತದೆ. ಅವರು ಬಹಳ ಗುಪ್ತವಾಗಿ ಕಲೆತು ಮಹತ್ವದ ವಿಷಯವನ್ನು ಚರ್ಚಿಸುತ್ತಲಿರುವರು. ಚರ್ಚೆಯ ವಿಷಯ ನಿಮಗೆ ತಿಳಿದಿದೆಯೇನು? ಮುರಾರಿ ಬೇಕೆಂದೇ ಫೌಜದಾರರನ್ನು ಕೇಳಿದನು.

ಛೆ! ನಮಗೆ ಹೇಗೆ ಗೊತ್ತಾಗಬೇಕು; ನಾವು ಪೋಲೀಸ ಅಧಿಕಾರಿಗಳು. ಇಂತಹ ಪ್ರಶ್ನೆಗಳ ಸಂಬಂಧವು ನಮಗಿಲ್ಲ. ನೀವು ತುಬ್ಬುಗಾರರು. ನಿಮಗೇ ಗೊತ್ತಿರಬಹುದು ಫೌಜದಾರನಂದನು.

ಈಗ ಇವರೆಲ್ಲರೂ ತಾವು ಬಂಧಿಯಾಗಿರಿಸಿದಂತಹ ಪೋಲೀಸ ಕಮಿಶನರ ಶ್ರೀನಿವಾಸರಾಯರು, ಪತ್ತೇದಾರಿ ನರಸಿಂಗರಾಯರು, ತುಬ್ಬುಗಾರ ಸುಬ್ಬಣ್ಣವರು ಈ ಮೂವರನ್ನು ಏನು ಮಾಡಬೇಕೆಂಬ ಬಗ್ಗೆ ಗುಪ್ತವಾಗಿ ವಿಚಾರಿಸುತ್ತಲಿರುವರು ಎಂದು ನುಡಿದನು.

ಮೂವರ ಹೆಸರುಗಳನ್ನು ಕೇಳುತ್ತಲೆ ಅವರ ಮೋರೆಗಳಿಗೆ ಕಪ್ಪು ಬಡಿದಂತಾಯಿತು, ಆದರೂ ತಾವು ಅವರನ್ನು ಬಂಧಿಯಾಗಿಟ್ಟ ಸ್ಥಳವನ್ನು ಶೋಧಿಸಲು ಯಾರಿಗೂ ಶಕ್ಯವಿಲ್ಲವೆಂದು ತಿಳಿದು ಸುಳ್ಳು, ತೀರಾ ಸುಳ್ಳು. ಅವರನ್ನು ನಾವು ಬಂದಿಯಾಗಿ ಇರಿಸಿಯೇ ಇಲ್ಲ. ನಾವು ಈ ಬಗ್ಗೆ ಮಹಾರಾಜರ ಕಡೆಗೆ ದೂರು ಒಯ್ಯುವೆವು. ಸುಪ್ರತಿಷ್ಠಿತ ನಾಗರಿಕರಾದ ನಮ್ಮನ್ನು ಕೊಲೆಯ ಅಪರಾಧಿಗಳಂತೆ ಕ್ರೂರತನದಿಂದ ನಡೆಸಿಕೊಂಡ ಬಗ್ಗೆ ನಮ್ಮ

ಕ್ಷಮೆ ಬೇಡಬೇಕಾದೀತು. ಇದು ಮೊಗಲಾಯಿಯಲ್ಲ, ಎಂದು ಕೂಗಿದರು.

ಅಹುದು. ಕುಸುಮಪುರದ ಸುಪ್ರತಿಷ್ಠಿತ ನಾಗರಿಕ ಮಹಾಶಯರೇ, ನಿಮ್ಮ ಮಾತು ನಿಜವಿದೆ. ಕುಸುಮಪುರವು ಮೊಗಲಾಯಿಯಲ್ಲ, ಕುಸುಮ ಪುರದಲ್ಲಿ ನ್ಯಾಯಾನ್ಯಾಯಗಳಿಗೆ ಅವಕಾಶವಿದೆ. ದುಷ್ಟರಿಗೆ ದಂಡನೆಯಾಗು ತ್ತಲಿದೆ. ಅಂತೆಯೇ ಇಂದು ಅಧಿಕಾರಿಗಳು ಹೀಗೆ ಆಚರಿಸಬೇಕಾಯಿತು, ಎಂದು ಮುರಾರಿ ವ್ಯಂಗ್ಯವಾಗಿ ಮಾತನಾಡಿದನು

ಮುರಾರಿಯ ಮಾತಿನಿಂದ ಇಂದುಶೇಖರನಿಗೆ ಭಯಂಕರವಾಗಿ ಕೋಪ ಬಂದಿತು. ಅವನು ಕ್ರುದ್ಧನಾಗಿ:-ಹೀಗೆ ನಮ್ಮೆಲ್ಲರ ಅಪಮಾನ ಮಾಡಿ ದವರ ಪರಿಣಾಮವು ಒಳಿತಾಗಲಿಕ್ಕಿಲ್ಲ ಕುಸುಮಪುರಕ್ಕೆ ಒಬ್ಬ ಅರಸರಿರು ವರು. ಒಂದು ವೇಳೆ ಅವರು ನಿಮ್ಮ ಮಾತಿಗೇ ಕಿವಿಗೊಟ್ಟರೆ ಮೇಲೆ ಬ್ರಿಟಿಶ ಸರಕಾರವಿರುವದು ನೀಚರಿರಾ! ಎಚ್ಚರಾಗಿರ್ರಿ........

ಓಹೋ, ಇಂದುಶೇಖರರಾಯರಿಗೆ ಸಿಟ್ಟು ಬಂದಿತೇನು? ಉಪಾಯ ವಿಲ್ಲ. ದಯವಿಟ್ಟು ಕ್ಷಮಿಸಿರಿ ಒಂದೆರಡು ದಿನ ತಡೆಯಿರಿ ಆ ಮೇಲೆ ಬ್ರಿಟಿಶ ಸರಕಾರಕ್ಕಾಗಲೀ, ಅದರ ಮೇಲಿನ ರಾಷ್ಟ್ರಸಂಘಕ್ಕಾಗಲೀ, ಇಲ್ಲವೆ ಎಲ್ಲರ ಮೇಲಿನ ಯಮರಾಯನ ಬಳಿಗಾದರೂ ಹೋಗಿ ದೂರುವಿರಂತೆ. ನೀವೂ ಮತ್ತು ನಿಮ್ಮ ಆ ಕಮಲಾಸಾನಿಯೂ.......

ಕಮಲಿನಿಯು ನಾಗಿಣಿಯಂತೆ ಫೂತ್ಕರಿಸುತ್ತ 'ದುಷ್ಟಾ! ಕುಲೀನ ಸ್ತ್ರೀ ಯರ ಅವಮಾನ ಮಾಡಲು ನಾಚಿಕೆಯೆನಿಸುವುದಿಲ್ಲವೆ? ಈ ಬಗ್ಗೆ ನೀನು ಭಯಂಕರ ಶಿಕ್ಷೆಗೆ ಗುರಿಯಾಗಬೇಕಾಗುವದು ತಿಳಿಯಿತೆ? ಎಂದು ಅಂದಳು.

ಮುರಾರಿ ನಗುತ್ತ ಓಹೋ, ಕಂಡದ್ದು ಮಾತಾಡಿದರೆ ಕೆಂಡದಷ್ಟು ಸಿಟ್ಟು; ಜಾರಿಣಿಗೆ ಜಾರಿಣಿಯೆಂದರೆ ಸಿಟ್ಟು ಬರಲಿಕ್ಕಿಲ್ಲವೆ? ಹೋಗಲಿ ಫೌಜ ದಾರ ಸಾಹೇಬರೆ, ನಿಮ್ಮ ಯಾದಿಯಂತೆ ಎಲ್ಲ ಆಮಂತ್ರಿತ ವ್ಯಕ್ತಿಗಳೂ ಆಗಮಿಸಿರುವರೆ? ಎಂದು ಕೇಳಿದನು.

ಇನ್ನಾರೂ ಉಳಿದಂತಿಲ್ಲ, ಆದರೂ ನೋಡುತ್ತೇನೆ. ನಮ್ಮ ಮಲ್ಲಪ್ಪ ಶೆಟ್ಟರು ಬಂದಿರುವರು ಕಲ್ಲಪ್ಪನವರು ಬಂದಿರುವರು ಲಾಲಾಚಂದರೂ ಆಗಮಿಸಿರುವರು. ಮತ್ತೆ ಬಡಾಭಾಯಿ, ಛೋಟೂಭಾಯಿಯವರೂ ಬಂದಿ ರುವರು. ಅಗಡಬಂಬರಾಯರೂ ಆಗಮಿಸಿರುವರು. ಸ್ತ್ರೀ ಪ್ರತಿನಿಧಿ ಕಮಲಾ ಸಾನಿಯವರೂ ಬಂದಿದ್ದಾರೆ ತುಬ್ಬುಗಾರ ಸಾಹೇಬರೆ, ನಿಮ್ಮ ಸೂಚನೆ ಯಂತೆ ಬಹುತರ ಎಲ್ಲರೂ ಬಂದಿರುವರು, ಎಂದು ನಗುತ್ತ ನುಡಿದನು

ಹಾಗಾದರೆ ಈ ನಮ್ಮ ಸನ್ಮಾನ್ಯ ಅತಿಥಿಗಳಿಗೆ ತಮ್ಮ ತಮ್ಮ ಗುಪ್ತ

ವಿಷಯುಗಳನ್ನು ಚರ್ಚಿಸಲು ಅವಕಾಶ ಕೊಟ್ಟು ನಾವು ಹೋಗೋಣ ನಡೆಯಿರಿ. ಇವರ ಚರ್ಚೆಗೆ ವಿಘ್ನಬಾರದಂತೆ ನೋಡಿಕೊಳ್ಳಲು ನಾಲ್ಕು ಜನ ಶೂರ ಸಿಪಾಯಿಗಳನ್ನು ಬಾಗಿಲಿಗೆ ನಿಲ್ಲಿಸಿ ಬಿಡಿರಿ. ಹೀಗೆ ಹೇಳಿದನು.

ಅಲ್ಲಿಯು ಎಲ್ಲ ವ್ಯವಸ್ಥೆಯನ್ನು ಚನ್ನಾಗಿ ಮಾಡಿ ಇಬ್ಬರೂ ಹೊರಟು ಅರಮನೆಗೆ ಹೋದರು. ಮಧ್ಯರಾತ್ರಿ ಮೀರಿ ಹೋಗಿದ್ದರೂ ಮಹಾರಾಜರು ಮಲಗಿರಲಿಲ್ಲ. ತಮ್ಮ ಸಂಸ್ಥಾನದಲ್ಲಿ ನಡೆಯುತ್ತಲಿದ್ದ ಅನರ್ಥಗಳ ಬಗ್ಗೆ ಅವರು ಬಹಳ ಚಿಂತೆಗೊಳಗಾಗಿದ್ದರು ಅವುಗಳಿಂದ ಸಂಸ್ಥಾನವು ಹೇಗೆ ಸುರಕ್ಷಿತವಾದೀತೆಂದು ಬಹಳವಾಗಿ ಯೋಚಿಸುತ್ತಲಿದ್ದರು ಅವರಿಬ್ಬರೂ ಬಂದುದನ್ನು ನೋಡಿ, ಅವರು ಆನಂದದಿಂದ ಸ್ವಾಗತಿಸಿದರು

ಮಹಾರಾಜ, ಮಾಟದಮನೆಗೆ ಹೋಗಬೇಕಾಗಿದೆ. ಮತ್ತು ಮಹಾರಾಜರೂ ಬರುತ್ತಲಿದ್ದರೆ ...

ಛೆ, ನಾನಾದರೂ ಬರುವೆನು.

ಹಾಗಾದರೆ ಈಗಲೇ ಏಳಬೇಕು.

ನಡೆಯಿರಿ

ಹೀಗೆ ಆ ಮೂವರೂ ಕೂಡಿ ಹೊರಟರು ಮುರಾರಿ ಸುಬ್ಬಣ್ಣವರು ಬರೆದಿಟ್ಟ ಮಾಟದ ಮನೆಯ ದಾರಿಯನ್ನರಿತಿದ್ದನು. ದೇವಿಯ ಗುಡಿಗೆ ಹೋಗಿ ಹಿಂದಿನ ಮಗ್ಗಲು ಇದ್ದ ಗೋಡೆಯಲ್ಲಿ ವಿಶಿಷ್ಟ ಮಳೆಯನ್ನು ದಬ್ಬಿ ತಿರುವಲು ಕಲ್ಲು ಸರಿದು ದಾರಿಯಾಯಿತು ಮೂವರೂ ತಮ್ಮ ಒಂದು ಕೈಯಲ್ಲಿ ಪಿಸ್ತೂಲು ಇನ್ನೊಂದು ಕೈಯಲ್ಲಿ ವಿದ್ಯುತ್ತಿನ ಬ್ಯಾಟರಿಗಳನ್ನು ಹಿಡಿದುಕೊಂಡು ಹೊರಟರು ಹಲವು ಸೋಪಾನಗಳನ್ನು ಇಳಿಯುತ್ತಲೇ ಮುಂದೆ ಸಮನೆಲವು ಹತ್ತಿತು ಅಲ್ಲಿಂದ ಒಂದು ಒಂದೂವರೆ ಫರ್ಲಾಂಗು ಕ್ರಮಿಸುತ್ತಲೆ ಅವರೆಲ್ಲರೂ ಒಂದು ಗೋಡೆಯ ಎದುರು ಹೋಗಿ ನಿಂತರು ಮುರಾರಿ ಅತ್ತಿತ್ತ ನಿರೀಕ್ಷಿಸಲು ಒಂದು ಸ್ಪ್ರಿಂಗಿನ ಗುಂಡಿ ಕಾಣಿಸಿತು. ಅದನ್ನು ಒಳಗೆ ದಬ್ಬಿದನು ಬಾಗಿಲು ತೆರೆಯಲಿಲ್ಲ ಅತ್ತಿತ್ತ ತಿರುವಲೆತ್ನಿಸಿದನು. ಅದೂ ಬರಲಿಲ್ಲ ಹಾಗಾದರೆ ಅದು ಮೋಸದ ಗುಂಡಿಯಿದ್ದು ನಿಜವಾದ ಸಾಧನ ಬೇರೆ ಇರಬಹುದೆಂದು ಅತ್ತಿತ್ತ ನೋಡಿದನು. ಏನೂ ಕಾಣಿಸಲಿಲ್ಲ. ಅಷ್ಟರಲ್ಲಿ ಅವನಿಗೆ ಒಂದು ಯುಕ್ತಿ ಹೊಳೆಯಿತು ಅವನು ಆ ಗುಂಡಿಯನ್ನು ಹೊರಕ್ಕೆ ತೆಗೆಯಲು ಯತ್ನಿಸಿದನು. ಸುಲಭವಾಗಿ ಬಂದಿತು, ಮತ್ತು ಕೂಡಲೆ ಬಾಗಿಲೂ ತೆರೆಯಿತು. ಮೂವರೂ ಒಳಗೆ ಹೋದರು. ಅಲ್ಲಿ ಒಂದು ವಿಶಾಲವಾದ ಕೋಣೆಯಿದ್ದಿತು ಅದು ಬಹಳ

ಸ್ವಚ್ಛವಾಗಿದ್ದಿತು. ಅಲ್ಲಿ ಹೋಗಿ ಅತ್ತಿತ್ತ ನಿರೀಕ್ಷಿಸಲು ಒಂದೆಡೆಯಲ್ಲಿ ವಿದ್ಯು ಲ್ಲತೆಯ ಅನೇಕ ಸ್ವಿಚ್ಚುಗಳಿದ್ದವು. ಅವುಗಳಿಗೆಲ್ಲ ಮೇಲೆ ಬೇರೆ ಬೇರೆ ಹೆಸರುಗಳಿದ್ದುವು. ಸುಬ್ಬಣ್ಣ ಮುಂತಾದವರು ಎಲ್ಲಿರಬಹುದೆಂಬ ಸಂಗತಿಯೇ ತಿಳಿಯದಾಯಿತು ಮಾಟದ ಮನೆಗೆ ಹತ್ತಿಪ್ಪತ್ತು ಭಾಗಗಳಾದರೂ ಇದ್ದುವು. ಅವನ್ನೆಲ್ಲ ಶೋಧಿಸ ಹೋಗಿ ಯಾವದೊಂದು ಬಲೆಯಲ್ಲಿ ತಾವೇ ಸಿಲುಕಿದರೆ ಹೇಗೆ? ಎಂದು ಅತ್ತಿತ್ತ ನಿರೀಕ್ಷಿಸಹತ್ತಲು, ಸ್ವಿಚ್ಚುಗಳಲ್ಲಿಯೇ ಒಂದೆಡೆ ಟೆಲಿಫೋನು ಎಂದು ಬರೆದಿದ್ದು, ಅದಕ್ಕೆ ಸಮೀಪದಲ್ಲಿಯೇ ಎಲ್ಲ ಮಾಟದ ಮನೆಯ ಪ್ರತಿಬಿಂಬ ಎಂದು ಬರೆದಿದ್ದಿತು.

ಒಡನೆಯೇ ಮುರಾರಿ ಪ್ರತಿಬಿಂಬದ ಸ್ವಿಚ್ಚು ದಬ್ಬಲು ಅವರ ಎದುರಿಗಿದ್ದ ಕನ್ನಡಿಯಲ್ಲಿ ಪ್ರತಿಬಿಂಬ ಬಿದ್ದಿತು. ಕೆಳಗಿನ ಒಂದು ಭಾಗದಲ್ಲಿ ಮೂವರೂ ಸಚಿಂತರಾಗಿ ಕುಳಿತುದು ಕಾಣಿಸಿತು.

ಅಲ್ಲಿ ಬಂದಿದ್ದ ಮೂವರಿಗೂ ಬಹಳ ಆನಂದವಾಯಿತು.

ಮುರಾರಿ ಅವರೊಡನೆ ಮಾತನಾಡಬೇಕೆಂದು ಟೆಲಿಫೋನಿನ ಸ್ವಿಚ್ಚು ದಬ್ಬಿದನು ಕೂಡಲೆ ಸುಬ್ಬಣ್ಣವರು ಕುಳಿತಲ್ಲಿ ಮುರಾರಿಯ ಪ್ರತಿಬಿಂಬ ಮೂಡಿತು.

'ಯಾರು? ಮುರಾರಿ!' ಎಂದು ಸುಬ್ಬಣ್ಣವರು ಉದ್ಗಾರ ತೆಗೆದರು.

---

## ● ಬಿಡುಗಡೆ ಮತ್ತು ಬಂಧನ ●

ಮುರಾರಿಯ ಪ್ರತಿಬಿಂಬ ಕೆಳಗೆ ಕಾಣುತ್ತಲೇ ಶ್ರೀನಿವಾಸರಾಯನು ಇಂದುಶೇಖರನೇ ಬಂದನೆಂದು ತಿಳಿದನು, ಆದರೆ ಮೋರೆ ಹೊಸದಾಗಲು ಇನ್ನಾರೋ ದುಷ್ಟರ ಗುಂಪಿನಲ್ಲಿಯವನೊಬ್ಬನಿರಬಹುದೆಂದು ತಿಳಿದನು. ಸುಬ್ಬಣ್ಣವರು ಮುರಾರಿಯೆನ್ನಲು ಆಶ್ಚರ್ಯದಿಂದ ಮತ್ತೊಮ್ಮೆ ನಿರೀಕ್ಷಿಸಿದನು ನಿಜವಾಗಿಯೂ ಆವನು ಮುರಾರಿಯೇ ಆಗಿದ್ದನು. ಅದನ್ನು ನೋಡಿ ಶ್ರೀನಿವಾಸರಾಯನಿಗೆ ಅತ್ಯಾನಂದವಾಯಿತು ನರಸಿಂಗರಾಯನೂ ತನಗೆ ಆ ಕಾರಾಗ್ರಹದಿಂದ ಮುಕ್ತಿದೊರೆಯಬಹುದೆಂದೆಣಿಸಿರಲಿಲ್ಲ; ಆದರೆ ಅಕಸ್ಮಾತ್ತ ಸುಬ್ಬಣ್ಣವರ ಸಹಾಯಕ ಮುರಾರಿ ಅಲ್ಲಿಗೆ ಬರಲು ತಮಗೆ ಬಿಡುಗಡೆಯಾಯಿತೆಂದು ತಿಳಿದು ಆನಂದ ಹೊಂದಿದರು.

ಸುಬ್ಬಣ್ಣವರೇ, ಇಲ್ಲಿ ಮಹಾರಾಜರೂ ಬಂದಿರುವರು. ನೀವಿರುವ ಮನೆಯನ್ನು ಶೋಧಿಸಬೇಕಾಗಿದೆ. ನಿಮ್ಮ ಪ್ರತಿಬಿಂಬ ಕಾಣಿಸಿದರೂ

ನಿಮ್ಮನ್ನು ಇಷ್ಟು ಸುಲಭವಾಗಿ ಬಿಡಿಸಲು ಬರುವಂತಿಲ್ಲವೆಂದು ತೋರುತ್ತದೆ

ಅಹುದು; ಮುರಾರಿ, ಸಾವಧಾನದಿಂದ ಕೆಲಸ ಮಾಡಬೇಕು. ಅಕಸ್ಮಾತ್ ಯಾವದೊಂದು ಸ್ವಿಚ್ಚು ಒತ್ತಿಬಿಟ್ಟರೆ ಏನಾದರೂ ಸಂಭವಿಸಬಹುದು ನಾವು ಕುಳಿತ ಪ್ರತಿಯೊಂದು ಭಾಗವು ಸ್ಪ್ರಿಂಗಿನಿಂದ ಜೋಡಿಸಲ್ಪಟ್ಟಿದ್ದು ಬೇಕಾದ ಸಮಯದಲ್ಲಿ ತಳ್ಳಲ್ಪಡುತ್ತದೆ ನಮ್ಮ ಬುಡಕ್ಕೆ ಭಯಂಕರ ನೀರಿನ ಪ್ರವಾಹವಿದ್ದು ನಾವು ಕುಳಿತ ಹಾಸುಗಲ್ಲುಗಳು ಮಾಯವಾಗಿ ನಾವೆಲ್ಲ ನೀರಲ್ಲಿ ಬೀಳುವಂತೆ ಮಾಡಲು ಬರುತ್ತದೆ.

ಆಂ, ಹಾಗಾದರೆ ಹೇಗೆ ಮಾಡಬೇಕು?

ಮೊದಲು ಅಲ್ಲೆಲ್ಲಿಯಾದರೂ ಸೂಚನೆಗಳ ಪುಸ್ತಕವಿದ್ದರೆ ಶೋಧಿಸು. ಏಕೆಂದರೆ, ಇಷ್ಟು ದೀರ್ಘವಾದ ಯೋಜನೆಗೆ ಪುಸ್ತಕದ ಸಹಾಯವಿಲ್ಲದಿದ್ದಿರಲಿಕ್ಕಿಲ್ಲ. ಅಹುದು. ಹಾಗೆಯೇ ಮಾಡುವೆನು.

ಹೀಗೆ ನುಡಿದು ಮುರಾರಿ ಅತ್ತಿತ್ತ ಶೋಧಿಸಹತ್ತಿದನು ಅಲ್ಪಾವಕಾಶದಲ್ಲಿಯೇ ಅಲ್ಲೊಂದು ಪೆಟ್ಟಿಗೆಯು ಕಾಣಿಸಿತು. ಬಹಳ ಭದ್ರವಾದುದು. ಉಕ್ಕಿನ ತಗಡುಗಳಿಂದಲೇ ಮಾಡಿದುದು. ಆ ಪೆಟ್ಟಿಗೆಯನ್ನು ತೆರೆಯು ಬೇಕಾಯಿತು, ಆದರೆ ಅದಕ್ಕೆ ಬಾಯಿಯೆಲ್ಲಿ? ಕೀಲಿಯೆಲ್ಲಿ? ಅನ್ನುವವೇನೂ ತಿಳಿಯುವಂತಿರಲಿಲ್ಲ. ಮುರಾರಿ ಬಹಳವಾಗಿ ತನ್ನ ತಲೆ ವೆಚ್ಚ ಮಾಡಿದನು ಸಂದುಕದ ಮೇಲಿನ ಮಳೆಗಳಂತೆ ಕಾಣುತ್ತಲಿದ್ದ ಭಾಗಗಳನ್ನು ಶೋಧಿಸಿ ಅವುಗಳಲ್ಲಿ ಒಂದೊಂದನ್ನೇ ಒಳಕ್ಕೆ ದಬ್ಬುತ್ತಲೂ ಎಡಬಲಗಳಿಗೆ ತಿರುವುತ್ತಾ ಹೊರಕ್ಕೆ ಎಳೆಯುತ್ತಲೂ ಯತ್ನಿಸುತ್ತಕುಳಿತನು. ಹೀಗೆ ಅವನು ತನ್ನ ಪ್ರಯತ್ನದಲ್ಲಿ ಮಗ್ನನಾಗಿರುವಾಗ ಆವಾಗಲೋ ಪೆಟ್ಟಿಗೆ ತೆರೆದ. ಹೋಗಿದ್ದಿತು. ಯಾವ ಮೊಳೆಯಿಂದ ಹೇಗೆ ಅನ್ನುವುದೇನೂ ತಿಳಿಯುವಂತಿರಲಿಲ್ಲ ಆ ಉಕ್ಕಿನ ಸಂದುಕದಲ್ಲಿ ಬೇರೆ ಚಿಕ್ಕ ಚಿಕ್ಕ ಮನೆಗಳಿದ್ದವು. ಅವುಗಳನ್ನು ತೆರೆಯುವುದೇನೂ ಅಷ್ಟು ಕಠಿಣವಾಗಿರಲಿಕ್ಕಿಲ್ಲ. ಆ ಮನೆಗಳನ್ನೆಲ್ಲ ತೆರೆದು ಶೋಧಿಸುತ್ತಿರಲು, ಒಂದರಲ್ಲಿ ಒಂದು ಪುಸ್ತಕ ದೊರೆಯಿತು. ಅದರ ಮೇಲೆ ಮಾಟದ ಮನೆ ಎಂದು ಬರೆದಿದ್ದಿತು. ಒಳಗೆ ಅದರ ರಚನೆ, ಗುಪ್ತ ಸ್ಪ್ರಿಂಗು, ವಿದ್ಯುತ್ತಿನ ಯೋಜನೆ ಇವೆಲ್ಲವುಗಳ ವರ್ಣನೆ ಬರೆದಿದ್ದಿತು ಒಂದೊಂದೇ ಭಾಗವನ್ನೂ ಅಲ್ಲಿಯ ಗೌಪ್ಯ ಯೋಜನೆಯನ್ನೂ ನೋಡಿ ಆ ಮೂವರಿಗೂ ಬಹಳ ಆಶ್ಚರ್ಯವಾಯಿತು. ಅಲ್ಲಿಂದ ಸುಬ್ಬಣ್ಣವರಿದ್ದ ಭಾಗವನ್ನು ಶೋಧಿಸಿ ತೆಗೆದನು. ಅದು 'ಯಮಪುರಿ' ಎಂಬ ಭಾಗದಲ್ಲಿದ್ದಿತು ಸುಬ್ಬಣ್ಣವರಿದ್ದ ಮನೆಯ ಸುತ್ತಲೂ ಅಗ್ನಿ ಕುಂಡಿ, ನರಕ ಮುಂತಾದ ಭಾಗಗಳಿದ್ದವು.

ಮುರಾರಿ ಆ ಭಾಗದ ದಾರಿಯನ್ನೂ ಅದಕ್ಕೆಂದು ಯೋಚಿಸಬೇಕಾಗಿದ್ದ ಸಾಧನೆಗಳನ್ನೂ ಚನ್ನಾಗಿ ನೋಡಿ ಅಲ್ಲಿಂದ ಒಂದು ಸ್ವಿಚ್ಚು ಒತ್ತಿದನು. ಒಡನೆಯೇ ಮುರಾರಿ ಮೊದಲಾದವರು ನಿಂತಲ್ಲಿಯೇ ಒಂದು ಬಾಗಿಲು ತೆರೆಯಿತು. ಮುರಾರಿ ತನ್ನ ಕೈಯಲ್ಲಿ ಆ ಪುಸ್ತಕ ತೆಗೆದುಕೊಂಡೇ ಹೊರಟನು. ಉಳಿದವರಿಬ್ಬರೂ ಬೆನ್ನು ಹತ್ತಿದರು. ಆ ಬಾಗಿಲ ಹತ್ತರ ಹೋಗಿ ಅಲ್ಲಿಯ ಒಂದು ವಿದ್ಯುದ್ದೀಪದ ಸ್ವಿಚ್ಚು ದಬ್ಬಲು ಅವರು ಹೋಗಲಿದ್ದ ದಾರಿಯಲ್ಲಿ ಸ್ವಚ್ಛವಾದ ಪ್ರಕಾಶ ಬಿದ್ದಿತು. ಅಲ್ಲಿಂದ ಕೆಲವು ಸೋಪಾನಗಳನ್ನಿಳಿದು ಹೋಗಲು ಅಲ್ಲಿ ಮತ್ತೊಂದು ಮನೆ ಹತ್ತಿತು. ಅಲ್ಲಿ ಹಾಸು-ಹೊದಿಕೆಗಳಾಗಲಿ, ಕುಳ್ಳಿರುವ ಸಾಧನ ಸಾಮಗ್ರಿಗಳಾಗಲಿ ಏನೂ ಇರಲಿಲ್ಲ. ಪುನಃ ತನ್ನ ಕೈಯಲ್ಲಿದ್ದ ಪುಸ್ತಕವನ್ನು ನೋಡಿ ಅಲ್ಲಿಯೇ ಒಂದು ಸ್ಪ್ರಿಂಗಿನ ಗುಂಡಿಯನ್ನು ಒತ್ತುತ್ತಲೆ ಪುನಃ ಅಲ್ಲೊಂದು ಬಾಗಿಲು ತೆರೆಯಿತು. ಅದೇ ಸುಬ್ಬಣ್ಣ ಮುಂತಾದವರಿದ್ದ ಕೋಣೆಯು. ಅಲ್ಲಿಯೇ ಒಂದು ಸ್ಪ್ರಿಂಗಿನ ನಿಚ್ಚಣಿಕೆಯು ಇದ್ದಿತು. ಅದನ್ನು ಕೆಳಗೆ ಬಿಡುತ್ತಲೆ ಮೂವರೂ ಮೇಲೆ ಹತ್ತಿದರು. ಮಹಾರಾಜರು ಮೂವರನ್ನೂ ಆನಂದದಿಂದ ಸ್ವಾಗತಿಸಿದರು. ಒಡನೆಯೇ ಸುಬ್ಬಣ್ಣನವರು ಮಹಾರಾಜರನ್ನು ಅಭಿವಂದಿಸಿ ಮಹಾರಾಜ, ಕೊನೆಗೆ ಈ ಪಾದಗಳ ಸೇವೆಗೆ ಬಂದಂತಾಯಿತು. ಶ್ರೀನಿವಾಸರಾಯರಂತು ಆಶೆಯನ್ನೇ ಬಿಟ್ಟಿದ್ದರು. ಏಕೆ, ಶ್ರೀನಿವಾಸರಾವ್ ಎಂದು ನಗುತ್ತ ನುಡಿದರು.

ಆಹುದು ಮಹಾರಾಜ, ನಾನು ನಿಶ್ಚಯವಾಗಿಯೂ ಆಶೆ ಬಿಟ್ಟಿದ್ದೆನು; ಮತ್ತು ಈ ನಾಲ್ಕು ದಿನ ಈ ಕಾರಾಗೃಹದಲ್ಲಿ ಸುಬ್ಬಣ್ಣನವರಿದ್ದರೆಂದೇ ಕಳೆದೆವು. ಏಕೆ ನರಸಿಂಗರಾಯರೇ? ಶ್ರೀನಿವಾಸರಾಯನೆಂದನು.

ನಿಜವಾಗಿಯೂ. ಮಹಾರಾಜರೇ, ಸುಬ್ಬಣ್ಣನವರಂತಹ ಜೊತೆಗಾರರು ತೀರ ಅಪರೂಪ. ವೀರನ್ಮಣಿಗಳು, ಸುವಿಚಾರಿಗಳು, ದೇವರಲ್ಲಿ ಅಚಲವಾದ ಶ್ರದ್ಧೆಯುಳ್ಳವರು. ಅಂತಹರು ಜೊತೆಯಲ್ಲಿದ್ದರೆ ನರಕವೂ ಕೂಡ ಸ್ವರ್ಗವಾಗಿ ಪರಿಣಮಿಸುವದರಲ್ಲಿ ಸಂದೇಹವೇ ಇಲ್ಲ. ನರಸಿಂಗರಾಯನು ಸುಬ್ಬಣ್ಣನವರನ್ನು ಮುಕ್ತಕಂಠದಿಂದ ಹೊಗಳಿದನು.

ನರಸಿಂಗರಾಯರೇ ತಾನು ಒಳಿತಿದ್ದರೆ ಜಗತ್ತೇ ಒಳಿತು ನೀವು ಸ್ವತಃ ಒಳಿತು ಸ್ವಭಾವದವರಿರುವ ಮೂಲಕ ನಿಮಗೆ ಎಲ್ಲರೂ ಒಳಿತಾಗಿ ತೋರುವದು ಸಹಜವಿದೆ ಇರಲಿ. ಈಗ ನಾವು ಮೇಲೆ ಹೋಗುವಾ. ನಡೆಯಿರಿ. ನಮಗೆ ಇನ್ನೂ ಅನೇಕ ಕೆಲಸಗಳಿವೆ, ಸುಬ್ಬಣ್ಣನವರಂದರು.

ಸುಬ್ಬಣ್ಣನವರೇ, ನಿಮ್ಮ ಶಿಷ್ಯನೇನೂ ಸಾಮಾನ್ಯನಲ್ಲ. ನಿಮ್ಮ ಕೆಲಸ

ಗಳಲ್ಲಿ ಬಹು ಭಾಗವನ್ನು ಮಾಡಿಯೇ ಬಿಟ್ಟಿರುವನು ಮಹಾರಾಜರು ನಗು ಮುಖದಿಂದ ನುಡಿದರು

ಅಂ, ಏನೇನು ಮಾಡಿರುವನು? ಸುಬ್ಬಣ್ಣವರು ಆನಂದಿತರಾಗಿ ಪ್ರಶ್ನೆ ಮಾಡಿದರು.

ಜೂಜಾಟದ ಮುಖಂಡರು, ಇಂದುಶೇಖರ, ಕಮಲಿನಿಯರು ಬಂಧಿತ ರಾಗಿರುವರು. ಮುಂಬೈಯಿಂದ ಮುಂಜಾವಿನಲ್ಲಿ ಬರಲಿರುವ ಕೃಷ್ಣರಾಯ ನನ್ನು ಹಿಡಿಯುವ ವ್ಯವಸ್ಥೆ ಮಾಡಿರುವರು, ಎಂದು ಹನುಮಂತರಾಯನು ಹೇಳಿದನು

ಹಾಗಾದರೆ ಒಳಿತೇ ಆಯಿತು ಮುಂದಿನ ಸಿದ್ಧತೆಗೆ ತೊಡಗುವಾ ನಡೆಯಿರಿ. ಆಗಲಿ ನಡೆಯಿರಿ.

ಅಲ್ಲಿಂದ ಅವರೆಲ್ಲರೂ ಕೂಡಿ ಹೊರಟು ಮೇಲೆ ಬಂದರು. ಆ ಮೇಲೆ ಸುಬ್ಬಣ್ಣವರು ಮಹಾರಾಜರಿಗೆ ಅಲ್ಲಿನ ಹಲವು ವಿಶಿಷ್ಟ ಸ್ಥಳಗಳನ್ನು ತೋರಿ ಸಿದರು. ಜೂಜಾಟದ ಸ್ಥಳವನ್ನೂ ಅಲ್ಲಿನ ಪ್ರತಿಯೊಬ್ಬ ಆಟಗಾರನ ಸಂಪತ್ತಿ ಯನ್ನೂ ನೋಡಿ ಕುಸುಮಪುರದರಸಿಗೆ ಆಶ್ಚರ್ಯವಾಯಿತು ಅಲ್ಲಿ ನೋಡ ತಕ್ಕ ಸಂಗತಿಗಳನ್ನು ನೋಡಿ, ಮಾಟದ ಮನೆಯ ರಚನೆಯ ಪುಸ್ತಕವನ್ನು ಸಂಗಡ ತೆಗೆದುಕೊಂಡು ಮೇಲೆ ಹೊರಟು ಬಂದರು

ಹೀಗೆ ಆ ಜನರೆಲ್ಲರೂ ಸುರಕ್ಷಿತವಾಗಿ ಮರಳಿ ಮನೆಗೆ ಬಂದಾಗ್ಗೆ ರಾತ್ರಿಯ ಮೂರು ಹೊಡೆದುಹೋಗಿದ್ದಿತು ಮರುದಿನ ಏಳುವ ಸಮಯಕ್ಕೆ ಕುಸುಮಪುರದ ವೃತ್ತಪತ್ರದಲ್ಲಿ ಪ್ರಸಿದ್ಧವಾದ 'ಕುಸುಮಪುರದಲ್ಲಿ ಆಶ್ಚರ್ಯದ ಮೇಲೆ ಆಶ್ಚರ್ಯ' ಎಂದು ಕೂಗುತ್ತ ವೃತ್ತಪತ್ರ ಮಾರುವ ಬಾಲಕನು ಒಂದು ಪತ್ರವನ್ನು ಮುರಾರಿಯ ಕೈಗೆ ಕೊಟ್ಟನು. ಮುರಾರಿ ಓದತೊಡಗಿದನ .

"ಕುಸುಮಪುರದಲ್ಲಿ ಆಶ್ಚರ್ಯದ ಮೇಲೆ ಆಶ್ಚರ್ಯ!"

ಈಗ ನಾಲ್ಕು ದಿನಗಳ ಕೆಳಗೆ ಇಲ್ಲಿಯ ಮೂವರು ಪೋಲೀಸ ಅಧಿಕಾರಿ ಗಳು ಆಕಸ್ಮಾತ್ ಅದೃಶ್ಯರಾದ ಸಂಗತಿಯನ್ನು ನಾವು ಪ್ರಸಿದ್ಧಿಸಿರುವದನ್ನು ಓದುಗರು ಮರೆತಿರಲಿಕ್ಕಿಲ್ಲ. ನಿನ್ನೆ ಅಂತಹದೇ ಇನ್ನೊಂದು ಸಂಗತಿ ಸಂಭವಿ ಸಿದೆ. ಈ ಸಲದ ಸರತಿ ಕುಸುಮಪುರದ ಸುಪ್ರಸಿದ್ಧ ಸನ್ಮಾನ್ಯ ಮುಂದಾಳು ಗಳ ಮೇಲೆ ಬಂದಿದೆ. ಹೇಗಾಯಿತೆಂಬ ಬಗ್ಗೆ ಏನೂ ತಿಳಿಯದಾಗಿದೆ. ಆಕಸ್ಮಿಕವಾಗಿ ಸಂಭವಿಸಿದ ಈ ಸಂಗತಿಯಿಂದ ನಗರದ ವಾತಾವರಣವೆಲ್ಲ ಪ್ರಕ್ಷುಬ್ಧವಾಗಿ ಹೋಗಿದೆ.

ನಮ್ಮ ಸಂಸ್ಥಾನದ ಪೋಲೀಸು ಅಧಿಕಾರಿಗಳೂ, ಪತ್ತೆದಾರರೂ ಕೂಡಿ

ಈ ಪ್ರಕರ್ಣವನ್ನು ಬೇಗನೆ ಕೊನೆಗಾಣಿಸದಿದ್ದರೆ ಪರಿಸ್ಥಿತಿ ಚೆನ್ನಾಗಿ ಉಳಿಯುವಂತೆ ಕಾಣುವದಿಲ್ಲ .. .......

ಹೀಗೆ ಅಗ್ರಲೇಖವೊಂದನ್ನು ಬರೆದು ಆದರಲ್ಲಿ ಅದೃಶ್ಯರಾದ ನಾಗರಿಕರ ಹೆಸರುಗಳನ್ನೂ ಗುಣವರ್ಣನೆಯನ್ನೂ ಮಾಡಿದ್ದನು ಆ ದಿನ ಕುಸುಮಪುರವೃತ್ತವೆಲ್ಲವೂ ಆ ಸಂಗತಿಯಿಂದಲೆ ತುಂಬಿಹೋಗಿದ್ದಿತು.

' ಕುಸುಮಪುರವೃತ್ತದಲ್ಲಿ ಪ್ರಸಿದ್ಧವಾದ ಸಂಗತಿಯಿಂದ ಮುರಾರಿ ಕೊಂಚ ಗೊಂದಲದಲ್ಲ ಬಿದ್ದನು. ಅವನು ಕೂಡಲೆ ಸುಬ್ಬಣ್ಣನವರ ಬಳಿಗೆ ಹೋದನು.

ಸುಬ್ಬಣ್ಣವರೇ, ವೃತ್ತಪತ್ರವು ನಮ್ಮ ಕೆಲಸಕ್ಕೆ ವಿಘ್ನ ತರುವಂತೆ ತೋರುತ್ತದ. ಇದೆನು?

ಇಂದಿನ ಪತ್ರದಲ್ಲ ನಿನ್ನೆ ಅದೃಶ್ಯರಾದ ಜನರ ಹೆಸರುಗಳು ಪ್ರಸಿದ್ಧಪಡಿಸಲ್ಪಟ್ಟಿರುತ್ತವೆ. ಹೌದು.

ಆದರಲ್ಲಿ ಇಂದುಶೇಖರನ ಹೆಸರೂ ಬಂದಿದೆ ಇದರಿಂದ ಇಂದು ಬರಲಿದ್ದ ಕೃಷ್ಣರಾಯನು ಜಾಗ್ರತೆ ವಹಿಸಲಿಕ್ಕಿಲ್ಲವೆ?

ಹಾಗಾದರೆ ಏನು ಮಾಡಬೇಕೆನ್ನುವೆ?

ಅದಕ್ಕೇನೆ ನಿಮ್ಮ ಬಳಿಗೆ ಬಂದಿರುತ್ತೇನೆ

ನಿನ್ನ ವಿಚಾರವೇನಿದೆ?

ಈಗಲೆ ಬ್ರಿಟಿಷ್ ಹದ್ದಿನಲ್ಲಿನ ಅಧಿಕಾರಿಗಳಿಗೆ ಅವನನ್ನು ಹಿಡಿಯಲಿಕ್ಕೆ ಇಲ್ಲಿಂದ ಅಪ್ಪಣೆ ತೆಗೆದುಕೊಂಡು ಕಳಿಸಬೇಕೆಂದು ನನ್ನ ವಿಚಾರವಿದೆ '

ಮುರಾರಿ, ಅದು ಬಹಳ ಗೊಂದಲದ ಕೆಲಸ ಏಕೆ?

ಅಲ್ಲಿಯ ಅಧಿಕಾರಿಗಳ ಪರಿಚಯ ನಿನಗಿಲ್ಲವೆ? ನಿ ನು ಇಲ್ಲಿಂದ ಒಂದು ಅಪ್ಪಣೆ ತೆಗೆದುಕೊಂಡು ಹೋದರೆ ಅವರು ಸುಮ್ಮನೆ ಅದರಂತೆ ಮಾಡುವರೆಂದು ತಿಳಿದಿರುವೆಯಾ? ಛೆ, ಎಂದಿಗೂ ಇಲ್ಲ ಹೀಗೇಕೆ? ಹಾಗೇಕೆ? ಮುಂತಾಗಿ ತಮ್ಮ ಅಡ್ಡ ಪ್ರಶ್ನೆ ಕೇಳಿ ತಮ್ಮ ಮೇಲ್ಮೆಯನ್ನೇ ತೋರಿಸಲು ಯತ್ನಿಸುತ್ತಾರೆ, ಮತ್ತು ಸರಳವಾಗಿ ಕೆಲಸವನ್ನಾದರೂ ಮಾಡುತ್ತಾರೆನ್ನಬೇಕೆ? ಅದೂ ಇಲ್ಲ ಅವನಿಂದ ಕೈಮುರಿ ಮಾಡಿಕೊಂಡು ಅವನನ್ನು ಫರಾರಿ ಮಾಡಿಬಿಡುವುದೂ ಉಂಟು ಆದುದರಿಂದ ಈ ಕೆಲಸಕ್ಕೆ ತೊಂದರೆಯೂ ಬಹಳ;. ಮತ್ತು ವೇಳೆಯೂ ಬಹಳಬೇಕು, ಇದಲ್ಲದೆ ನೀನು ಇಷ್ಟು ತೊಂದರೆ ತೆಗೆದುಕೊಳ್ಳುವ ಕಾರಣವೂ ಇಲ್ಲ. ಏಕೆ?

ಮುರಾರಿ, ಕೃಷ್ಣರಾಯನೆಂದರೆ ಈ ಎಲ್ಲ ವ್ಯೂಹಕ್ಕೂ ಸೂತ್ರಧಾರ.

ಆತನೇನು ಮೂಢನಲ್ಲ. ಒಳ್ಳೇ ಧೂರ್ತನಿರುವನು. ತನ್ನ ಹಸ್ತಕರು ಅದೃಶ್ಯರಾಗಲು, ಅವರು ಎಲ್ಲಿ ಹೋಗಿರಬೇಕು? ಏನು? ಅನ್ನುವ ಎಲ್ಲ ಸಂಗತಿಯನ್ನು ಅವನು ವಿಚಾರಿಸಲೇ ಬೇಕಾಗುವದು. ಇದಲ್ಲದೆ ಈ ವ್ಯೂಹ ಸಿದ್ಧಿಯ ಮೇಲೆಯೇ ಅವನ ಭವಿಷ್ಯಜ್ಜೀವನದ ಅವಲಂಬನೆಯಿದೆ ಅದು ದರಿಂದ ಅವನು ಎಲ್ಲಾದರೂ ತಪ್ಪಿಸಿ ಹೋಗಿ ಕುಳಿತರಾಗದು. ಆದರೆ ಸ್ವತಃ ಇಲ್ಲಿ ಬಂದು ತನ್ನ ಮುಂದಿನ ಕಾರ್ಯದ ಸಿದ್ಧತೆ ಮಾಡಬೇಕಾಗುವುದು.

ಅಂದರೆ, ಅವನು ಇಲ್ಲಿ ಬಂದೇ ಬರುವನಲ್ಲವೆ?

ಬರುವುದೇನೋ ನಿಶ್ಚಯವೆ? ಆದರೆ ಹೇಗೆ? ಯಾವಾಗ್ಗೆ ಅನ್ನುವ ಬಗ್ಗೆ ಏನೂ ಹೇಳಲು ಬರಲಿಕ್ಕಿಲ್ಲ ಒಂದು ವೇಳೆ ಗೊತ್ತುಮಾಡಿದ ವೇಳೆಗೆನೇ ಬರಬಹುದು; ಅಥವಾ ವೇಳೆ ತಪ್ಪಿಸಿಯೂ ಬರಬಹುದು; ಅದಾವುದೂ ತಿಳಿಯದು

ವೇಷ ಬದಲಿಸಿಯೂ ಬರಬಹುದೆ?

ಆ, ಹಾಗೋ ಅದಾದರೂ ಶಕ್ಯವಿದೆ, ಮತ್ತು ಕೊಂಚ ವಿಚಾರಿಸಿದರೆ ಅದೇ ಹೆಚ್ಚು ಶಕ್ಯವಾಗಿ ತೋರುತ್ತದೆ

ಹಾಗಾದರೆ ಕೊಂಚ ತೊಂದರೆಯೇ ಸರಿ.

ಅಹುದು ಅದೇನೋ ಸರಿಯೆ, ಆದರೆ ಯಾವ ಕೆಲಸಗಳೂ ಸುಲಭವಾಗಿ ಸಾಧಿಸುವದಿಲ್ಲ ಪ್ರಯತ್ನದಿಂದಲೇ ಯಶವು. ನಾಳೆ ಕೃಷ್ಣರಾಯ ಬರುವದಂತೂ ನಿಶ್ಚಯವೆ. ಬಹುಶರ ಈ ವೃತ್ತಪತ್ರಕಾರನ ಸಹಾಯದಿಂದ ಅವನಿಗೆ ಇಂದುಶೇಖರ ಕಮಲಿನಿಯರ ಅದೃಶ್ಯವಾದ ಸಂಗತಿ ತಿಳಿಯುತ್ತಲೇ ಆತ ಇಲ್ಲಿಗೆ ಆದಷ್ಟು ಬೇಗ ತಲುಪುತ್ತಾನೆ. ಅವನನ್ನು ಗೊತ್ತುಹಿಡಿಯುವುದು ನಿನ್ನ ಕೆಲಸ

ಆಗಲಿ ಯತ್ನವನ್ನೇನೋ ಮಾಡುತ್ತೇನೆ.

ಕೃಷ್ಣರಾಯನು ಬಹಳ ಘಾತುಕ ಮನುಷ್ಯನಿರುತ್ತಾನೆ. ಇಷ್ಟೆಲ್ಲ ಅನರ್ಥಕ್ಕೆ ಮೂಲರು ನಾವೇ ಎಂದಾದರೂ ಅವನು ಅರಿತಿರುವನು. ಬಹಳ ಜಾಗ್ರತೆಯಿಂದ ವರ್ತಿಸತಕ್ಕದ್ದು ಆದೂ ನಿಜವೆ; ಆಗಲಿ.

ಹೀಗೆ ನಿರ್ಧರಿಸಿ ಮುರಾರಿ ವೇಷ ಬದಲಿಸಿ ಬೈರಾಗಿಯಾದನು. ಕೃಷ್ಣರಾಯನು ತನ್ನ ಕಾರ್ಯಕ್ರಮದಂತೆ ಮುಂಜಾವಿನ ೮|| ಘಂಟೆಗೆ ಬರಬೇಕಾಗಿದ್ದಿತು ಆದರೂ ಮುರಾರಿ ಅಷ್ಟು ಸಮಯ ದಾರೀ ಕಾಯುವ ತೊಂದರೆಗೆ ಹೋಗದೆ ಆಗಲೇ ಹೊರಟನು ಕೃಷ್ಣರಾಯನು ಯಾವದೊಂದು ವೇಷದಿಂದ

ಬರುವವನಿದ್ದನು. ರೈಲಿನಿಂದ ಬರುವ ಸಂಭವವಿದ್ದಿತು, ಆದರೆ ಅವನಿಗೆ ಅದು ಶಕ್ಯವಾಗಿ ತೋರಲಿಲ್ಲ ಏಕೆಂದರೆ, ರೈಲು ಬರುವ ಸಮಯ ನಿಯ ಮಿತವಿದ್ದ ಆ ವೇಳೆಗೆ ತನ್ನನ್ನಾರಾದರೂ ಪೋಲೀಸರು ಶೋಧಿಸುತ್ತಲಿರ ಬಹುದೆಂದು ಸಂಶಯ ಕೃಷ್ಣರಾಯನಿಗೆ ಬರುವದು ಸ್ವಾಭಾವಿಕ ಮೋಟರಿ ನಲ್ಲಿ ಇಲ್ಲವೇ ನಡೆದುಕೊಂಡೇ ಬರಬಹುದೆಂದು ಅವನ ತರ್ಕವಿದ್ದಿತು. ಆದುದರಿಂದ ಅವನು ರೈಲು ನಿಲ್ಲುಮನೆಯತ್ತ ಹೋಗದೆ, ಮೋಟರು ಬರುವ ಸ್ಥಳಕ್ಕೇನೇ ಹೋದನು.

ಅಲ್ಲಿ ಹೋಗಿ ಕೊಂಚ ಅವಧಿ ಕುಳಿತು ಪ್ರತಿಯೊಂದು ವ್ಯಕ್ತಿಯ ನಿರೀ ಕ್ಷಣೆ ಮಾಡಹತ್ತಿದನು ಒಂದು-ಒಂದೂವರೆ ತಾಸು ಕುಳಿತರೂ ಯಾರೂ ಬರಲಿಲ್ಲ. ಅವನಿಗೆ ಚಡಪಡಿಕೆಯಾಗಹತ್ತಿತು ಮಧ್ಯಾಹ್ನದವರೆಗೂ ಕುಳಿ ತನು ಕೃಷ್ಣರಾಯ ಬರುವ ಲಕ್ಷಣವೇ ತೋರಲಿಲ್ಲ ಅವನು ವಿಷಾದದಿಂದ ಎದ್ದು ಹೊರಟನು ಸುಮಾರು ಒಂದು-ಒಂದೂವರೆ ಮೈಲು ದಾರಿ ಕ್ರಮಿ ಸಿರುವಲ್ಲಿ ಅವನಿಗೆ ಜನರ ಗುಂಪು ಕಾಣಿಸಿತು ಅಷ್ಟು ಜನರು ಅಲ್ಲಿ ಏಕೆ ನೆರೆದಿದ್ದರೆಂಬ ಬಗ್ಗೆ ಅವನಲ್ಲಿ ಸ್ವಾಭಾವಿಕವಾಗಿ ಕುತೂಹಲವುಂಟಾಯಿತು ಅಲ್ಲಿ ಹೋಗಿ ಇಣುಕಲು ಒಬ್ಬ ಹಿಂದುವಿಗೂ ಮುಸಲ್ಮಾನನಿಗೂ ಜಗಳ ಹತ್ತಿದ್ದಿತು ಆ ಕಲಹವು ಅವರಿಬ್ಬರ ಮಟ್ಟಿಗೆ ನಿಲ್ಲದೇ ಸಾರ್ವಜನಿಕ ವಾಗುವ ಸಂಭವ ತೋರಹತ್ತಿತು ನರೆದ ಜನರು ಇಬ್ಬರನ್ನೂ ಶಾಂತಗೊಳಿ ಸಲು ಅದೆಷ್ಟೋ ಯತ್ನಿಸಿದರು, ಆದರೆ ಸಾಧ್ಯವಾಗುವ ಲಕ್ಷಣ ತೋರಲಿಲ್ಲ. ಕೊನೆಗೆ ಪೋಲೀಸು ಅಧಿಕಾರಿಗಳು ಬಂದು ಇಬ್ಬರನ್ನೂ ನಗರ ಶಾಂತತಾ ಭಂಗ ಮಾಡಿದ ಆರೋಪದ ಮೂಲಕ ಬಂಧಿಸಿ ಪೋಲೀಸು ಕಚೇರಿಗೆ ಕರೆ ದೊಯ್ದರು.

ಮುರಾರಿಗೆ ಇನ್ನೂ ಖೇದವೆನಿಸಿತು ಭಾರತಾಂಬೆಯ ಉದರದಲ್ಲಿ ಜನಿಸಿ, ಭಾರತ ಮಾತೆಯಿಂದಲೇ ಪೋಷಿತರಾದ ಅವರೀರ್ವ ಭಾರತೀಯರು ಮಾತೆಯ ಮೇಲ್ಮೆಗಾಗಿ ತನು, ಮನ, ಧನಗಳನ್ನರ್ಪಿಸಲು ಸಖ್ಯ ಭಾವ ದಿಂದ, ಬಂಧುಪ್ರೇಮದಿಂದ ಕೈ ಮೇಲೆ ಕೈ ಹಾಕಿಕೊಂಡು ಯತ್ನಿಸುವದರ ಬದಲು, ತಮ್ಮ ತಮ್ಮಲ್ಲಿ ಕಲಹವಾಡುತ್ತಲಿದ್ದುದನ್ನು ನೋಡಿ ಅವನಿಗೆ ಬಹಳ ಖೇದವೆನಿಸಿತು. ಇಬ್ಬರಲ್ಲಿಯ ಈ ದುರ್ಭಾವನೆ ನಾಶವಾಗಿ ಬಂಧು ಪ್ರೇಮ ನೆಲೆಗೊಳ್ಳುವವರೆಗೆ ಭಾರತಾಂಬೆಯ ಉದ್ಧಾರವಾಗಲಾರದೆಂದು ಅವನಿಗನಿಸಹತ್ತಿತು. ಯಾವದೊಂದು ಕೀಳು ಕಾರಣದ ಸಲುವಾಗಿ ಭಾರತದ ಗೌರವವನ್ನೇ ಹಾಳುಮಾಡುತ್ತಲಿರುವ ವಿಚಾರ ಬಂದು, ಅವನ ಅಂತಃಕರಣ

ದಲ್ಲಿ ವ್ಯರ್ಥೆಯಾಯಿತು. ಅವನು ಹೋದ ಕೆಲಸವೂ ಆಗಲಿಲ್ಲ. ಬರುವಾಗ್ಗೆ ದುಷ್ಟ ನೋಟ ಒಂದನ್ನು ನೋಡಿದನು ಹೀಗೆ ಅವನಿಗೆ ಬಹಳ ಕ್ಲೇಶವೆನಿಸಿ ವ್ಯಥಿತಾಂತಃಕರುಣದಿಂದ ತಮ್ಮ ಮನೆ ಹೊಕ್ಕನು, ಆದರೆ ಮನೆಯಲ್ಲಿ ಸುಬ್ಬಣ್ಣವರಿರಲಿಲ್ಲ ಅವರು ಎಲ್ಲಿ ಹೋಗಿರಬಹುದೆಂಬ ಬಗ್ಗೆ ಅವನು ಯೋಚಿಸಹತ್ತಿದನು. ಕೊನೆಗೆ ಅವನಿಗೆ ಗೂಢವು ಹೊಳೆದು ಬರಲು ಅವನು ಹರ್ಷಿತನಾದನು ಆ ಮೇಲೆ ತನ್ನ ವೇಷವನ್ನು ಕಳಚಿ ಸಾದಾ ಉಡುಪಿನಲ್ಲಿ ಹೊರಬಿದ್ದನು ಇಲ್ಲಿಂದ ಹೊರಟವನು ಪೋಲೀಸು ಕಚೇರಿಗೆ ಹೋದನು. ಅಲ್ಲಿ ಫೌಜದಾರ ಹನುಮಂತರಾಯನು ಅಂದು ಕಲಹಕ್ಕೆ ಪ್ರವೃತ್ತರಾದ ಆ ಹಿಂದೂ-ಮುಸಲ್ಮಾನರೀರ್ವರ ವಿಚಾರಣೆಗೆ ತೊಡಗಿದ್ದನು.

ಮುರಾರಿ ಕಚೇರಿ ಪ್ರವೇಶಿಸುತ್ತಲೆ ಹನುಮಂತರಾಯನು ಅವನನ್ನು ಆದರದಿಂದ ಸ್ವಾಗತಿಸಿ ಅವನಿಗೆ ಆಸನ ಕೊಟ್ಟನು. ಮುರಾರಿ ಆಸನ ದಲ್ಲಿ ಕೂರದೆ, ಹನುಮಂತರಾಯನ ಕಿವಿಯಲ್ಲಿ ಏನನ್ನೋ ಹೇಳಿದನು. ಅದನ್ನು ಕೇಳಿ ಹನುಮಂತರಾಯನಿಗೆ ಆಶ್ಚರ್ಯವೇ ಆಯಿತು. ಅವನು ಆಶ್ಚರ್ಯದ ಮುದ್ರೆಯಿಂದ-'ಹೀಗೋ?' ಎಂದು ಪ್ರಶ್ನೆ ಮಾಡಿದನು

ಮುರಾರಿ. ಅಹುದು ಹೀಗೆಯೇ ಇದೆ, ಇದರಲ್ಲಿ ಸಂಶಯವೇನೂ ಇಲ್ಲ. ಮೊದಲು ನಾನು ಹೇಳಿದಷ್ಟು ಕೆಲಸ ಮಾಡಿರಿ. ಆ ಮೇಲೆ ಎಲ್ಲವೂ ಸ್ಪಷ್ಟವಾಗುವದು, ಎಂದನು

ಒಳ್ಳೇದು ಎಂದು ಹೇಳಿ, ಫೌಜದಾರನು ತನ್ನ ಚತುರರಾದ ನಾಲ್ಕು ಜನ ಶಿಪಾಯರನ್ನು ಕರೆದು ಅವರ ಕಿವಿಯಲ್ಲಿ ಏನನ್ನೋ ಹೇಳಿ, ಈಗ ಈ ವಿಚಾರಣೆ ಬೇಡ. ನನಗೆ ಅಗತ್ಯದ ಕೆಲಸವಿದೆ. ಆದುದರಿಂದ ಮಧ್ಯಾಹ್ನದಲ್ಲಿ ಕರೆದು ತನ್ನಿರಿ ಇಬ್ಬರನ್ನೂ ಬೇರೆ ಬೇರೆ ಕೋಣೆಯಲ್ಲಿ ರಿಸಿರಿ, ಎಂದು ಅಪ್ಪಣೆ ಮಾಡಲು ಆ ಸಿಪಾಯಿಗಳು ಮಹಮ್ಮದೀಯನನ್ನು ಹಿಡಿದು ಕರೆದುಕೊಂಡು ಹೋದರು ಹಿಂದೀಯನನ್ನು ಹಿಡಿಯಲು ಮತ್ತೆ ಬೇರೆ ಪೋಲೀಸರು ಮುಂದೆ ಬರಲು, ಹನುಮಂತರಾಯನು ಅವರನ್ನು ದೂರ ಸರಿಸಿ ಕೆಳಗಿಳಿದು ಬಂದು:—ಸುಬ್ಬಣ್ಣವರೇ, ನೀವು ಅದ್ವಿತೀಯ ತುಬ್ಬುಗಾರರು ನಿಜವಾಗಿಯೂ ನಿಮ್ಮ ಚಾತುರ್ಯವು ವರ್ಣನೆಗೆ ಮೀರಿದೆ, ಎಂದು ನುಡಿಯಲು ಆ ಹಿಂದೀಯನು ನಗುತ್ತ:-ಹನುಮಂತರಾಯರೇ, ಯಾವದೊಂದು ಕೆಲಸದಲ್ಲಿ ರೂಢಿ ಹೆಚ್ಚಾದಂತೆ ಆ ಕಾರ್ಯದಲ್ಲಿ ಅವನು ನೈಪುಣ್ಯ ಪಡೆಯುತ್ತಾನೆ ಮುರಾರಿಯನ್ನುಳಿದು ಇನ್ನಾರೂ ಗುರತಿಸ ಲಾರರೆಂದು ನನ್ನ ತರ್ಕವಿದ್ದಿತು ಕೊನೆಗೆ ಅದೇ ನಿಜವಾಯಿತು. ಎಂದು

ನುಡಿಮ್ತು, ತಮ್ಮ ಕಿರುಮೀಸೆಗಳನ್ನು ಕಿತ್ತಿ ಒಗೆದರು

ಸುಬ್ಬಣ್ಣವರೇ, ನೀವು ಕೃಷ್ಣರಾಯನನ್ನು ಎಲ್ಲಿ ಹಿಡಿದಿರಿ? ಎಂದು ಮುರಾರಿ ಪ್ರಶ್ನೆ ಮಾಡಿದನು.

ಮುರಾರಿ, ಇನ್ನೂ ನಿನಗೆ ಹೆಚ್ಚು ಅನುಭವಬೇಕು. ಕೃಷ್ಣರಾಯನು ಬಹಳ ಚತುರನೆಂಬ ಬಗ್ಗೆ ನನಗೆ ವಿಶ್ವಾಸವಿದ್ದಿತು. ಅವನು ಸುಲಭವಾಗಿ ನಿನ್ನನ್ನು ಮೋಸಗೊಳಿಸಬಹುದೆಂಬ ವಿಚಾರ ಬಂದು ನಾನು ಹೊರಟೆನು. ನೀನು ಕುಳಿತ ಸ್ಥಳದ ಬದಿಯಿಂದಲೇ ಹಾಯ್ದೆನು. ನಿನ್ನನ್ನು ನೋಡಿದೆನು. ಹಾಗೆಯೇ ಮುಂದೆ ಹೋಗಲು ಒಬ್ಬ ಮಹಮ್ಮದೀಯನು ಬರುವುದನ್ನು ನೋಡಿದೆನು ಅವನನ್ನು ಕೊಂಚವೇ ನಿರೀಕ್ಷಿಸಲು, ಅವನು ನಿಜವಾದ ಮಹಮ್ಮದೀಯನಲ್ಲವೆಂದು ತಿಳಿದು ಬರುವಂತಿದ್ದಿತು. ಪರೀಕ್ಷಿಸಬೇಕೆಂದು ಒಂದು ಯುಕ್ತಿ ಮಾಡಿದೆನು ನಿಜಾಂಶವು ತಿಳಿದು ಬರಲು ಅವನನ್ನು ಕೆಣಕಿ ನು. ನಿಜವಾದ ಮುಸಲ್ಮಾನನಲ್ಲದಿದ್ದರೂ ತನ್ನ ನಟನೆಗನುಸಾರವಾಗಿ ಅವನು ಉಪಾಯಗಾಣದೆ, ಕಲಹಕ್ಕೆ ನಿಂತನು. ಅವನು ಕಲಹಕ್ಕೆ ನಿಲ್ಲುವ ಮನಸ್ಸಿನವನಾಗಿರಲಿಲ್ಲ. ಆದಷ್ಟು ಬೇಗ ಅಲ್ಲಿಂದ ಪಾರಾಗಿ ಹೋಗಬೇಕೆಂದು ಯುಕ್ತಿಸುತ್ತಲಿದ್ದನು; ಆದರ ನಾನು ಬಿಡದೆ ಕದನಕ್ಕೆಳೆಯಹತ್ತಿದೆನು ಅನಿವಾರ್ಯವಾಗಿ ಕದನಕ್ಕೆ ಪ್ರವೃತ್ತನಾಗಬೇಕಾಯಿತು. ಒಟ್ಟಿನಲ್ಲಿ ಇಬ್ಬರೂ ಕಲಹಕ್ಕೆ ನಿಂತೆವು. ಪರಿಣಾಮವನ್ನು ಮೊದಲೇ ತಿಳಿದಿದ್ದೆವು. ಸುಬ್ಬಣ್ಣವರೆಂದರು.

ಸುಬ್ಬಣ್ಣವರೇ, ನೀವು ಇಷ್ಟೇಕೆ ತೊಂದರೆ ತೆಗೆದುಕೊಂಡಿರಿ? ನಮಗಾರಿಗಾದರೂ ಸೂಚನೆ ಕೊಟ್ಟಿದ್ದರೆ ನಿರಾಯಾಸವಾಗಿ ಕಾರ್ಯವಾಗುತ್ತಲಿದ್ದಿತು, ಹನುಮಂತರಾಯನಂದನು

ಓಹೋ! ಹನುಮಂತರಾಯರೇ, ನಿಮಗೆ ಕೃಷ್ಣರಾಯನ ಪರಿಚಯ ಚನ್ನಾಗಿಲ್ಲ. ಅವನು ಬಹಳ ಘಾತಕ ಮನುಷ್ಯನಿರುವನು. ಅವನಿಗೆ ತಿಳಿದು ಹಿಡಿಯ ಹೋಗಿದ್ದರೆ ನಾಲ್ಕಾರು ಕೊಲೆಗಳಾದರೂ ಆಗದಿರುತ್ತಿರಲಿಲ್ಲ, ಸುಬ್ಬಣ್ಣವರಂದರು.

ಅಂ, ಅಷ್ಟು ದುಷ್ಟನಿರುವನೇ? ಹನುಮಂತರಾಯ ಕೇಳಿದನು

ಇಲ್ಲ ನೋಡಿ, ಅವನ ಈ ಘಾತುಕ ಆಯುಧಗಳನ್ನು! ಎನ್ನುತ್ತ ಜೇಬಿನಿಂದ ಕೆಲವು ಸಾಮಾನುಗಳನ್ನು ತೆಗೆದು ಮುಂದಿರಿಸಿದರು ಒಂದು ಕಾಗದದ ಚೀಲವನ್ನು ತೆಗೆದು ತೋರಿಸಿ ಇದು ನೋಡಿ, ಇವು ವಿಷದ ಸೂಜಿಗಳು. ಒಂದನು ಒಂದೇಸಲ ಚುಚಿ ದರೆಮುಗಿದೇಹೋಯಿತು. ಯಾವ

ಉಪಾಯಗಳೂ ಹಣಿಯುವದಿಲ್ಲ, ಎನ್ನುತ್ತ ಒಂದು ಕಾಜಿನ ಸೀಶೆಯನ್ನು ತೋರಿಸಿ ಇದು ಭಯಂಕರ ದ್ರಾವಕ ಇದರ ಒಂದು ಹನಿ ಬಿದ್ದುದಾದರೆ ಮರಣವೇ ನಿಶ್ಚಯ ಎಂದು ವಿವರಿಸಿದರು.

ಹನುಮಂತರಾಯನಿಗೆ ಆ ವಿವರಣೆಯನ್ನು ಕೇಳಿ ಬಹಳ ಆಶ್ಚರ್ಯವಾಯಿತು. ಹಾಗಾದರೆ ಅವನು ಆಗ ಇವುಗಳ ಉಪಯೋಗವನ್ನೇಕೆ ಮಾಡಲಿಲ್ಲ? ಎಂದು ಕೇಳಿದನು.

ಆಗ ಅವನಿಗೆ ಅವಕಾಶವೇ ಸಿಕ್ಕಲಿಲ್ಲ. ಅಂದರೆ?

ಅಂದರೇನು? ಅವನು ಮಹಮ್ಮದೀಯನ ವೇಷ ತಳೆದಿದ್ದನು. ಮಹಮ್ಮದೀಯನಂತೆಯೂ ನಟಿಸಬೇಕಿದ್ದಿತು. ನಾನಾದರೂ ವೇಷಾಂತರ ಮಾಡಿದ್ದರಿಂದ ಅವನಿಗೆ ತನ್ನನ್ನು ಗುರತಿಸುವದಾಗಲಿಲ್ಲ; ಮತ್ತು ಕಲಹವಾದರೂ ಹಿಂದು-ಮುಸಲ್ಮಾನ ಈ ಸಂಬಂಧದಿಂದಿದ್ದಿತೇ ವಿನಃ ಇನ್ನಾವ ಕಾರಣದಿಂದಲೂ ಜರುಗಲಿಲ್ಲ. ಆದುದರಿಂದ ಕೊಂಚ ಸಿಟ್ಟುಮಾಡಿ ಬಿಡುಗಡೆ ಮಾಡುತ್ತಾರೆಂದು ಅವನು ಊಹಿಸಿದ್ದನು ಅಂತೆಯೇ ಆತನು ಇವುಗಳ ಉಪಯೋಗ ಮಾಡಲಿಲ್ಲ. ಇವುಗಳನ್ನು ನೀವು ಹೇಗೆ ದೊರಕಿಸಿದಿರಿ?

ಅದು ಕೈಚಮತು. ಅದೊಂದು ಕಲೆಯೇ ಇದೆ

ಆಂ, ಸುಬ್ಬಣ್ಣವರೇ, ನಿಮ್ಮಲ್ಲಿ ಎಲ್ಲ ಕಲೆಗಳೂ ಕಲೆತು ಹೋಗಿವೆಯಲ್ಲ! ಒಳ್ಳೇದು. ಈಗ ಹೋಗುವಾ ನಡೆಯಿರಿ.

ಇನ್ನೇನು ಬಹುತರ ಕೆಲಸವೆಲ್ಲವೂ ಕೊನೆಗಂಡಂತೆಯೆ ಆಯಿತು, ಆದರೆ ಸುಬ್ಬಣ್ಣವರೇ, ನೀವು ಕೃಷ್ಣರಾಯನು ಸಾವುಕಾರ ಶ್ರೀನಿವಾಸರಾಯರ ಕೊಲೆಮಾಡಿರುವನೆನ್ನುವಿರಾ? ಅಹುದ .

ಆದರೆ ನೀವು ಸಿದ್ಧ ಮಾಡಲು ಶಕ್ತರಿರುವಿರಾ?

ಅದು ನ್ಯಾಯಾಸ್ಥಾನದಲ್ಲಿ ತಿಳಿದು ಬರುವದು.

ಆದರೂ ಬಹಳ ಪ್ರಯಾಸದ ಸಂಗತಿಯಿದೆಯಲ್ಲವೆ? ಏನು?

ಕೃಷ್ಣರಾಯನು ಕೊಲೆಗಾರನೆಂದು ಸಿದ್ಧ ಮಾಡುವುದು? · ಏಕೆ?

ಸಾವುಕಾರ ಶ್ರೀನಿವಾಸರಾಯರು ಕೊಲ್ಲಲ್ಪಟ್ಟ ಕಿರುಗತ್ತಿಯ ಮೇಲೆ ಮಧುಕರನು ಕೈ ಹೆಬ್ಬೆರಳಿನ ಗುರತು ಇದೆಯಲ್ಲವೆ?

ಅಹುದು. ಇದೆ, ಮತ್ತು ಅದೇ ಪೋಲೀಸರಿಗೆ ಸಹಾಯ ಮಾಡಿದೆ.

ಆ ಬಗ್ಗೆ ನೀವೇನು ಮಾಡಲಿರುವಿರಿ? ನನಗಂತೂ ನೀವು ಮಧುಕರನನ್ನುಳಿಸುವುದು ಅಶಕ್ಯವೆಂದೇ ತೋರುತ್ತದೆ. ಒಂದುವೇಳೆ ಅವನು ನಿರಪರಾಧಿಯೇ ಇರಬಹುದು, ಆದರೆ ಸಿದ್ಧ ಮಾಡುವುದು ಮಾತ್ರ ಬಹಳ ಕಠಿಣ.

ಆಗಲಿ. ಮಧುಕರನ ದೈವವು ಬಲವತ್ತರವಾಗಿದ್ದಲ್ಲಿ ಅದೂ ಸುಳ್ಳಾಗು ವುದು. ಅದೇನೋ ಸಂಶಯಾಸ್ಪದವೇ?

ಹೀಗೆ ಚರ್ಚಿಸಿ ಸುಬ್ಬಣ್ಣನವರು ಮುರಾರಿಯೊಡನೆ ಎದ್ದರು. ಅವರು ನೇರವಾಗಿ ಮನೆಗೆ ಹೋಗಿ ಊಟ-ಉಡಿಗೆಗಳನ್ನು ತೀರಿಸಿ ಮಲಗಿದರು. ಮರುದಿನವೇ ಸೆಶನ್ ಕಮೀಟಿ ಕೂಡಲಿದ್ದುದರಿಂದ ಮಧುಕರನನ್ನು ಕಂಡು ಬರಬೇಕೆಂದು ಹೊರಟರು, ಆದರೆ ಅವರ ಮನಸ್ಸಿನಲ್ಲಿ ಬೇರೊಂದು ವಿಚಾರ ಬಂದಿತು ಮಧುಕರನು ಒಂದುಸಲ ಪ್ರೇಮದ ಪಾಶದಲ್ಲಿ ಸಿಕ್ಕು ಮೋಸ ಹೋದುದರಿಂದ, ಅವನಿಗೆ ಬಹಳ ದುಃಖವಾಗಿದ್ದಿತು. ಅವನ ಭವಿಷ್ಯಜ್ಜೀವನ ವೆಲ್ಲವೂ ನಿರಾಶಾಮಯವೇ ಆಗಿದ್ದಿತು. ಕತ್ತಲೆಯಲ್ಲಿ ಕಾಲಾಡಿಸುತ್ತ ಹೊರ ಟಂತೆ ಅವನ ಸ್ಥಿತಿಯಾಗಿದ್ದಿತು ಸುಬ್ಬಣ್ಣನವರು ಅವನಿಗೆ ಎಷ್ಟೋ ವಿಧವಾಗಿ ಉಪದೇಶ ಮಾಡಿದ್ದರು, ಆದರೂ ಆ ತರುಣನು ಕೊಂಚವಾದರೂ ಉತ್ತೇ ಜಿತನಾಗಲಿಲ್ಲ. ಆದುದರಿಂದ ನಿರಾಶೆಯಿಂದ ಗಾಸಿಯಾದ ಅವನ ಮನಸ್ಸನ್ನು ಉತ್ತೇಜನಗೊಳಿಸಬೇಕೆಂದು ಅವರೊಂದು ಯುಕ್ತಿ ತೆಗೆದರು. ಸುಬ್ಬಣ್ಣನವರು ಪೋಲೀಸ ಕಮೀಶನರ ಶ್ರೀನಿವಾಸರಾಯರ ಮನೆಗೆ ಆಗಾಗ್ಗೆ ಹೋಗುತ್ತ ಲಿದ್ದರು ಶ್ರೀನಿವಾಸರಾಯರಿಗೆ ಸರಳೆಯೆಂಬ ೧೬-೧೭ ವರ್ಷದ ಒಬ್ಬಸುಂದರ ಕನ್ನಿಕೆಯಿದ್ದಳು ಆಕೆ ಸುಬ್ಬಣ್ಣನವರಿಗೆ ಅಜ್ಜಾ ಎಂದು ಸಂಬೋಧಿಸುವಳು ಆಕೆಯಲ್ಲಿ ಸುಬ್ಬಣ್ಣನವರಿಗೂ ಪುತ್ರೀಪ್ರೇಮವಿದ್ದಿತು. ಕನ್ನಡದ ಶಿಕ್ಷಣವೂ ಆಗಿದ್ದಿತು. ಅವರು ಸರಳೆಯನ್ನು ಮಧುಕರನಿಗೆ ಮದುವೆಮಾಡಿಬಿಟ್ಟರೆ ಒಳಿತಾಗುವದೆಂದು ತಿಳಿದು, ಅವರು ನೇರವಾಗಿ ಜೇಲುಮನೆಗೆ ಹೋಗದೆ ಶ್ರೀನಿವಾಸರಾಯರ ಮನೆ ಹೊಕ್ಕರು. ಶ್ರೀನಿವಾಸರಾಯರು ಮನೆಯಲ್ಲಿಯೇ ಇದ್ದರು. ಅವರಲ್ಲಿ ಮಧುಕರನ ಬಿಡುಗಡೆಯ ಬಗ್ಗೆ ಚರ್ಚೆ ನಡೆಯಿತು. ಸುಬ್ಬಣ್ಣನವರು ಆ ಬಗ್ಗೆ ತಮ್ಮ ಅಭಿಪ್ರಾಯವಿತ್ತರು. ಶ್ರೀನಿವಾಸರಾಯರು ಮಧುಕರನ ಕೈ ಹೆಬ್ಬೆರಳಿನ ಗುರುತಿನ ಪ್ರಶ್ನೆಯನ್ನೇ ಎತ್ತಿದರು. ಆಗ್ಗೆ ಸುಬ್ಬಣ್ಣನವರು ಶ್ರೀನಿವಾಸರಾಯರ ಕಿವಿಯಲ್ಲಿ ಏನನ್ನೋ ಹೇಳಲು, ಶ್ರೀನಿ ವಾಸರಾಯನು ಆಶ್ಚರ್ಯಮೂಢನೇ ಆಗಿ ಹೋದನು ಅವನು ವಿಸ್ಮಯ ದಿಂದ:- ಸಾಧ್ಯವಾದರೂ ಇದೆಯೆ? ಎಂದು ಕೇಳಿದನು.

ನಾನು ಸಾಧ್ಯಮಾಡಿ ತೋರಿಸಲಿರುವೆನು, ಸುಬ್ಬಣ್ಣನವರೆಂದರು

ಸುಬ್ಬಣ್ಣನವರೇ, ನೀವು ಇದುವರೆಗೆ ಹತ್ತೆಂಟುಸಲವಾದರೂ ನಮ್ಮ ಸಂಸ್ಥಾನಕ್ಕೆ ಬಂದಿರಬಹುದು, ಆದರೆ ಈ ಸಲದ ನಿಮ್ಮ ಬರುವಿಕೆಯಿಂದ ಒಂದು ಆಶ್ಚರ್ಯಕರವಾದ ಘಟನೆ ಸಂಭವಿಸಿತು ನಮ್ಮ ಸಂಸ್ಥಾನದ ರಾಜ್ಯದಾ

ಡಳತೆಯಲ್ಲಿ ನಿಮ್ಮ ಈ ಸಲದ ಆಗಮನವು ಸಂಸ್ಮರಣೀಯವಾಗಿದೆ, ಶ್ರೀನಿವಾಸರಾಯನಂದನು.

ಅಹುದು. ಅದರ ಸ್ಮಾರಕ ಏರ್ಪಡಿಸಬೇಕೆಂದಿರುವೆನು ಸುಬ್ಬಣ್ಣವರು ತಮ್ಮ ಬಳಿಯಲ್ಲಿ ಕುಳಿತಿದ್ದ ಸ ಳೆಯ ಮುಖ ನೋಡುತ್ತ ನುಡಿದರು

ಅದೇನು? ಶ್ರೀನಿವಾಸರಾಯನು ಗೊಂದಲದಲ್ಲಿ ಬಿದ್ದು ಕೇಳಿದನು

ನಮ್ಮ ಸರಳಾಕುಮಾರಿಯನ್ನ ಮಧುಕ ನಿಗೆ ಜೋಡು ಕೂಡಿಸಬೇಕೆನ್ನುವೆನು, ಎಂದು ನುಡಿಯಲು ಸರಳೆ ನಾಚಿ ಒಳಗೆ ಓಡಿದಳು.

ಸುಬ್ಬಣ್ಣವರೇ, ಹೇಗೂ ಸರಳೆ ಉಪವರಳಾಗಿರುವಳು. ಮಧ ಕರನು ನಿರ್ದೋಷಿಯೆಂದು ಸಿದ್ಧಮಾಡಿ ಬಿಟ್ಟರೆ ಅವನಂತಹ ವರನು ಎಲ್ಲಿಯೂ ಸಿಕ್ಕಲಾರನು. ಸಾವುಕಾರರ ಲಕ್ಷಾವಧಿ ಸಂಪತ್ತಿಗೆ ಒಡೆಯನಾಗುವನು. ಶ್ರೀನಿವಾಸರಾಯನು ಕೃತಜ್ಞೆಯಿಂದ ನುಡಿದನು.

ನೋಡೋಣ, ಈಶ್ವರೀ ಸಂಕೇತ ಹೇಗಿದೆಯೋ ನೋಡೋಣ ಶ್ರೀನಿವಾಸರಾಯರೇ, ಸೆಶನ್ ಕಮೀಟಿ ನಾಳೆಯೇ ಕೂಡಲಿದೆಯಲ್ಲವೆ? ಎಂದು ಸುಬ್ಬಣ್ಣ ಕೇಳಿದರು

ಅಹುದು. ನಾಳೆಯೇ ಇದೆ. ಕೃಷ್ಣರಾಯನಿಗೆ ನಿಜ ಸಂಗತಿ ತಿಳಿದಿದೆ. ಅವನು ತನ್ನ ಪರವಾಗಿ ಕೆಲಸ ನಡೆಯಿಸಲು ಮುಂಬಯಿಯ ಮುಕುಂದ ರಾವ್ ಬ್ಯಾರಿಸ್ಟರ ಇವರನ್ನು ಕರೆಯಿಸಲಿರುವನು ಮುಕುಂದರಾಯನು ಇಂದು ಸಂಜೆಗೆ ಬರಬಹುದು, ಎಂದು ಶ್ರೀನಿವಾಸರಾಯನು ಹೇಳಿದನು.

ಆಗಲಿ. ಏನಿದ್ದುದೆಲ್ಲವೂ ನಾಳೆ ವ್ಯಕ್ತವಾಗುತ್ತದೆ. ಹೀಗೆಂದು ಎದ್ದು ಮಧುಕರನಲ್ಲಿಗೆ ಹೋಗಿ ಅವನಿಗೆ ಹೇಳತಕ್ಕುದನ್ನು ಹೇಳಿ ಬಂದರು.

ಕೃಷ್ಣರಾಯನಿಗೆ ತಾನು ಮೋಸ ಹೋದ ಸಂಗತಿ ಆ ವೇಳೆ ತಿಳಿಯಿತು. ಸುಬ್ಬಣ್ಣವರ ಶಿಷ್ಯ ಮುರಾರಿ ಪತ್ರದ ಕಟ್ಟನ್ನು ತೆಗೆದುಕೊಂಡು ಹೋದುದರಿಂದ ತಮ್ಮ ಕಪಟ ವ್ಯೂಹವೆಲ್ಲವೂ ಬಯಲಿಗೆ ಬಿದ್ದಂತೆಯೇ ಆಗಿದ್ದಿತು, ಆದರೂ ಅವನಿಗೆ ಒಂದು ಧೈರ್ಯವಿದ್ದಿತು. ಕೊಲೆಯ ಅಪರಾಧ ಮಧುಕರನನ್ನುಳಿದು ಇನ್ನೊಬ್ಬನ ಮೇಲೆ ಬರಲು ಸಾಧ್ಯವೇ ಇಲ್ಲವೆಂದು ಅವನು ನಂಬಿದ್ದನು ಪ್ರತ್ಯಕ್ಷ ಕೈ ಬೆರಳಿನ ಗುರತೇ ಸಿಕ್ಕಿರಲು, ಅದು ಅವನದಲ್ಲವೆಂದು ಸಿದ್ಧ ಮಾಡಲು ಶಕ್ತನಾರು? ಎಂದು ಅವನು ಬಲವಾಗಿ ನಂಬಿದ್ದನು. ಅವನು ತನಗೆ ಮರುದಿನವೇ ಸೆಶನ್ ಕಮೀಟಿಯಿದ್ದುದು ತಿಳಿಯಲು, ಆ ಕೂಡಲೆ ತಾರು ಮಾಡಿ ಬ್ಯಾರಿಸ್ಟರ ಮುಕುಂದರಾಯನಿಗೆ ಆಮಂತ್ರಣ ಕೊಟ್ಟಿದ್ದನು.

ಕೃಷ್ಣರಾಯನ ತಾರಿನಂತೆ ಮುಕುಂದರಾಯನು ಅಂದು ಸಂಜೆಗೇನೇ ಕುಸುಮಪುರಕ್ಕೆ ತಲುಪಿದನು. ರಾತ್ರಿಯಲ್ಲಿ ಕೃಷ್ಣರಾಯನು ಮುಕುಂದ ರಾಯನನ್ನು ಕಂಡನು. ಮರುದಿನದ ಸಿದ್ಧತೆಯೆಲ್ಲವೂ ಕೊನೆಗಂಡ ಮೇಲೆ ಮಲಗಲು ಹೋದನು.

ಮರುದಿನ ಮುಂಜಾವಿನಲ್ಲಿ ಕುಸುಮಪುರದಲ್ಲಿ ಆ ಒಂದೇ ಸುದ್ದಿಮನೆ ಮಾಡಿದ್ದಿತು. ಅಂದಿನ ಕುಸುಮಪುರ ವೃತ್ತದಲ್ಲಿ ಮುಂದಿನಂತೆ ಸಂಗತಿಯು ಪ್ರಸಿದ್ಧಿಸಲ್ಪಟ್ಟಿದ್ದಿತು.

ಸಾವುಕಾರ ಶ್ರೀನಿವಾಸರಾಯರ ಕೊಲೆಯ ಪ್ರತಿಧ್ವನಿ

ಕುಸುಮಪುರದ ಸನ್ಮಾನ್ಯ ನಾಗರಿಕರಾದ ಶ್ರೀಮಾನ್ ಶ್ರೀನಿವಾಸ ರಾವ್ ದೇಸಾಯಿ, ಇವರ ಕೊಲೆಯ ವಿಷಯವು ನಮ್ಮ ವೃತ್ತಪತ್ರದಲ್ಲಿ ಆಗಾಗ್ಗೆ ಬಂದಿರುತ್ತದೆ. ಈ ಕೊಲೆ ಸಂಭವಿಸಿದಂದಿನಿಂದ ನಮ್ಮ ಕುಸುಮ ಪುರದಲ್ಲಿ ಅಘಟಿತಘಟನೆಗಳೇ ನಡೆದಿರುತ್ತವೆ. ಹುಬ್ಬಳ್ಳಿಯ ಪ್ರಸಿದ್ಧ ತುಬ್ಬುಗಾರ ಸುಬ್ಬಣ್ಣವರ ಚಾತುರ್ಯವು ಇಂದು ಚನ್ನಾಗಿ ಪ್ರದರ್ಶಿತ ವಾಗಲಿದೆ. ಪೋಲೀಸರು ಶ್ರೀನಿವಾಸರಾಯರ ಮನೆಯಲ್ಲಿ ನೌಕರಿಗಿದ್ದ ಮಿ. ಮಧುಕರ ಎಂಬ ತರುಣನೇ ಕೊಲೆಗಾರನೆಂದು ನಿರ್ಣಯಿಸಿದ್ದರು, ಮತ್ತು ಹಾಗೆ ಅವರಲ್ಲಿ ಬಲವಾದ ಆಧಾರವೇ ಇರುತ್ತದೆ. ಶ್ರೀನಿವಾಸ ರಾಯರು ಕೊಲ್ಲಲ್ಪಟ್ಟ ಕಿರುಗತ್ತಿಯ ಮೇಲೆ ಮಧುಕರನ ಬಲಗೈ ಹೆಬ್ಬೆರ ಳಿನ ಗುರತು ಚೆನ್ನಾಗಿ ಮೂಡಿದೆ. ಅದರ ಫೋಟೋ ತೆಗೆದಿರುವರು. ಅದನ್ನು ಪೋಲೀಸ ಅಧಿಕಾರಿಗಳು ಈ ಪ್ರಸಂಗದಲ್ಲಿ ಸಾಕ್ಷಿಯೆಂದು ನ್ಯಾಯಾಧಿಕಾರಿ ಗಳ ಮುಂದಿಡುವರು. ಹೀಗಿದ್ದರೂ ಸುಬ್ಬಣ್ಣವರು ಮಧುಕರನು ಕೊಲೆಗಾರ ನಿರದೆ ಶ್ರೀನಿವಾಸರಾಯರ ಸಮೀಪದ ವಾರಸದಾರ ಕೃಷ್ಣರಾಯನೆಂಬ ಮುಂಬಯಿಯ ಪದವೀಧರ, ಸುಶಿಕ್ಷಿತ ಗೃಹಸ್ಥನು ಕೊಲೆಮಾಡಿರುವನೆನ್ನು ತ್ತಾರೆ. ಆ ಬಗ್ಗೆ ಸಾಕಷ್ಟು ಆಧಾರಗಳಿವೆಯಂತೆ. ಎಷ್ಟೇ ಸಾಕ್ಷಿಗಳಿದ್ದರೂ ಮಧುಕರನ ಕೈ ಬೆರಳಿನ ಗುರತಿನ ಬಗ್ಗೆ ಅವರೇನು ಮಾಡಲಿರುವರೆಂಬದೇ ತಿಳಿಯದಾಗಿದೆ. ಒಂದೆಡೆ ಅತ್ಯಂತ ಪ್ರಬಲ ಸಾಕ್ಷಿಯಾದ ಕೈಬೆರಳಿನ ಗುರುತು, ಇನ್ನೊಂದು ಪಕ್ಷಕ್ಕೆ ಯಾವ ಆಧಾರವೂ ಇಲ್ಲದ ತುಬ್ಬುಗಾರ ಸುಬ್ಬಣ್ಣವರು. ತುಬ್ಬುಗಾರ ಸುಬ್ಬಣ್ಣವರು ಅತ್ಯಂತ ಶ್ರೇಷ್ಠ ತರಗತಿಯ ತುಬ್ಬುಗಾರರಲ್ಲೊಬ್ಬರೆಂಬ ಬಗ್ಗೆ ಬೇರೆ ಹೇಳಬೇಕಿಲ್ಲ. ಒಟ್ಟಿನಲ್ಲಿ ಇಂದಿನ ನ್ಯಾಯಸಭೆಯ ರಿಪೋರ್ಟು ಕುಸುಮಪುರ ಸಂಸ್ಥಾನದವರು ಕೊನೆಯ ವರೆಗೂ ಕಾದಿಡುವಂತಹದಾಗಲಿದೆ.

## ಸೆಶನ್ ಕಮಿಟಿ.

ಸೆಶನ್ ಕಮೀಟಿಯ ದಿವಸ. ಅಂದು ಕುಸುಮಪುರದ ಸೆಶನ್ ಕೋರ್ಟಿನಲ್ಲಿ ಜನದಟ್ಟಣೆ ವಿಶೇಷವಾಗಿದ್ದು, ಕುಸುಮಪುರದ ನಾಗರಿಕರಿಗೆ ಅಂದು ಒಂದು ಹೊಸ ಆಶ್ಚರ್ಯವನ್ನೇ ನೋಡುವ ಭಾಗ್ಯವೊದಗಿ ಬಂದಿದ್ದಿತೆಂಬ ಭಾವನೆಯಾಗಿದ್ದಿತು ನಿತ್ಯವೂ ಕೈಬೆರಳಿನ ಗುರತಿನ ಆಧಾರವೊಂದರಿಂದಲೆ ಅನೇಕ ತೀರ್ಪು ಹೊಂದುತ್ತವೆ ಸಾವಿರಾರು ರೂಪಾಯಿಗಳ ತೀರ್ಪಾದರೂ ಕೈಬೆರಳಿನ ಗುರತಿನ ಆಧಾರವಿದ್ದರೆ ಸಾಕು ಯಾವ ಆಕ್ಷೇಪಣೆ ಇಲ್ಲದೇನೇ ತೀರ್ಪು ಪಡೆಯುತ್ತಲಿವೆ ನ್ಯಾಯಾಸ್ಥಾನದಲ್ಲಿ ಕೈಬೆರಳಿನ ಗುರತಿಗೆ ಬಹಳ ಮಹತ್ವದ ಸ್ಥಾನವಿದೆ ಯಾವನೊಬ್ಬನು ತನ್ನ ಕೈಯಿಂದಲೇ ಮಾಡಿದ ಸಹಿಯು ಕೂಡ ಖೊಟ್ಟಿಯೆಂದು ನಿರ್ಧರಿಸಲ್ಪಡಬಹುದು, ಆದರೆ ಕೈಬೆರಳಿನ ಗುರತೊಂದಿದ್ದರೆ ಸಾಕು ನ್ಯಾಯನಿರ್ಣಯಕ್ಕೆ ತೊಂದರೆಯೇ ಇಲ್ಲ. ವಕೀಲರಿಗೆ, ಅಧಿಕಾರಿಗಳಿಗೆ ಯಾರಿಗೂ ಕೈಬೆರಳಿನ ಗುರತಿದ್ದರೆ ಅನ್ಯ ಸಾಧನವೇ ಬೇಡ ಈ ತತ್ವಕ್ಕನುಸಾರವಾಗಿ ಮಧುಕರನೇ ಅಪರಾಧಿಯೆಂದು ಅವರು ನಿರ್ಧರಿಸಿಯೇ ಬಿಟ್ಟಿದ್ದರು, ಆದರೆ ಸುಬ್ಬಣ್ಣವರು ಒಂದು ಹೊಸ ಯುಗವನ್ನೇ ಆರಂಭಿಸಿದ್ದರು ಪರಂಪರವಾಗಿ ಸತ್ಯ ಸಂಗತಿಯೇ ಎಂದು ನಂಬಿದಂತಹ ಸಂಗತಿಯು ಅಸತ್ಯವೆಂದು ತೋರಿಸಲಿದ್ದರು. ಅಂತೆಯೇ ಅಂದು ಜನರ ಉತ್ಸಾಹವು ಅವರ್ಣನೀಯವಾಗಿದ್ದಿತು.

ವಾಡಿಕೆಯಂತೆ ಕೋರ್ಟು ಸರಿಯಾಗಿ ೧೧ ಗಂಟೆಗೆ ಆರಂಭಿಸಲ್ಪಟ್ಟಿತು. ಆರೋಪಿಯ ವಿರದ್ಧ ಪಕ್ಷದ ಬ್ಯಾರಿಸ್ಟರ ಮುಕುಂದರಾಯನು ದೀರ್ಘವಾದ ಭಾಷಣವೊಂದನ್ನು ಮಾಡಿದನು ಆ ಮೇಲೆ ಪೋಲೀಸು ಅಧಿಕಾರಿಗಳ ಸಾಕ್ಷಿಯಾಯಿತು ಅವರು ತಾವು ಕಂಡ, ಶೋಧಿಸಿದ ಸಂಗತಿಗಳನ್ನೆಲ್ಲ ಹೇಳಿದರು. ಕೈ ಬೆರಳಿನ ಗುರತುಗಳಲ್ಲಿ ನಿಪುಣರಾದ ಅಧಿಕಾರಿಗಳನ್ನು ಸಾಕ್ಷಿಗಾಗಿ ಕರೆಸಿದ್ದರು ಆರೋಪಿಯ ಪಕ್ಷವು ಬಹಳ ಪ್ರಬಲವಾಗಿದ್ದಿತು. ಮುಕುಂದರಾಯನೇ ಸಹಜವಾಗಿ ಯಶಸ್ವಿಯಾಗುವನೆಂದು ಯಾರಾದರೂ ಊಹಿಸಬಹುದಿತ್ತು ಮುಕುಂದರಾಯನ ಜಾಣತನದ ಕೆಲಸವೇನೂ ಇರಲೇ ಇಲ್ಲ ಎಲ್ಲವೂ ಸ್ಪಷ್ಟವೇ ಆಗಿದ್ದಿತು; ಆದರೂ ಮುಕುಂದರಾಯನು ನಮ್ಮ ದೇಶದಲ್ಲಿ, ಪರದೇಶಗಳಲ್ಲಿ ಕೈ ಬೆರಳಿನ ಗುರತಿನ ಸ್ಥಾನವು ಎಷ್ಟು ಮಹತ್ವವಾದುದಿದೆ, ಅವೊಂದರ ಆಧಾರದ ಮೂಲಕವಾಗಿಯೇ ಅದೆಷ್ಟು ನ್ಯಾಯನಿರ್ಣಯ ಹೊಂದುತ್ತಿದೆ? ಇತ್ಯಾದಿಯಾಗಿ ಒಳ್ಳೇ ಮಾರ್ಮಿಕವಾಗಿ ತನ್ನ

ಭಾಷಣವನ್ನು ಮಾಡಿದನು. ಅವನು ತನ್ನ ನ್ಯಾಯದಲ್ಲಿ ಸಿಕ್ಷಯವಾಗಿಯೂ ಜಯ ಹೊಂದಬಹುದಿತ್ತು, ಮತ್ತು ಜನರಾದರೂ ಮುಕುಂದರಾಯನ ಜಾಣತನವನ್ನೇ ಹೊಗಳಬಹುದಿತ್ತು, ಆದರೆ ಅವರು ನ್ಯಾಯಾಲಯಕ್ಕೆ ಬಂದ ಕಾರಣವು ಅದಲ್ಲ. ಅವರು ಬಂದುದು ಸುಬ್ಬಣ್ಣಾವರ ಹೇಳಿಕೆಯನ್ನು ಕೇಳಲಿಕ್ಕೆ; ಮತ್ತು ಸುಬ್ಬಣ್ಣಾವರು ತಮ್ಮ ಚಾತುರ್ಯದಿಂದ ಮುಕುಂದ ರಾಯನ ವಿಧಾನಗಳನ್ನೆಲ್ಲ ಉರುಳಿಸಿ ಬಿಡಲು ಶಕ್ತರಿದ್ದ ಬಗ್ಗೆ ಜನರಿಗೆ, ನ್ಯಾಯಾಧಿಕಾರಿಗೆ, ಜ್ಯೂರೀ ಜನರಿಗೆ ಹೀಗೆ ಎಲ್ಲರಿಗೂ ಮನವರಿಕೆಯಾಗಿದ್ದಿತು, ಮತ್ತು ಎಲ್ಲರೂ ಅವರ ಹೇಳಿಕೆಯನ್ನೇ ಕೇಳಲು ಆತುರರಾಗಿ ಅವರ ಬರವನ್ನೇ ನಿರೀಕ್ಷಿಸುತ್ತ ಕುಳಿತಿದ್ದರು ಆರೋಪಿಯ ವಿರುದ್ಧ ಪಕ್ಷದ ಎಲ್ಲ ಹೇಳಿಕೆ-ಕೇಳಿಕೆಗಳು ಕೊನೆಗಾಣಲು, ಆರೋಪಿಯಾದ ಮಧುಕರನ ಪಕ್ಷದ ಕಾರ್ಯಕ್ಕೆ ಪ್ರಾರಂಭವಾಯಿತು. ಮಿ ದೇಸಾಯಿಯೇ ಈ ಪಕ್ಷದ ವಕೀಲ

ದೇಸಾಯಿಯು ತನ್ನ ಪ್ರಾಸ್ತಾವಿಕ ಭಾಷಣ ಮಾಡಿ ಅದರಲ್ಲಿ ಸುಬ್ಬಣ್ಣಾವರ ಹೇಳಿಕೆಯು ಅತ್ಯಂತ ಮಹತ್ವವಾದುದಿದ್ದು ಅದನ್ನು ಎಲ್ಲರೂ ಲಕ್ಷ್ಯಪೂರ್ವಕವಾಗಿ ಕೇಳಬೇಕೆಂದು ವಿನಂತಿ ಮಾಡಿಕೊಂಡು ತನ್ನ ಕಾರ್ಯಕ್ಕೆ ಪ್ರಾರಂಭ ಮಾಡಿದನು. ಆಣೆ-ಕ್ರಿಯೆಗಳೆಲ್ಲ ಯಥಾವಿಧಿಯಾದ ಬಳಿಕ—

ಪ್ರ:—ನಿಮ್ಮನ್ನು ಆರೋಪೀ ಮಧುಕರನು ಕರೆಕಳುಹಿದ್ದನೇ?

ಉ:—ಇಲ್ಲ. ಆಕಸ್ಮಾತ್ತಾಗಿ ಅವನು ನನಗೆ ಕೂಡಿದನು. ನನಗೆ ಅವನಲ್ಲಿ ಕನಿಕರವೆನಿಸಿದುದರಿಂದ ನಾನು ಈ ಕೆಲಸ ಕೈಕೊಂಡೆನು

ಪ್ರ:—ಒಳ್ಳೇದು ನಿಮಗೆ ಸದ್ಯದ ಕೊಲೆಯ ವಿಷಯವಾಗಿ ಏನೆನಿಸುತ್ತಲಿದೆ? ಉ:—ಈ ಕೊಲೆಯು ಆರೋಪೀ ಮಧುಕರನಿಂದಾಗಿಲ್ಲ

ಪ್ರ:—ಹಾಗಾದರೆ ಕೊಲೆ ಮಾಡಿದವರಾರು?

ಉ.—ನನ್ನ ಸೂಚನೆಯಂತೆ ಬಂಧಿಸಿದ ಕೃಷ್ಣರಾಯನೆಂಬವನಿಂದ ಆಗಿದೆ. ಪ್ರ:—ಹೀಗೆ ಹೇಳಲು ಕಾರಣವೇನು?

ಉ:—ಅದಕ್ಕೆ ಎರಡು-ಮೂರು ಕಾರಣಗಳಿವೆ

ಪ್ರ:—ಮೊದಲಿನದಾವುದು?

ಉ:—ಕೃಷ್ಣರಾಯನು ಸಾವುಕಾರ ಶ್ರೀನಿವಾಸರಾಯರಿಗೆ ನಿಜವಾದ ವಾರಸದಾರನಿರುವನು ಶ್ರೀನಿವಾಸರಾಯರ ಮರಣದ ತರುವಾಯ ಸ್ವಾಭಾವಿಕವಾಗಿ ಅವರ ಸಂಪತ್ತಿಗೆಲ್ಲ ಒಡೆಯನಾಗಲು ಆತ ಆಶಿಸುತ್ತಲಿದ್ದನು, ಆದರೆ ಶ್ರೀನಿವಾಸರಾಯರು ಆರೋಪೀ ಮಧುಕರನ ಹೆಸರಿನಲ್ಲಿ ಮೃತ್ಯುಲೇಖ ಮಾಡಿಟ್ಟದ್ದರಿಂದ ಅವನಿಗೆ ಆ ಸಂಪತ್ತಿ ಎರವಾಯಿತು. ಆದುದರಿಂದ ಸರಳ

ವಾಗಿ ಆ ವಿಶಾಲ ಸಂಪತ್ತಿ ದೊರಕಿಸಲು ಅವನು ಈ ಕೊಲೆ ಮಾಡಿರುವನು.

ಪ್ರ:—ಆರೋಪಿ ಮಧುಕರನೇ ತನ್ನ ಹೆಸರಿನಲ್ಲಿದ್ದ ಮೃತ್ಯುಪತ್ರದಂತೆ ಬೇಗನೆ ಸಂಪತ್ತಿ ದೊರೆಕಿಸಲು ಈ ಕೊಲೆಯನ್ನೇಕೆ ಮಾಡಿರಬಾರದು?

ಉ:—ಅಹುದು; ಅದೂ ನಿಜವಿರುತ್ತದೆ; ಆದರೆ ಈ ವಿಷಯದಲ್ಲಿ ಕೃಷ್ಣರಾಯನು ಎಷ್ಟು ಕಷ್ಟಪಟ್ಟಿರುವನೋ ಅಷ್ಟು ಕಷ್ಟವನ್ನು ಮಧುಕರನು ತಾಳಿರುವದಿಲ್ಲ.

ಪ್ರ:—ಕೃಷ್ಣರಾಯನು ಏನು ತೊಂದರೆ ತೆಗೆದುಕೊಂಡಿರುವನು?

ಉ:— ಈ ವಿಷಯದಲ್ಲಿ ಆವನು ಒಂದು ಉತ್ಕೃಷ್ಟವಾದ ಬಲೆಯನ್ನೇ ರಚಿಸಿರುವನು. ಪ್ರ:—ಆ ಬಗ್ಗೆ ಸಂಕ್ಷಿಪ್ತವಾಗಿ ಹೇಳಿರಿ.

ಉ:—ಮುಂಬಯಿಯಲ್ಲಿಯ ಕಮಲಾಸಾನಿಯೆಂಬ ತರುಣ ವೇಶ್ಯೆಯೊಬ್ಬಳನ್ನು ಮತ್ತು ಇಂದುಶೇಖರನೆಂಬ ದುಷ್ಟಮನುಷ್ಯನೋರ್ವನನ್ನು ಕರೆತಂದು ಅವರಿಂದ ಮಧುಕರನನ್ನು ಬಲೆಯಲ್ಲಿ ಹಿಡಿಯಬೇಕೆಂದು ಯೋಚಿಸಿದನು, ಮತ್ತು ಆ ವ್ಯೂಹದಲ್ಲಿ ಅವನು ಸಂಪೂರ್ಣ ಯಶಸ್ಸು ಪಡೆದನು.

ಪ್ರ:—ಈ ಬಗ್ಗೆ ನಿಮ್ಮಲ್ಲಿ ಆದಾರವಿದೆಯೆ? ಉ:—ಇದೆ.

ಹೀಗೆ ಹೇಳಿ ಸುಬ್ಬಣ್ಣವರು ತಮ್ಮ ಜೇಬಿನಿಂದ ಪತ್ರಗಳ ಕಟ್ಟೊಂದನ್ನು ದೇಸಾಯಿಯ ಕೈಯಲ್ಲಿ ಕೊಟ್ಟರು. ದೇಸಾಯಿಯು ಅವುಗಳನ್ನು ನ್ಯಾಯಮೂರ್ತಿಯ ಕೈಯಲ್ಲಿ ಕೊಟ್ಟನು. ಇಂದುಶೇಖರ-ಕಮಲಿನಿಯರು ಅಲ್ಲಯೇ ನಿಂತಿದ್ದರು ಅವರನ್ನು ಕೇಳಲು, ಅವರು ಆ ಪತ್ರಗಳು ತಮ್ಮವೇ ಎಂದು ಸಮ್ಮತಿಸಿದರು. ಮತ್ತೆ ಪ್ರಶ್ನೋತ್ತರಗಳಿಗೆ ಪ್ರಾರಂಭವಾಯಿತು.

ಪ್ರ:—ಒಳ್ಳೇದು. ಸಬ್ಬಣ್ಣವರೇ, ಈ ಬಲೆಯು ಕೃಷ್ಣರಾಯನೇ ರಚಿಸಲ್ಪಟ್ಟಿರುವನೆಂದು ಸಿದ್ಧವಾದಂತಾಯಿತು, ಆದರೆ ಇಷ್ಟರಿಂದಲೇ ಕೊಲೆಗಾರನು ಕೃಷ್ಣರಾಯನೇ ಎಂದು ಸಿದ್ಧಮಾಡಲು ಶಕ್ಯವಿಲ್ಲವೆಂಬದನ್ನು ನೀವು ಮರೆತಿರಲಿಕ್ಕಿಲ್ಲ ಉ:— ಇಲ್ಲ.

ಪ್ರ:—ಕೊಲೆಯಾದ ಮೇಲೆ ಸಾವುಕಾರರ ಶವದ ಸಮೀಪದಲ್ಲಿಯೇ ಅವರು ಕೊಲ್ಲಲ್ಪಟ್ಟ ಕಿರುಗತ್ತಿಯೊಂದು ಬಿದ್ದಿತ್ತೆಂದು ನೀವು ಕೇಳಿರಬಹುದು?

ಉ:—ಅಹುದು. ಕೇಳಿರುವೆನು.

ಪ್ರ:—ಆ ಕಿರುಗತ್ತಿಯ ಮೇಲೆ ಒಂದು ಕೈಹೆಬ್ಬೆರಳು ಮೂಡಿದ್ದಿತೆಂಬವನ್ನಾದರೂ ನೀವು ಕೇಳಿರಬಹುದು. ಉ:—ಅಹುದು.

ಪ್ರ:— ಆ ಮೇಲೆ ಆ ಹೆಬ್ಬೆರಳಿನ ಫೋಟೋ ತೆಗೆದು ಅದನ್ನು ಸಾವು ಕಾರರ ಬಳಿಯಲ್ಲಿ ನೌಕರಿಗಿದ್ದ ಜನರ ಕೈಹೆಬ್ಬೆರಳಿನ ಗುರತುಗಳಿಗೆ ಹೋಲಿಸಲು, ಅದು ಆರೋಪೀ ಮಧುಕರನದೇ ಇರಬೇಕೆಂದು ಸಿದ್ಧವಾಯಿತಲ್ಲವೆ?

ಉ:— ಅಹುದು.

ಪ್ರ:— ಅಂದಮೇಲೆ ಕೊಲೆಗಾರನು ಮಧುಕರನೇ ಎಂದು ನಿರ್ಧರಿಸಬೇಕಾಗುವದಿಲ್ಲವೆ?

ಉ:— ಆ ಗುರತು ನಿಜವೇ ಎಂದು ನಂಬಿದಲ್ಲಿ ಮಧುಕರನೇ ಕೊಲೆಗಾರನೆಂದು ನಿರ್ಧರಿಸಲು ಆಕ್ಷೇಪಣೆಯೇನೂ ಇಲ್ಲ.

ಪ್ರ — ಅಂದರೆ? ಆ ಕೈಹೆಬ್ಬೆರಳಿನ ಗುರತು ಖೊಟ್ಟಿಯೆಂದು ನಿಮ್ಮ ಅಭಿಪ್ರಾಯವೇನು?

ಉ:— ಅಹುದು. ಅದು ಖೊಟ್ಟಿಯಾದುದೆಂದು ನನ್ನ ವಿಶ್ವಾಸವಿದೆ.

ಪ್ರ:— ಕೈಬೆರಳಿನ ಗುರತು ಎಂದಾದರೂ ಖೊಟ್ಟಿಯಾದುದಿರಲು ಶಕ್ಯವಿದೆಯೆ? ಅದೊಂದರ ಆಧಾರದಿಂದಲೇ ಎಂತೆಂತಹ ನ್ಯಾಯಗಳು ನಿರ್ಣಯವಾಗುತ್ತವೆ ಅದೊಂದರ ಆಧಾರವಿರುವ ಮೂಲಕವೇ ಯಾವ ಆಕ್ಷೇಪಣೆ-ಆತಂಕಗಳಿಗೆ ಸ್ಥಳಸಿಕ್ಕುವುದಿಲ್ಲವೆಂದು ನೀವು ಅರಿತಿರಬಹುದು.

ಉ:— ಅಹುದು. ಪ್ರ.-ಹಾಗಿದ್ದರೂ ಖೊಟ್ಟಿಯೆನ್ನುತ್ತಿರುವಿರಾ?

ಉ:— ಅಹುದು, ಅದು ಖೊಟ್ಟಿಯಾದುದೇ ಸರಿ.

ದೇಸಾಯಿಯು ನ್ಯಾಯಮೂರ್ತಿಯ ಅಪ್ಪಣೆ ಪಡೆದು ಕೈಬೆರಳಿನ ಗುರತಿನ ಮತ್ತು ಸಾವುಕಾರರ ಬಳಿಯಲ್ಲಿದ್ದ ಗುರತಿನ ಕಾಗದಗಳನ್ನು ತೆಗೆದು ಸುಬ್ಬಣ್ಣನವರಿಗೆ ತೋರಿಸಿ ಕೇಳಿದನು.

ಪ್ರ:— ಇದೇ ಆ ಕಿರುಗತ್ತಿಯ ಮೇಲಿನ ಗುರತಿನ ಭಾವಚಿತ್ರ; ಮತ್ತು ಇದು ಸಾವುಕಾರರ ಬಳಿಯಲ್ಲಿದ್ದ ಗುರತಿನ ಪುಸ್ತಕದಲ್ಲಿನ ಮಧುಕರನ ಬಲಗೈ ಹೆಬ್ಬೆರಳಿನ ಗುರತು. ಈ ಎರಡೂ ಒಂದಕ್ಕೊಂದು ಸಂಪೂರ್ಣವಾಗಿ ಸರಿಹೋಗುತ್ತವಲ್ಲವೆ? ಉ:— ಅಹುದು.

ಪ್ರ:— ಹಾಗಿದ್ದರೆ ಖೊಟ್ಟಿಯಾಗಲು ಶಕ್ಯವಿದೆಯೆ?

ಉ:— ಆದರೂ ಖೊಟ್ಟಿಯಾಗಿದೆ.

ಪ್ರ:— ಖೊಟ್ಟಿಯೆಂದು ನೀವು ಅನ್ನುವುದರ ಅರ್ಥವೇನು? ಅದು ಇನ್ನೊಂದು ವ್ಯಕ್ತಿಯದಿರಬೇಕೆನ್ನುವಿರಾ? ಉ:— ಛೆ! ಇಲ್ಲ.

ಪ್ರ:— ಹಾಗಾದರೆ ಖೊಟ್ಟಿಯೆಂದರೆ ಹೇಗೆ?

ಉ:— ಅದು ನಿಜವಾದ ಕೈಬೆರಳಿನ ಗುರತು ಅಲ್ಲವೇ ಅಲ್ಲ.

ಪ್ರ:—ಅಂ, ನಿಜವಾದ ಕೈಬೆರಳಿನ ಗುರುತು ಅಲ್ಲವೆ?

ಉ:—ಅಲ್ಲ ಅದೊಂದು ಕೃತಕ ಕೈಬೆರಳಿನ ಗುರತಿರುತ್ತದೆ.

ನ್ಯಾಯಾಲಯವೆಲ್ಲವೂ ದಂಗು ಬಡಿದು ಹೋಯಿತು. ಸ್ವಪ್ನದಲ್ಲಿರುವೆವೋ ಎಚ್ಚರದಲ್ಲಿರುವೆವೋ ಆವುದೂ ತಿಳಿಯುವಂತಿರಲಿಲ್ಲ ಕೃತಕ ಕೈಬೆರಳು ತಯಾರಿರುವದು ಎಂದಾದರೂ ಶಕ್ಯವಿದೆಯೆ? ಹಾಗಿದ್ದರೆ ಗತಿಯೇನು? ಮುಂದೆ ಬಾಳುವೆ ಸಾಗುವದೆಂತು? ಕೃತಕ ಕೈಬೆರಳು ತಯಾರಿಸಿದವರಿಗೆ ಕೃತಕ ಸಹಿ ಸಿದ್ಧ ಮಾಡಲು ಬರಲಿಕ್ಕಿಲ್ಲವೆ? ಬಾಯಿ ಮಾತು ಮೊದಲಿನ ಕಾಲದಲ್ಲಿ ಸತ್ಯವೆಂದು ಹಿಡಿಯಲ್ಪಡುತ್ತಲಿದ್ದಿತು ಒಬ್ಬನು ಸಾಲ ತಿಗೆದುಕೊಂಡರೆ, ಅವನು ಬರೆದು ಕೊಡುವ ಕಾರಣವಿರುತ್ತಿರಲಿಲ್ಲ ಸಾಲ ಕೊಟ್ಟವನು ತಾನು ಕೊಟ್ಟ ಸಾಲದ ಸಂಖ್ಯೆ ಹೇಳಿದರಾಯಿತು ಅದಕ್ಕೆ ಆಕ್ಷೇಪಣೆಯೋ ಬರುತ್ತಿರಲಿಲ್ಲ. ಈ ವಿಷಯದಲ್ಲಿ ದೇವರನ್ನು ಕೂಡ ಸಾಕ್ಷಿಗೆ ಕರೆದ ಕತೆಗಳುಂಟು

ಮುಂದೆ ಬಾಯಿಮಾತಿನಲ್ಲಿ ನಂಬಿಗೆ ಉಳಿಯದಾಗಲು ಬರೆಹದ ಮೂಲಕ ವ್ಯವಹಾರ ನಡೆಯಹತ್ತಿತು. ಯಾವನೊಬ್ಬನು ತನ್ನ ಸಹಿ ಮಾಡಿ ಬರೆದು ಕೊಟ್ಟರಾಯಿತು. ಅದೇ ನಿಜವೆಂದು ನಂಬುವ ಸಮಯವಿದು. ಇಂತಹ ಸಮಯದಲ್ಲಿ ಬರೆಹದ ಆಧಾರಗಳಾದ ಸಹಿ, ಹೆಬ್ಬೆರಳಿನ ಗುರತುಗಳನ್ನೇ ಕೃತಕವಾಗಿ ಸಿದ್ಧಮಾಡಹತ್ತಿದರೆ ಮುಂದೆ ವ್ಯವಹಾರಗಳು ನಡೆಯುವದೆಂತು? ಯಾವ ಆಧಾರದ ಮೇಲೆ ವಿಶ್ವಾಸವಿಡಬೇಕು? ಎಲ್ಲವೂ ವಿಚಿತ್ರವೇ! ಕಾಲಾಯ ತಸ್ಮೈ ನಮಃ| ಎನ್ನದ ಹೊರತು ಬೇರೆ ದಾರಿಯೆ ಇಲ್ಲ. ಇರಲಿ. ಇನ್ನು ಪ್ರಸ್ತುತ ವಿಷಯವನ್ನು ಅವಲೋಕಿಸುವಾ.

ಪ್ರ:—ಅಂ, ಸುಬ್ಬಣ್ಣವರೇ, ಕೃತಕ ಕೈಬೆರಳೇ! ಉ:-ಅಹುದು

ಪ್ರ:—ಕೃತಕ ಕೈಬೆರಳು ಸಿದ್ಧ ಮಾಡುವದು ಸಾಧ್ಯವಿದೆಯೆ?

ಉ:—ಅಹುದು, ಸಾಧ್ಯವಿದೆ, ಮತ್ತು ಅಂತಹದೇ ಒಂದು ಕೃತಕ ಕೈಬೆರಳು ಇಲ್ಲಿ ಸಿದ್ಧ ಮಾಡಲ್ಪಟ್ಟಿದೆ

ಪ್ರ:—ಸದ್ಯ ಕೃತಕ ಕೈಬೆರಳು ಸಿದ್ಧಮಾಡಲ್ಪಟ್ಟಿಯೆನ್ನುವಿರಾ?

ಉ:—ಅಹುದು

ಪ್ರ:—ಅಂತಹ ಕೃತಕ ಕೈಬೆರಳು ಯಾವದೊಂದು ರಸಾಯನ ಮಿಶ್ರಣದಿಂದ ಸಿದ್ಧಮಾಡಲು ಬರುವಂತಿದೆಯೆ?

ಉ:—ಅಹುದು, ಕೆಲವು ವಸ್ತುಗಳನ್ನು ದ್ರವರೂಪವಾಗಿ ಮಾಡಿ ಒಂದು ಪ್ರಮಾಣದಲ್ಲಿ ಕೂಡಿಸುವುದರಿಂದ ಅಂತಹ ಮಿಶ್ರಣಸಿದ್ಧವಾಗುತ್ತದೆ

ಪ್ರ:—ಮಿಶ್ರಣವು ಸಿದ್ಧವಾದ ಮೇಲೆ ಹೇಗೆ ಮಾಡಬೇಕು?

ಉ:—ಯಾರ ಕೈಬೆರಳಿಗೆ ಸರಿಯಾಗುವಂತಹದನ್ನು ಸಿದ್ಧಮಾಡ ಬೇಕಾಗಿದೆಯೋ ಅಂತಹದೇ ಒಂದು ಕೈಬೆರಳಿನ ಗುರತು ಬೇಕಾಗುವದು.

ಪ್ರ:-ಹಾಗಾದರೆ ಇಲ್ಲಿ ಕೈಬೆರಳಿನ ಗುರತು ಅವನಿಗೆ ಎಲ್ಲಿ ದೊರೆಕಿತು?

ಉ:-ಸಾವುಕಾರರ ಮನೆಯಲ್ಲಿರುವ ಕೈಬೆರಳಿನ ಗುರತಿನ ಪುಸ್ತಕದಲ್ಲಿ

ಪ್ರ:—ಅದೇ ಎಂದು ಹೇಗೆ ಸಿದ್ಧಮಾಡುವಿರಿ?

ಉ:—ಎರಡೂ ಗುರತುಗಳನ್ನು ನಾನು ಎಂಟುಪಟ್ಟು ದೊಡ್ಡವಾಗು ವಂತೆ ಫೋಟೋ ತೆಗೆದಿರುವೆನು. ಅದರಲ್ಲಿ ಇದು ಸ್ಪಷ್ಟವಾಗುವಂತಿದೆ.

ಹೀಗೆ ಹೇಳಿ ಸುಬ್ಬಣ್ಣವರು ತಮ್ಮ ಜೇಬಿನಿಂದ ಎರಡು ಕಾಗದಗಳನ್ನು ತೆಗೆದುಕೊಟ್ಟರು

ಪ್ರ:—ಇವುಗಳಲ್ಲಿ ನಿಮಗೆ ಏನು ಕಾಣಬರುತ್ತದೆ?

ಉ:—ಈ ಎರಡರಲ್ಲಿಯೂ ಒಂದೇ ವಿಶೇಷವಾದ ಸಾಮ್ಯವಿದೆ.

ಪ್ರ.—ಅದೇನು?

ಉ:—ಸಾವುಕಾರರಲ್ಲಿದ್ದ ಪುಸ್ತಕದಲ್ಲಿ ಮಧುಕರನ ಬಲಗೈ ಹೆಬ್ಬೆರ ಳಿನ ಗುರತಿನ ಬಲಭಾಗದಲ್ಲಿ ಕೆಳಮುಗ್ಗಲು ಕನ್ನಡ 'ಉ'ದಂತಹ ಒಂದು ಗುರತಿದೆ. ಪ್ರ:—ಅಹುದು. ಅದು ಏಕಿರಬೇಕು?

ಉ:—ಬೆರಳು ಮೂಡಿಸುವಾಗ ಅಲ್ಲಿ ಒಂದು ದಾರದ ತುಣುಕು ಬಿದ್ದಿರಬೇಕು. ಆದುದರಿಂದ ಅಷ್ಟು ಭಾಗವು ಮೂಡದೆ ಉಳಿದಿದೆ

ಪ್ರ:—ಅದರಿಂದ ಅದು ನಕಲು ಎಂದು ಹೇಗೆ ಸಿದ್ಧಮಾಡುವಿರಿ?

ಉ:—ಕಿರುಗತ್ತಿಯ ಮೇಲೆ ದೊರೆತ ಗುರತಿನಲ್ಲಿಯ ಅದೇ ಸ್ಥಳ ದಲ್ಲಿ ಅದರಷ್ಟೇ ಆಕಾರದ ಗುರತಿದೆ. ಆದುದರಿಂದ ಸಾವುಕಾರರ ಬಳಿಯು ಳ್ಳಿದ್ದ ಆ ಗುರತನ್ನೇ ಮೂಲವಾಗಿಟ್ಟುಕೊಂಡು ಆಕೃತಕ ಕೈಬೆರಳನ್ನು ಸಿದ್ಧ ಮಾಡಿರುವರು

ಪ್ರ:—ಸಾವುಕಾರರ ಮನೆಯಲ್ಲಿ ಭದ್ರವಾಗಿದ್ದ ಆ ಪುಸ್ತಕ ಅವನಿಗೆ ಹೇಗೆ ದೊರೆಕಿತು?

ಉ:-ಸಾವುಕಾರರ ಮನೆಯ ಹೆಣ್ಣಾಳಾದ ಗಂಗವ್ವನ ಸಹಾಯದಿಂದ.

ಪ್ರ:—ಇದರಲ್ಲಿ ಆಕೆಯೂ ಭಾಗವಹಿಸಿರುವಳೆ?

ಉ:—ಅಹುದು. ಕೊಲೆಯ ಪ್ರಕರಣದಲ್ಲಿ ಗಂಗವ್ವನ ಸಹಾಯ ದಿಂದಲೆ ಕೃಷ್ಣರಾಯನು ಕೊಲೆಯನ್ನು ಮಾಡಲು ಶಕ್ತನಾಗಿರುವನು.

ಪ್ರ:—ಆ ಹೆಣ್ಣಾಳಿನ ಸಹಾಯದಿಂದ ಈ ಕೊಲೆಯನ್ನು ಸಾಧಿಸುವದು.

ದ್ದರೆ ಇಂದುಶೇಖರ-ಕಮಲಿನಿಯರನ್ನೇಕೆ ಕಲೆಹಾಕಿದನು?

ಉ:—ಈ ಪ್ರಶ್ನೆ ಕೊಂಚ ದೀರ್ಘವಾದ ದಿದೆ. ಮಧುಕರನ ಮೇಲೆ ಸಾವುಕಾರರು ಪುತ್ರವತ್ ಪ್ರೇಮಮಾಡುತ್ತಲಿದ್ದುದನ್ನು ಕೃಷ್ಣರಾಯನು ಮೊದಲೇ ತಿಳಿದಿರಬೇಕು. ತನಗೆ ಬರಬಹುದಾಗಿದ್ದ ಸಂಪತ್ತಿಯನ್ನು ಸಾವುಕಾರರು ಮಧುಕರನಿಗೆ ಬಿಟ್ಟುಕೊಡಬಹುದೆಂಬ ಯೋಚನೆಯಾದರೂ ಅವನಿಗೆ ಬಂದೇ ಇರಬೇಕು. ಆದುದರಿಂದ ಯಾವದೊಂದು ರೀತಿಯಿಂದ ತನ್ನ ಕಾರ್ಯಸಾಧಿಸಿಕೊಳ್ಳಲು ಅವನು ಇಷ್ಟೆಲ್ಲ ವ್ಯೂಹ ರಚಿಸಿರಬೇಕು.

ಪ್ರ:—ಯಾವದೋಂದು ರೀತಿಯಿಂದ ಅಂದರೆ ಹೇಗೆ?

ಉ:—ಯಾವದೊಂದು ರೀತಿಯಿಂದ ಸಾವುಕಾರರ ಸಂಪತ್ತು ದೊರೆಯುವ ಹಾಗೆ. ಪ್ರ:—ಅಂದರೆ?

ಉ:—ಸಾವುಕಾರರು ಸರಳವಾಗಿ ಆ ಸಂಪತ್ತನ್ನು ಕೃಷ್ಣರಾಯನಿಗೆ ಬಿಟ್ಟುಕೊಡುವದು ಶಕ್ಯವೇ ಇರಲಿಲ್ಲ. ಆದುದರಿಂದ ಯಾವುದೊಂದು ವಾಮಮಾರ್ಗವನ್ನೇ ಅನುಸರಿಸಬೇಕೆಂದು ಅವನ ಉದ್ದೇಶವಿರಬೇಕು. ಅವುಗಳಲ್ಲಿಯೇ ಈಗ ಅವನು ಅನುಸರಿಸಿದ ದಾರಿಯೊಂದಿರುವದು

ಪ್ರ:—ಇನ್ನಾವುವು?

ಉ:—ಶಕ್ಯವಾದಲ್ಲಿ ಮೃತ್ಯುಲೇಖ ಮಾಡುವುದಕ್ಕೆ ಮೊದಲೆ ಸಾವುಕಾರ ಶ್ರೀನಿವಾಸರಾಯರನ್ನು ಕೊಲ್ಲಬೇಕೇಂದು ಅವರ ಉದ್ದೇಶಗಳಲ್ಲೊಂದಾಗಿದ್ದಿತು.

ಪ್ರ:—ಮಧುಕರನನ್ನೇ ಕೊಲೆ ಮಾಡಬೇಕೆಂದು ಅವರು ಯೋಚಿಸಿರಬಹುದೆ?

ಉ:—ಇಲ್ಲ ಅದು ಅವರ ಉದ್ದೇಶವಿರಲು ಶಕ್ಯವಿಲ್ಲ; ಮತ್ತು ಅದರ ಅವಶ್ಯವೂ ಇರಲಿಲ್ಲ

ಪ್ರ—ಹಾಗಾದರೆ ಈಗ ಅವನ ಮರಣವನ್ನೇಕೆ ಬಯಸುವರು?

ಉ:—ಈಗಿನ ಪರಿಸ್ಥಿತಿ ಭಿನ್ನವಿದೆ. ಪ್ರ:—ಏಕೆ?

ಉ:—ಮಧುಕರನು ಸಾವುಕಾರರ ಪ್ರೀತ್ಯಾಸ್ಪದನೇನೋ ಸರಿಯೆ; ಆದರೆ ಅವನನ್ನು ಕೊಲೆಮಾಡಿದ್ದರೆ ಸಾವುಕಾರರು ತಮ್ಮ ಸಂಪತ್ತಿಯನ್ನು ಯಾವುದೊಂದು ಪರಹಿತ ಕಾರ್ಯಕ್ಕೆ ಉಪಯೋಗಿಸಿ ಬಿಡಬಹುದಿತ್ತು. ಆದರೆ ಈಗ ಸಾವುಕಾರರಂತೂ ಕೊಲೆಯಿಂದಲೇ ಆಗಲಿ, ಹೇಗೆಯೇ ಆಗಲಿ ಮರಣ ಹೊಂದಿರುವರು. ಅವರ ಹಿಂದೆ ಅವರ ಸಂಪತ್ತಿಯ ಒಡೆಯನುಮಧುಕರನೇ; ಅವನೂ ಮರಣಹೊಂದಿದರೆ ಆ ಸಂಪತ್ತಿ ಕಾಯಿದೆಯಂತೆ ಕೃಷ್ಣರಾಯನಿ

ಗೇನೇ ಹೋಗುತ್ತದೆ.

ಪ್ರ:—ಕೈಬೆರಳಿನ ಗುರತು ಮನೆಯಲ್ಲಿ ಸಿಕ್ಕುತ್ತಿರಲಿಲ್ಲವೆ?

ಉ:—ಓಹೋ, ಬೇಕಾದ ಹಾಗೆ ಸಿಕ್ಕುತ್ತಲಿದ್ದಿತು

ಪ್ರ:—ಹಾಗಾದರೆ ಪುಸ್ತಕವನ್ನೇ ಏಕೆ ಉಪಯೋಗಿಸಿದರು?

ಉ:—ಈ ಕೃತಕ ಕೈಬೆರಳು ಸಿದ್ಧಗೊಳಿಸಲು ಮಸಿಯಿಂದ ಒತ್ತಿದ ಗುರತೇ ಬಹಳ ಉಪಯೋಗವಾಗುತ್ತದೆ. ಉಳಿದವುಗಳಲ್ಲಿನ ಗುರತಗಳನ್ನು ಫೋಟೋ ತೆಗೆದು ಕೆಲಸ ಮಾಡಬೇಕಾಗುತ್ತದೆ; ಮತ್ತು ಆ ಗುರತುಗಳು ಅಷ್ಟು ಸ್ಪಷ್ಟವಾಗಿ ಮೂಡಿರುವ ಸಂಭವ ಬಹಳ ಕಡಿಮೆ. ಆದುದರಿಂದ ಸ್ಪಷ್ಟವಾಗಿ ಮೂಡಿರುವ ಪುಸ್ತಕದೊಳಗಿನ ಆ ಗುರತನ್ನೇ ಉಪಯೋಗಿಸಿರುವರು. ಇನ್ನೂ ಒಂದು ಕಾರಣವಿದೆ.　　　　ಪ್ರ—ಅದಾವುದು?

ಉ:—ಸಾವುಕಾರರು ಕೊಲೆಯಾದೊಡನೆ, ಪೋಲೀಸರು ಕಿರುಗತ್ತಿ ದೊರಕಿಸಿರುವರು. ಅದರ ಮೇಲಿನ ಗುರತಿನ ಫೋಟೋ ತೆಗೆದು, ಅದನ್ನು ಸರಿಹಚ್ಚಲು ಸಾವುಕಾರನಲ್ಲಿದ್ದ ಕೆಲಸಗಾರರ ಕೈಬೆರಳಿನ ಪುಸ್ತಕವನ್ನೇ ನೋಡುವರು. ಆಗ್ಗೆ ಅದರಲ್ಲಿದ್ದ ಆರೋಪಿ ಮಧುಕರನ ಹೆಬ್ಬೆರಳಿಗೆ ಸರಿ ಹೋಗಬೇಕೆಂದೇ ಹಾಗೆ ಮಾಡಿರುವರು.

ಪ್ರ:—ಅಂದರೆ, ಆ ಕೃತಕ ಕೈಬೆರಳು ಸಿದ್ಧಮಾಡುವವರು ಮಧುಕರನ ಇನ್ನೊಂದು, ಇನ್ನೆಲ್ಲಿಯಾದರೂ ದೊರೆತ ಗುರತು ತೆಗೆದುಕೊಂಡಿದ್ದರೆ ಅದು ಪುಸ್ತಕದಲ್ಲಿನ ಗುರತಿಗೆ ಸರಿಹೋಗುತ್ತಿರಲಿಲ್ಲವೆ?

ಉ:—ಒಂದುವೇಳೆ ಅದು ಪುಸ್ತಕದಲ್ಲಿನ ಗುರತಿಗೆ ಸರಿಹೋಗದಿದ್ದರೂ ಇರಬಹುದು, ಮತ್ತು ಅಂತಹ ಸಂದರ್ಭದಲ್ಲಿ ನಿಜವಾದ ಮನುಷ್ಯನನ್ನರಸುವುದು ತೊಂದರೆಗೆ ಕಾರಣವಾಗಬಹುದು

ಪ್ರ:—ಸುಬ್ಬಣ್ಣವರೇ, ಕೃತಕ ಕೆರಳುಗಳನ್ನು ಕುರಿತು ಇದುವರೆಗೆ ಅದೆಷ್ಟೋ ಸಂಗತಿಗಳನ್ನು ಹೇಳಿದಿರಿ; ಆದರೆ ಈಗಲೇ ನೀವು ಅಂಥದೊಂದು ಬೆರಳನ್ನು ಸಿದ್ಧಮಾಡಿಕೊಡಬಲ್ಲಿರಾ?

ಉ:—ಓಹೋ! ಕೇವಲ ಹತ್ತು ನಿಮಿಷ ಸಾಕು ನನ್ನಲ್ಲಿ ಹತ್ತೆಂಟು ಕೃತಕ ಕೈಬೆರಳುಗಳಿವೆ. ಅವು ಮಧುಕರನ ಬಲಗೈ ಹೆಬ್ಬೆರಳಿನವೇ. ಅವುಗಳಿಂದಲೇ ಸಾಕೆನಿಸಿದಲ್ಲಿ ಬಿಡಬಹುದು; ಇಲ್ಲವಾದರೆ ಈಗ ನಾನೊಂದನ್ನು ಸಿದ್ಧಮಾಡಿಯೇ ಕೊಡುವೆನು.

ಪ್ರ:—ನಿಮ್ಮಲ್ಲಿ ಸಿದ್ಧವಾದ ಬೆರಳುಗಳಿವೆಯೆ?

ಉ:—ಅಹುದು; ಇವೆ.

ಹೀಗೆ ಹೇಳಿ ಸುಬ್ಬಣ್ಣನವರು ತಮ್ಮ ಜೇಬಿನಿಂದ ಹತ್ತೆಂಟು ರಬ್ಬರಿನ ತುಣುಕುಗಳನ್ನು ತೆಗೆದರು. ಅವೆಲ್ಲವೂ ಬೆರಳಿನ ಮೇಲೆ ಹಾಕುವ ಟೊಪ್ಪಿಗೆಗಳಂತಿದ್ದವು ಮೇಲ್ಬದಿಗೆ ಬೆರಳುಗಳಲ್ಲಿರುವಂತೆ ಗೆರೆಗಳಿದ್ದವು. ಹಾಗೆಯೇ ಒಂದು ಕಾಜಿನ ಸೀಸೆಯನ್ನು ತೆಗೆದರು.

ಪ್ರ:— ಇವೂ ಕೃತಕ ಕೈಬೆರಳುಗಳೇ ಏನು?

ಉ:—ಅಹುದು. ಕೃತಕವಾಗಿ ಸಿದ್ಧಮಾಡಿದುವು ಮಧುಕರನ ಬಲಗೈ ಹೆಬ್ಬೆರಳಿನವೇ ಇರುತ್ತವೆ, ಮತ್ತು ಇದು ರಬ್ಬರಿನ ಮಿಶ್ರಣ.

ಪ್ರ:— ರಬ್ಬರಿನ ಮಿಶ್ರಣವೆ? ಉ:—ಅಹುದು.

ಪ್ರ:— ಅಂದರೆ ಅದೇನು?

ಉ:—ರಬ್ಬರು ಶುದ್ಧಮಾಡಿ ಅದರಲ್ಲಿ ಕೆಲವು ರಸಾಯನಿಕ ಸಾಮಾನುಗಳನ್ನು ಕೆಲ ಪ್ರಮಾಣದಲ್ಲಿ ಹಾಕಬೇಕಾಗುತ್ತದೆ. ಆ ಮಿಶ್ರಣಗಳ ಹೆಸರು ಮತ್ತು ಪ್ರಮಾಣಗಳನ್ನು ಜಾಹೀರ ರೀತಿಯಿಂದ ಹೇಳುವುದು ಯೋಗ್ಯವಾಗಲಿಕ್ಕಿಲ್ಲ ಬೇಕೆಂದರೆ ಕೋರ್ಟಿಗೆ ಬರೆದು ಕೊಡುವೆನು.

ಪ್ರ:— ಇದರ ಉಪಯೋಗವೇನು?

ಉ:—ಮಸಿಯಿಂದ ಒತ್ತಿದ ಯಾವದೊಂದು ಗುರತಿನ ಕಾಗದವನ್ನು ಬಿಸಿಲಲ್ಲಿ ಹಿಡಿದು ಕೆಳಗೆ ಒಂದು ಕಟ್ಟಿಗೆಯ ತುಣುಕಿನ ಮೇಲೆ ಈ ರಸಾಯನವನ್ನು ಹರವಬೇಕು. ಗುರತಿನಲ್ಲಿ ಮಸಿಯು ಮೂಡಿದ ಭಾಗಕ್ಕಿಂತಲೂ ಬೆಳಕಿನ ಮೇಲೆ ಗೆರೆಗಳಿದ್ದ ಭಾಗದಿಂದ ಸೂರ್ಯರಶ್ಮಿಯು ಹೆಚ್ಚು ಬೀಳುವ ಮೂಲಕ ಕೆಳಗಿನ ಆ ಭಾಗದ ರಸಾಯನವು ಉಳಿದ ಭಾಗಕ್ಕಿಂತ ಬೇಗ ಒಣಗುತ್ತದೆ. ಎಡಬಲದ ಭಾಗವಿನ್ನೂ ಒಣಗದಿರುವ ಮೂಲಕ ನಡುವಿನ ಭಾಗವು ನೀರಿಗೆಗಟ್ಟುತ್ತದೆ ಅದಕ್ಕೆ ಮಸಿ ಹಚ್ಚುವ ಸಮಯದಲ್ಲಿ ಒಣಗಿದ ಆ ಭಾಗಕ್ಕೆ ಮಸಿ ಹತ್ತದೆ ಬೆರಳು ಮೂಡಿಸಿದಂತೆಯೇ ಆಗುತ್ತದೆ. ಇದು ಹೇಳುವುದರಿಂದ ಅಷ್ಟು ಚನ್ನಾಗಿ ತಿಳಿದು ಬರಲಿಕ್ಕಿಲ್ಲ; ಆದರೆ ಮಾಡಿದಾಗ ಮಾತ್ರ ನಿಜಾಂಶ ತಿಳಿಯುಬರುವುದು.

ಸುಬ್ಬಣ್ಣನವರ ಹೇಳಿಕೆ ಮುಗಿಯಿತು. ಮುಕುಂದರಾಯನು ರೀಕ್ರಾಸ್ ಮಾಡಹುದೆಂದರು; ಆದರೆ ಅವನಿಗೆ ಕೇಳಲು ಉಳಿದಿದ್ದಿತೇನು? ಸುಬ್ಬಣ್ಣನವರ ಅಗಾಧ ಚಾತುರ್ಯದ ಕಲ್ಪನೆ ಅಲ್ಪವಾದರೂ ಇದ್ದುದಾಗಿದ್ದರೆ ಅವನು ಕಿಂಚಿತ್ತಾದರೂ ಮುಂಜಾಗ್ರತೆ ವಹಿಸಬಹುದಿತ್ತು. ಸುಬ್ಬಣ್ಣನವರು ಇಂದು ಏನೋ ಆಶ್ಚರ್ಯವನ್ನೇ ತೋರಿಸಲಿದ್ದರೆಂಬದನ್ನು ಎಲ್ಲರೂ ಅರಿತಿದ್ದರು, ಆದರೆ ಇಷ್ಟು ಸಪ್ರಮಾಣವಾಗಿ ಸಿದ್ಧಮಾಡಬಹುದೆಂದೆಣಿಸಿರಲಿಲ್ಲ.

ಯಾರಿಗೂ ಏನೂ ಅವಕಾಶವೇ ಸಿಕ್ಕಲಿಲ್ಲ. ಎಲ್ಲರೂ ಮಧುಕರನು ಬಿಡುಗಡೆ ಹೊಂದುವನೆಂದು ನಂಬಿಬಿಟ್ಟರು. ಕೃಷ್ಣರಾಯನು ತನ್ನ ಅಂತ್ಯಕಾಲ ಸಮೀಪಿಸಿತೆಂದು ತಿಳಿದನು.

ಮುಕುಂದರಾಯನು ಮತ್ತೆ ಎದ್ದು ಕೆಲ ಹರಕ-ಮುರಕ ಮುದ್ದೆಗಳನ್ನು ಮುಂದಿಟ್ಟನು. ಆ ವಿಚಾರಗಳು ಸ್ವತಃ ಅವನಿಗೇ ಸಮ್ಮತವಿದ್ದವೋ ಇಲ್ಲವೊ ಅನ್ನುವುದೂ ಸಂಶಯಾಸ್ಪದವೇ ಆಗಿದ್ದಿತು. ಅಂದಮೇಲೆ ಅವು ಜ್ಯೂರೀ ಜನರಿಗಾಗಲಿ, ನ್ಯಾಯಾಧೀಶನಿಗಾಗಲಿ ಹೇಗೆ ಸಮ್ಮತವಾಗಬೇಕು? ಕೃಷ್ಣರಾಯನು ಪೂರ್ಣ ನಿರಾಶನಾದನು. ಎಲ್ಲರೂ ಸುಬ್ಬಣ್ಣವರ ಚಾತುರ್ಯವನ್ನು ಹೊಗಳುತ್ತಿದ್ದರು.

ನ್ಯಾಯಾಧೀಶನು ಜ್ಯೂರೀ ಜನರ ಮತ ಕೇಳುವುದಕ್ಕೆಂದು ಎದ್ದು ನಿಂತು, ಮೊದಲಿನಿಂದ ಕೊನೆಯವರೆಗಿನ ಹೇಳಿಕೆ-ಕೇಳಿಕೆಗಳ ಸಾರಾಂಶವನ್ನು ಸ್ವಲ್ಪದರಲ್ಲಿ ಅವರಿಗೆ ತಿಳಿಹೇಳಿ ಚನ್ನಾಗಿ ವಿಚಾರಿಸಿ ಮತ ಕೊಡುವಂತೆ ಕೇಳಿದನು.

ಜ್ಯೂರೀ ಜನರು ವಿಚಾರಿಸುವ ಗೊಂದಲಕ್ಕೆ ತೊಡಗದೆ, ಮಧುಕರನು ನಿರ್ದೋಷಿ ಎಂದು ಒಮ್ಮತದಿಂದ ತೀರ್ಪುಕೊಟ್ಟರು.

ನ್ಯಾಯಮೂರ್ತಿಯಾದರೂ ಸುಬ್ಬಣ್ಣವರನ್ನು ಬಹಳವಾಗಿ ಹೊಗಳಿ ಮಧುಕರನು ನಿರ್ದೋಷಿಯೆಂದು ತೀರ್ಪು ಕೊಟ್ಟುಬಿಟ್ಟನು.

ಮಧುಕರನು ಬಿಡುಗಡೆ ಹೊಂದಿದನು.

---

## ಉಪಸಂಹಾರ.

ಈ ಕತೆ ಮುಗಿಯಿತು. ಇನ್ನುಳಿದ ಸಂಗತಿಯನ್ನು ಸ್ವಲ್ಪದರಲ್ಲಿ ನಿವೇದಿಸಿ ಬಿಟ್ಟರೆ ಆಯಿತು. ಅದಾದರೂ ಅತ್ಯಲ್ಪವಿದೆ.

ಮಧುಕರನು ಬಿಡುಗಡೆ ಹೊಂದಿ ಶ್ರೀನಿವಾಸರಾಯರ ಆರೇಳು ಲಕ್ಷದ ಆಸ್ತಿಗೆ ಒಡೆಯನಾದನು; ಆದರೂ ಉದಾಸಭಾವದಿಂದಲೇ ಇದ್ದನು. ಸುಬ್ಬಣ್ಣವರು ಅದರ ಕಾರಣವನ್ನರಿತಿದ್ದರು. ಅವರು ಮೊದಲೇ ಯೋಚಿಸಿದ್ದಂತೆ ಮಧುಕರನಿಗೂ ಸರಳಾಕುಮಾರಿಗೂ ಭೇಟಿಮಾಡಿಸಿದರು. ಇಬ್ಬರ ಮನವೂ ಕೂಡಿಹೋಯಿತು. ಬೇಗನೆ ಮದುವೆಯೂ ಆಗಲಿದೆ.

ಒಂದು ದಿನ ಸುಬ್ಬಣ್ಣವರು 'ಉಪಹಾಸಕ್ಕೆಂದು ಮಧುಕರನಿಗೆ:— ಏನಪ್ಪಾಮಧುಕರ, ಹಿಮಾಲಯಕ್ಕೆ ಹೊರಡುವುದು ಎಂದು? ಎಂದು ಕೇಳಿದರು. ಮಧುಕರನು ಸಮೀಪದಲ್ಲಿಯೆ ಇದ್ದ ಸರಳಾಕುಮಾರಿಯ ಕಮನೀಯ ಮುಖವನ್ನು ನೋಡಿ ನಕ್ಕನು.

'ನೋಡಮ್ಮಾ ಸರಳಕ್ಕಾ, ಮತ್ತೆ ಮಧುಕರರಾಯರು ತಮ್ಮ ಸಂಪತ್ತಿಯೆಲ್ಲವನ್ನೂ ಪರಹಿತಕ್ಕೆಂದೇ ಅರ್ಪಿಸಲಿರುವರು, ಎಂದು ಸರಳಾಕುಮಾರಿಗೆ ನುಡಿಯಲು, ಆಕೆಯು:-ಅಜ್ಜಾ, ಜಗತ್ತಿನಲ್ಲಿ ನಾವು ಮಾಡುವುದೆಲ್ಲವೂ ಪರಹಿತಕ್ಕೇ ಅಲ್ಲವೆ? ಅಂದುಬಿಟ್ಟಳು.

ಹೀಗೆ ಒಳ್ಳೇ ಆನಂದವಾಗಿ ಕಾಲವು ಕಳೆಯುತ್ತಲಿದ್ದಿತು

ಕೃಷ್ಣರಾಯ ಮೊದಲಾದ ಕೊಲೆಯ ಆರೋಪಿಗಳಿಗೆ, ಹಾಗೆಯೇ ಜೂಜಿನ ಆರೋಪಿಗಳಿಗೆ ಯೋಗ್ಯ ಶಿಕ್ಷೆಯಾಯಿತು.

ಮಾಟದ ಮನೆಯನ್ನು ಸರಕಾರ್ರದವರು ತಮ್ಮ ವಶಕ್ಕೇನೆ ತಕ್ಕೊಂಡರು

ಮಧುಕರನು ತನಗೆ ದೊರೆತ ಸಂಪತ್ತಿಯಲ್ಲಿನ ಒಂದು ಲಕ್ಷರೂಪಾಯಿ ಸುಬ್ಬಣ್ಣವರಿಗಿತ್ತನು. ಹಾಗೆಯೇ ಕುಸುಮಪುರದರಸೂ ಕೂಡ ಸುಬ್ಬಣ್ಣವರನ್ನು ವಿಶೇಷವಾಗಿ ಸನ್ಮಾನಿಸಿದನು.

ಓದುಗ ಮಹಾಶಯ, ಇದು ತುಬ್ಬುಗಾರ ಸುಬ್ಬಣ್ಣವರ ತುಬ್ಬುಗಳಲ್ಲಿ ಎರಡನೆಯದು. ಇನ್ನಾವಾಗಲಾದರೂ ಸಮಯ ದೊರೆತರೆ ಮತ್ತೆ ತಮ್ಮ ಸೇವೆಗೆ ತಪ್ಪದೆ ಬಂದು ನಿಲ್ಲುವೆನು.

||ಮಂಗಳಂ||

---

— ಮುಗಿದುದು. —